ನೆಮ್ಮದಿಯ ನಾಳೆ ನಮ್ಮದು

# ಹೊಸತು

ISSN 2319-7307




ಡಿಸೆಂಬರ್ ೨೦೧೮

ಬೆಲೆ : ₹೨೫



ಮೈಸೂರು ಸಂಸ್ಥಾನದಲ್ಲಿ ಮೀಸಲಾತಿ (ಮಿಲ್ಲರ್ ಸಮಿತಿ)ಗೆ ನೂರು ವರ್ಷ

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು** : ಕಮಲಂ ಅರಸು, ಗೋಪಿ ಹಿರೇಬೆಟ್ಟು
ಜಿ. ಎಂ. ಬೊಮ್ನಳ್ಳಿ, ರಾಂಚಂದ್ರ ಕೊಪ್ಪಲು

**ಮುಖಪುಟ** : ಕರ್ನಾಟಕದಲ್ಲಿ ಮೀಸಲಾತಿ ಹರಿಕಾರ ನಾಲ್ವಡಿ ಕೃಷ್ಣರಾಜ ಒಡೆಯರ್

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು

ಬ್ರಿಟನ್ನಿನ ರಾಜಧಾನಿ ಲಂಡನ್ನಿನಿಂದ ಪ್ರಕಟವಾಗುವ 'ದಿ ಎಕಾನಮಿಸ್ಟ್' ನಿಯತಕಾಲಿಕೆ ಬಂಡವಾಳಶಾಹಿ ಜಗತ್ತಿನಲ್ಲಿ ಪ್ರತಿಷ್ಠಿತವಾದದ್ದು. ಆಗಾಗ ವಿಶೇಷ ಪುರವಣಿಗಳನ್ನು ಹೊರತರುವುದು ಅದರ ವೈಶಿಷ್ಟ್ಯ. ಪ್ರತಿ ಸಂಚಿಕೆಯಲ್ಲೂ ಪ್ರಮುಖ ರಾಷ್ಟ್ರಗಳ ಕುರಿತು ವಿದ್ಯಮಾನಗಳ ವಿಶ್ಲೇಷಣೆ ಇರುತ್ತದೆ. ಭಾರತವನ್ನು ಕುರಿತಾಗಿ ಹಲವು ಲೇಖನಗಳು ಪ್ರಕಟವಾಗಿವೆ. ೨೦೧೯ ಅಕ್ಟೋಬರ್‌ನಲ್ಲಿ ನಿಯತಕಾಲಿಕೆ ಭಾರತದ ವಿದ್ಯಮಾನಗಳು ಹಾಗೂ ಮೋದಿ ಆಡಳಿತ ವೈಖರಿ ಕುರಿತು ೧೨ ಪುಟಗಳ ವಿಶೇಷ ಸಂಚಿಕೆಯೊಂದನ್ನು ಪ್ರಕಟಿಸಿದೆ.

ಇಂಡಿಯನ್ ಡೈಲಮಾ, ಮ್ಯಾನ್‌ವಿತ್‌ಎಮಿಷನ್, ವಿದೇಶಾಂಗ ನೀತಿ, ಆರ್ಥಿಕ ಸಮಸ್ಯೆಗಳು, ದೀ ಬಿಗ್ ಚಾಲೆಂಜಸ್, ಭವಿಷ್ಯ, ಹೀಗೆ ವಿವಿಧ ವಿಷಯಗಳನ್ನಾವರಿಸಿರುವ ಈ ಪುರವಣಿಯ ಶೀರ್ಷಿಕೆ 'ದಿ ಟು ಮೋದೀಸ್' ಕನ್ನಡದಲ್ಲಿ 'ಮೋದಿಯ ಎರಡು ಮುಖ' ಎನ್ನಬಹುದು. ಸಂದರ್ಭಕ್ಕೆ ತಕ್ಕಹಾಗೆ ಮಾತಾಡಬಲ್ಲ ಚತುರತೆ ಹೊಂದಿರುವ ಪ್ರಧಾನಿ ಮೋದಿ ಭಾರತದ ಜನಸಾಮಾನ್ಯರಲ್ಲಿ ಭ್ರಮೆ ಹುಟ್ಟುಹಾಕುವ ಸಾಮರ್ಥ್ಯ ಹೊಂದಿದ್ದಾರೆ, ಎಂಬುದನ್ನು ಪತ್ರಿಕೆ ಒತ್ತಿ ಹೇಳಿದೆ ಉದಾಹರಣೆಗಳ ಸಮೇತ.

ಗುಜರಾತಿನ ಕಿರಾಣಿ ಅಂಗಡಿ ಮಾಲಿಕರ ಕುಟುಂಬದಲ್ಲಿ ಜನಿಸಿದ ಮೋದಿ ಆರೆಸ್ಸೆಸ್ ಪ್ರಚಾರಕನಾಗಿ ಮೇಲೆ ಬಂದವರು, ಕಟ್ಟಾ ಹಿಂದುತ್ವವಾದಿ, ತೀವ್ರ ಬಲಪಂಥೀಯ. ಚತುರೋಕ್ತಿಗಳಲ್ಲಿ ನೈಪುಣ್ಯತೆ ಸಾಧಿಸಿರುವ ಈತ ಜನರನ್ನು ಮರುಳು ಮಾಡಬಲ್ಲ. 'ಹಾರ್ಡ್‌ವರ್ಕ್ ಈಸ್ ಸ್ಟ್ರಾಂಗರ್ ದ್ಯಾನ್ ಹಾರ್ವರ್ಡ್', 'ನಾಮ್ದಾರ್ – ಕಾಮ್‌ದಾರ್', 'ಕನಿಷ್ಠ ಸರಕಾರ – ಗರಿಷ್ಠ ಆಡಳಿತ', 'ಸಬ್ ಕಾ ಸಾಥ್ – ಸಬ್ ಕಾ ವಿಕಾಸ್' ಮುಂತಾದ ಉದಾಹರಣೆಗಳನ್ನು ನೀಡಲಾಗಿದೆ. ಹತ್ತಾರು ಕಾರ್ಯಕ್ರಮಗಳನ್ನು ಪ್ರಾರಂಭಿಸಿರುವ ಮೋದಿ ಸರಕಾರ ಯಾವುದರಲ್ಲೂ ಯಶಸ್ವಿಯಾಗಿಲ್ಲ ಎಂಬುದಾಗಿ ದಿ ಎಕಾನಮಿಸ್ಟ್ ವಿಶೇಷ ಸಂಚಿಕೆಯು ಹೇಳಿದೆ. ವ್ಯಂಗ್ಯ ವಿಡಂಬನೆಗಳಿಂದ ಕೂಡಿರುವ ಲೇಖನಗಳು ಗುಜರಾತಿನಲ್ಲಿ ೨೦೦೨ರಲ್ಲಿ ನಡೆದ ಮಾರಣಹೋಮದಲ್ಲಿ ೨೦೦೦ಕ್ಕೂ ಹೆಚ್ಚು ಮಂದಿ ಸಾವಿಗೀಡಾದ್ದನ್ನು ಪ್ರಸ್ತಾಪಿಸಿ, ಇವರ ಪೈಕಿ ಮುಸಲ್ಮಾನರೇ ಅಧಿಕ ಎಂದು ಹೇಳಿದೆ. ಮೋದಿ ಸರಕಾರದ ಮೊದಲ ಐದು ವರ್ಷಗಳು ದೇಶದಲ್ಲಿ ಹೇಳಿಕೊಳ್ಳುವಂಥ ಬದಲಾವಣೆಗಳೇನೂ ಸಂಭವಿಸಲಿಲ್ಲ. ಅಧಿಕಾರದ ಕೇಂದ್ರೀಕರಣ, ಪ್ರಧಾನಿ ಕಚೇರಿಯ ಬಲಪಡಿಕೆ ಬಿಟ್ಟರೆ ಬೇರೇನಾಗಿಲ್ಲ. ಪ್ರಧಾನಿ ಕಚೇರಿಯಲ್ಲೇ ಅತಿ ದೊಡ್ಡ ಬದಲಾವಣೆ ಬಂದಿತು. ಪತ್ರಿಕಾ ಸಮ್ಮೇಳನಗಳನ್ನು ದೂರ ಇರಿಸಿ, ನೇರವಾಗಿ ಮತದಾರರನ್ನೇ ಸಂಪರ್ಕಿಸುವುದಕ್ಕಾಗಿ ಮೋದಿ ರೇಡಿಯೋ ಭಾಷಣಗಳು, ಟ್ವೀಟ್‌ಗಳು ಹಾಗೂ 'ನಮೋ ಆಪ್' ಮೊದಲಾದವನ್ನು ಬಳಸಿಕೊಂಡರು. 'ತಮ್ಮ ಅಧಿಕಾರಾವಧಿಯಲ್ಲಿ ಅಧ್ಯಕ್ಷೀಯ ವ್ಯವಸ್ಥೆಯ ಪಾತ್ರ ಜಾರಿಗೆ ತಂದು ದುರ್ಬಲ ಸಚಿವರುಗಳನ್ನು ನೇಮಕ ಮಾಡಿಕೊಂಡಿದ್ದಾರೆ' ಎಂದು ಪತ್ರಿಕೆ ಹೇಳಿದೆ.

ವಿದೇಶೀ ನೀತಿಯು ಜಾಗರೂಕತೆಯಿಂದ ಕೂಡಿದ್ದು ಶಿಥಿಲವಾಗಿದೆ, ಅಬ್ಬರದ ಪ್ರಚಾರವೇ ಹೊರತು ಬೇರೇನಿಲ್ಲ ಎಂದು ಪತ್ರಿಕೆ ಹೇಳಿದೆ. ಮೋದಿ ಆಡಳಿತದಲ್ಲಿ ಹಿಂದೂ ಬಹುಸಂಖ್ಯಾತರು ಮೇಲುಗೈ ಸಾಧಿಸಿರುವುದನ್ನು ಉದಾಹರಣೆಗಳ ಸಮೇತ ತಿಳಿಸಿದೆ. 'ಮೋದಿ ಆಡಳಿತಾವಧಿಯಲ್ಲಿ ಸಂವಿಧಾನ ರೀತ್ಯ ಸ್ಥಾಪಿತ ಸ್ವಾಯತ್ತ ಸಂಸ್ಥೆಗಳು ಶಿಥಿಲಗೊಂಡಿವೆ. ಉನ್ನತ ಸ್ಥಾನಗಳಲ್ಲಿ ತಮ್ಮ ಆಡಳಿತದ ಪರ ಇರುವವರನ್ನೇ ಮೋದಿ ನೇಮಕ ಮಾಡಿಕೊಂಡಿದ್ದಾರೆ.' ಅಭಿವೃದ್ಧಿಯ ಹೆಸರಿನಲ್ಲಿ ಅಧಿಕಾರಕ್ಕೇರಿದ ಮೋದಿ ಸರಕಾರ ಇಂದು ಆರ್ಥಿಕ ಸಂಕಷ್ಟವನ್ನು ಎದುರಿಸುತ್ತಿದೆ. 'ಎಕಾನಮಿಸ್ಟ್' ಪುರವಣಿ ಹೀಗೆ ಮೋದಿ ಆಡಳಿತದ ವೈಖರಿಯನ್ನು ಜಾಲಾಡಿದೆ. ದಲಿತರ, ಅಲ್ಪಸಂಖ್ಯಾತರ ಸ್ಥಿತಿ ಮತ್ತಷ್ಟು ಹದಗೆಟ್ಟಿದೆ. ಹಿಂದೂಗಳ ಪ್ರಾಬಲ್ಯ ಮೆರೆಯುತ್ತಿದೆ ಎಂದ ನಿಯತಕಾಲಿಕೆ ಒತ್ತಿ ಹೇಳಿದೆ.

✶ ✶ ✶

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೨೧ ಸಂಚಿಕೆ–೫ ಡಿಸೆಂಬರ್ ೨೦೧೯

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಹೈರಾಣಾದ ಸಂಸದೀಯ ಪ್ರಜಾಪ್ರಭುತ್ವ

ವಿಶ್ವದ ಅತಿದೊಡ್ಡ ಪ್ರಜಾಪ್ರಭುತ್ವ ವ್ಯವಸ್ಥೆ ಎಂದು ನಾವು ಹೆಮ್ಮೆಯಿಂದ ಹೇಳುತ್ತಿರುವ ನಮ್ಮ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಆ ಹೆಮ್ಮೆಯನ್ನು ಉಳಿಸಿಕೊಂಡಿದೆಯೇ? ಎಂಬ ಪ್ರಶ್ನೆ ಇಂದು ಪ್ರಜ್ಞಾವಂತರನ್ನು ಕಾಡುತ್ತಿದೆ. 'ಜನರಿಂದ ಜನರಿಗಾಗಿ ಜನರಿಗೋಸ್ಕರ' ಎಂಬ ಪ್ರಖ್ಯಾತ ವ್ಯಾಖ್ಯಾನವನ್ನು ಇಂದು ಭಾರತದ ಪ್ರಜಾಪ್ರಭುತ್ವ ಸಮರ್ಥಿಸುತ್ತಿದೆಯೇ ಎಂದು ಪ್ರಶ್ನಿಸಿಕೊಳ್ಳುವ ಕಾಲ ಎದುರಾಗಿದೆ. ಭಾರತದಂಥ ವಿಶಾಲ, ವೈವಿಧ್ಯಮಯ ದೇಶಕ್ಕೆ ಒಂದು ಚುನಾವಣೆಯನ್ನು ನಡೆಸುವುದು ಸಾಮಾನ್ಯ ಕೆಲಸವಲ್ಲ ಎನ್ನುವುದು ಸತ್ಯ. ಅದೇ ಸಂದರ್ಭದಲ್ಲಿ ಒಂದು ದೇಶದ ಪ್ರಜಾಸತ್ತೆಯ ಆಶಯಗಳನ್ನು ಪೂರೈಸಲು ನಡೆದ ಚುನಾವಣೆಗಳು ನಮ್ಮ ಸಂವಿಧಾನದ ನಿರ್ದೇಶನದಂತೆ ನಡೆಯುತ್ತಿವೆಯೇ? ಇದು ನಿಜಾರ್ಥದಲ್ಲಿ ಪ್ರಜಾಪ್ರಭುತ್ವವೇ? ಜನ ಮತ ನೀಡಿದಾಕ್ಷಣ ಅದು ಪ್ರಜಾಪ್ರಭುತ್ವವೇ? ಇಂದು ಚುನಾವಣೆಯ ಮೂಲಕವೇ ಜನಾದೇಶ ಪಡೆದು ನಮ್ಮ ಸಂಸದೀಯ ವ್ಯವಸ್ಥೆಯಲ್ಲಿ ದೇಶದ ಜನರನ್ನು ಪ್ರತಿನಿಧಿಸುತ್ತಿರುವ ಪ್ರಜಾಪ್ರತಿನಿಧಿಗಳು ಮತ್ತು ರಾಜಕೀಯ ಪಕ್ಷಗಳ ವಿಶ್ಲೇಷಣೆ, ವಿಮರ್ಶೆ ಮಾಡಿದರೆ ಈ ವಾಸ್ತವ ಅರ್ಥವಾಗುತ್ತದೆ.

'ಭಾರತದ ಪ್ರಜೆಗಳಾದ ನಾವು' ೧೯೫೦ರಲ್ಲಿ ಸಂವಿಧಾನವನ್ನು ನಮಗೆ ನಾವೇ ಅರ್ಪಿಸಿಕೊಂಡಾಗ ಸುಂದರ, ಸ್ವಾವಲಂಬಿ, ಸಮಾನ, ಜಾತ್ಯತೀತ ಸಮಾಜ ನಿರ್ಮಾಣದ ಕನಸು ಕಂಡಿದ್ದೆವು. ಅಂಥ ಕನಸುಗಳ ಈಡೇರಿಕೆಗಾಗಿ ನಮ್ಮ ದೇಶಕ್ಕೆ 'ಸಂಸದೀಯ ಪ್ರಜಾಪ್ರಭುತ್ವ' ವ್ಯವಸ್ಥೆಯನ್ನು ಆಯ್ಕೆ ಮಾಡಿಕೊಂಡೆವು. ಅದರ ಸಾಕಾರಕ್ಕಾಗಿ ಒಂದು ಚುನಾವಣಾ ವ್ಯವಸ್ಥೆಯನ್ನು ರೂಪಿಸಿಕೊಂಡು ೧೯೫೧ರಲ್ಲಿ 'ಜನತಾ ಪ್ರಾತಿನಿಧ್ಯ ಕಾನೂನನ್ನೂ' ಅಂಗೀಕರಿಸಿದೆವು. ಅದಕ್ಕಾಗಿ ಒಂದು ಸ್ವಾಯತ್ತ ಸಂಸ್ಥೆಯಾಗಿ ಚುನಾವಣಾ ಆಯೋಗವೂ ರೂಪುಗೊಂಡಿತು. ಸಂವಿಧಾನದ ೧೫ನೇ ಭಾಗ, ಅನುಚ್ಛೇದ ೩೨೪ರಿಂದ ೩೨೯ರವರೆಗಿನ ನೀತಿ ನಿಯಮಗಳ ಪ್ರಕಾರ ಚುನಾವಣಾ ಪ್ರಕ್ರಿಯೆಗಳು ಆರಂಭವಾದವು. ಈ ಚುನಾವಣೆಗಳ 'ಅಧೀಕ್ಷಣೆ, ನಿರ್ದೇಶನ, ನಿಯಂತ್ರಣ'ವನ್ನು ಚುನಾವಣಾ ಆಯೋಗ ಮಾಡುತ್ತಿದೆ. ಸಂವಿಧಾನದ ಆಶಯಗಳಿಗೆ ಪೂರಕವಾಗಿ 'ಜನತಾ ಪ್ರಾತಿನಿಧ್ಯ ಕಾನೂನಿ'ನ ಅಡಿಯಲ್ಲಿ ಭಾರತದ ಮೊದಲ ಚುನಾವಣೆಯಿಂದ ಇಂದಿನವರೆಗೂ ಚುನಾವಣೆಗಳು ನಿಯಮಿತವಾಗಿ ನಡೆಯುತ್ತಿವೆ. ಒಂದು ಸಂಸದೀಯ ಪ್ರಜಾಸತ್ತೆಯ ಮುಂದುವರಿಕೆಗಾಗಿ ವಿವಿಧ ಹಂತಗಳ ಚುನಾವಣೆಗಳು ಅತ್ಯಂತ ಮಹತ್ವದ ಪಾತ್ರ ವಹಿಸುತ್ತವೆ. ನಮ್ಮ ದೇಶದಲ್ಲಿ ಚುನಾವಣೆಗಳು ನಡೆಯುತ್ತಿವೆ. ಆದರೆ ಅವು ನಮ್ಮ ಸಂವಿಧಾನದ, ಜನತೆಯ ಆಶಯಗಳನ್ನು ನೈಜವಾಗಿ ಈಡೇರಿಸುತ್ತಿವೆಯೋ ಎಂಬುದು ಇಂದಿನ ಮುಖ್ಯ ಪ್ರಶ್ನೆ.

ಇಂದು ನಮ್ಮ ಚುನಾವಣಾ ಪದ್ಧತಿಯ ಬಗೆಗೇ ತಕರಾರುಗಳು, ಭಿನ್ನಮತಗಳು ವ್ಯಾಪಕವಾಗಿ ಆರಂಭವಾಗಿವೆ. ಮುಖ್ಯವಾಗಿ ಮುಕ್ತ, ಪಾರದರ್ಶಕ ಚುನಾವಣೆಗಳು ನಡೆಯುವುದು ಒಂದಾದರೆ, ಜನತಾ ಪ್ರಾತಿನಿಧ್ಯ ಕಾನೂನಿನ ಪ್ರಕಾರ ಜಾತಿ, ಧರ್ಮ, ಭ್ರಷ್ಟಾಚಾರ, ಆಮಿಷ, ಸ್ವಜನ ಪಕ್ಷಪಾತ ಅಪರಾಧ ಮುಕ್ತವಾದ ಚುನಾವಣೆ ನಡೆಯಬೇಕು. ಆ ರೀತಿ ಇಂದು ನಡೆಯುತ್ತಿದೆಯೇ? ಎಂಬುದನ್ನು ನೋಡಿದಾಗ ತೀರ ನಿರಾಶೆಯಾಗುತ್ತದೆ. ಮೊದಲನೆಯದಾಗಿ ಈಗ ಅನುಸರಿಸುತ್ತಿರುವ ಚುನಾವಣಾ ಪದ್ಧತಿ ಹೆಚ್ಚು ಮತ ಪಡೆದವರ ಗೆಲುವು (ಎಫ್‌ಪಿಟಿಪಿ) ಎಂದು ಪರಿಗಣಿಸುತ್ತಿದೆ. ವಾಸ್ತವದಲ್ಲಿ ಈ ಪದ್ಧತಿ ಒಟ್ಟು ಮತಗಳಲ್ಲಿ ಅಥವಾ ಚಲಾವಣೆಯಾದ ಮತಗಳಲ್ಲಿ ಕಡಿಮೆ ಮತ ಪಡೆದವರಿಗೆ ಆಯ್ಕೆಯ ಅವಕಾಶ ಮಾಡಿಕೊಡುತ್ತಿದೆ. ಆಯ್ಕೆಯಾದ ಸ್ಪರ್ಧಿ ಪಡೆದ ಮತಗಳಿಗಿಂತ ವಿರೋಧಿಗಳಿಗೆ ಹಂಚಿಹೋದ ಮತಗಳ ಸಂಖ್ಯೆಯೇ ಹೆಚ್ಚಿರುವುದರಿಂದ ಬಹುತೇಕ ಮತ ಕ್ಷೇತ್ರಗಳಲ್ಲಿ ಅಲ್ಪ ಸಂಖ್ಯೆಯ ಮತ ಪಡೆದವರೇ ಜನತೆಯ ಪ್ರತಿನಿಧಿಯಾಗಿ ಪ್ರಜಾಪ್ರತಿನಿಧಿ ವೇದಿಕೆಗಳನ್ನು ಪ್ರವೇಶಿಸುತ್ತಾರೆ. ನಮ್ಮ ದೇಶದಲ್ಲಿ ಸುಮಾರು ೧೨೦೦ರಷ್ಟು ರಾಜಕೀಯ ಪಕ್ಷಗಳು ನೋಂದಣಿಯಾದರೂ ಸುಮಾರು ೧೫೦ರಷ್ಟು ರಾಜಕೀಯ ಪಕ್ಷಗಳು ಮಾತ್ರ ಕ್ರಿಯಾಶೀಲವಾಗಿವೆ. ಆದರೂ ಚುನಾವಣಾ ಪದ್ಧತಿಯ ದೋಷದಿಂದ ಕೆಲವೇ ರಾಜಕೀಯ ಪಕ್ಷಗಳು ಅಥವಾ ಕೂಟಗಳು ಆಡಳಿತ, ವಿರೋಧ ಪಕ್ಷಗಳಾಗಿ ಆಯ್ಕೆಯಾಗುತ್ತಿವೆ. ಪರಿಣಾಮವಾಗಿ ಶೇ. ೩೦ರಿಂದ ಶೇ. ೪೦ ಮತ ಪಡೆದ ಪಕ್ಷ, ಕೂಟಗಳು ಅಧಿಕಾರಕ್ಕೆ ಬರುತ್ತವೆ. ಈ ಕಾರಣದಿಂದ ಈ ಚುನಾವಣಾ ಪದ್ಧತಿಯನ್ನೇ ಬದಲಿಸಬೇಕೆಂಬ ಕೂಗು ಬಲವಾಗುತ್ತಿದೆ.

ಇದು ಹೊಸ ವಿದ್ಯಮಾನವೇನಲ್ಲ. ೧೯೩೫ರ ಕಾನೂನಿನ ಪ್ರಕಾರ ಬ್ರಿಟಿಷರು ೧೯೩೭ರಲ್ಲಿ ಭಾರತದ ವಿವಿಧ ಪ್ರಾಂತ್ಯಗಳಿಗೆ ನಡೆಸಿದ ಚುನಾವಣೆಯಲ್ಲೂ ಇದೇ ಸ್ಥಿತಿ ಇತ್ತು. ೧೯೩೧ರಲ್ಲಿ ದೇಶದ ಜನಸಂಖ್ಯೆ ೨೭೭೫೬೬೧೫೦ ಆಗಿತ್ತು. ೧೯೩೭ರ ಚುನಾವಣೆಯ ಮತದಾರರ ಸಂಖ್ಯೆ ೨೯೮೪೭೬೦೪. ಅಂದರೆ, ಒಟ್ಟು ಜನಸಂಖ್ಯೆಯ ಸುಮಾರು ಶೇ. ೧೦ ಮಾತ್ರ. ಅದರಲ್ಲಿ ೯೪೫೪೬೩೫ ಮತ ಪಡೆದ ಕಾಂಗ್ರೆಸ್ ಪ್ರಾಂತ್ಯಗಳಲ್ಲಿ ಅಧಿಕಾರಕ್ಕೆ ಬಂದಿತ್ತು. ಈ ಅನುಭವವನ್ನು ನಮ್ಮ ದೇಶಕ್ಕೆ ಒಂದು ಚುನಾವಣಾ ಪದ್ಧತಿಯನ್ನು ಆಯ್ಕೆ ಮಾಡುವಾಗ ಪರಿಗಣಿಸಬೇಕಿತ್ತು.

ಪ್ರಸ್ತುತ ಚುನಾವಣಾ ಪದ್ಧತಿಯನ್ನು ಒಪ್ಪಿಕೊಂಡರೂ ಅದನ್ನು ದುರುಪಯೋಗಪಡಿಸಿಕೊಳ್ಳುವ ಪಕ್ಷಗಳ, ಅಭ್ಯರ್ಥಿಗಳ ಸಂಖ್ಯೆ ದೊಡ್ಡದಿದೆ. ಇಂಥ ದುರುಪಯೋಗವನ್ನು ತಡೆಗಟ್ಟಲು ೧೯೬೮ರಿಂದಲೇ ವಿವಿಧ ಸಮಿತಿಗಳನ್ನು ಕಾಲಕಾಲಕ್ಕೆ ಮಾಡಲಾಗಿದೆ. ವೈ. ಬಿ. ಚವ್ಹಾಣ ಸಮಿತಿ (೧೯೬೮), ವಿ. ಎಂ. ತಾರ್ಕುಂಡೆ ಸಮಿತಿ (೧೯೭೪–೭೫), ದಿನೇಶ ಗೋಸ್ವಾಮಿ ಸಮಿತಿ (೧೯೯೦), ವಿ. ಆರ್. ಕೃಷ್ಣ ಅಯ್ಯರ್ ಸಮಿತಿ (೧೯೯೪),

ಇಂದ್ರಜಿತ್ ಗುಪ್ತ ಸಮಿತಿ (೧೯೯೮), ಕಾನೂನು ಆಯೋಗದ ವರದಿ (೧೯೯೮), ಕುಲದೀಪ್ ಸಿಂಗ್ ಸಮಿತಿ (೨೦೦೨) ಹೀಗೆ ವಿವಿಧ ಸಮಿತಿಗಳು ಇಂದಿನವರೆಗೂ ಚುನಾವಣಾ ಪದ್ಧತಿ, ವಿಧಾನಕ್ಕೆ ಶಿಫಾರಸ್ಸು ತಿದ್ದುಪಡಿ, ಸುಧಾರಣೆ, ಸಲಹೆ, ಸೂಚನೆ ಕೊಡುತ್ತಲೇ ಬಂದಿವೆ. ಬಹುತೇಕ ಸಮಿತಿಗಳು ಸಲ್ಲಿಸಿರುವ ವರದಿ ಮತ್ತು ಶಿಫಾರಸ್ಸುಗಳಲ್ಲಿ ಚುನಾವಣಾ ಅಕ್ರಮಗಳೇ ಮಹತ್ವದ ವಿಷಯಗಳು. ಜಾತಿ, ಧರ್ಮ, ಭಾಷೆ, ಪ್ರಾಂತೀಯ ಭಾವನೆಗಳನ್ನು ಚುನಾವಣೆಗೆ ಬಳಸಬಾರದು, ಅಪರಾಧಿಗಳು ಚುನಾವಣೆಗೆ ಸ್ಪರ್ಧಿಸಬಾರದು, ಮತದಾರರಿಗೆ ಆಮಿಷ ತಡೆ, ಹಣಕಾಸಿನ ಅಕ್ರಮಗಳ ತಡೆ, ಲೆಕ್ಕಪತ್ರ ಬಾಧ್ಯತೆ, ರಾಜಕೀಯ ಪಕ್ಷಗಳ ಆಂತರಿಕ ಪ್ರಜಾಪ್ರಭುತ್ವ ಪಾಲನೆ, ಪಕ್ಷಾಂತರ ನಿಷೇಧ, ಕೋಮುವಾದಿಕರಣದ ತಡೆ, ಮತದಾನದ ವಿಧಾನಗಳಲ್ಲಿ ಬದಲಾವಣೆ, ರಾಜಕೀಯ ಪಕ್ಷಗಳು ಪಡೆವ ನಿಧಿಯ ಪಾರದರ್ಶಕತೆ, ಚುನಾವಣಾ ವೆಚ್ಚದ ಮಿತಿ, ಹೀಗೆ ೧೯೫೧ರ ಜನತಾ ಪ್ರಾತಿನಿಧ್ಯ ಕಾಯ್ದೆಯನ್ನು, ಸಂವಿಧಾನದ ಆಶಯಗಳನ್ನು ಬಲಪಡಿಸಲು ಹಲವಾರು ಸಲಹೆ, ಸೂಚನೆ, ಶಿಫಾರಸ್ಸುಗಳನ್ನು ಕೊಟ್ಟಿವೆ. ಚುನಾವಣಾ ಆಯೋಗವನ್ನು ಬಲಪಡಿಸಲು, ಸ್ವತಂತ್ರವಾಗಿರಿಸಲು, ಸ್ವಾಯತ್ತತೆ ಕಾಪಾಡಿಕೊಳ್ಳಲು ನೆರವಾಗಿವೆ. ಇಂಥ ಸಮಿತಿಗಳ ಹಲವಾರು ಶಿಫಾರಸ್ಸುಗಳು ಜಾರಿಯೂ ಆಗಿವೆ. ಪ್ರಮುಖವಾಗಿ ೧೯೮೫ರಲ್ಲಿ ಸಂವಿಧಾನದ ೫೨ನೆಯ ತಿದ್ದುಪಡಿಯಾಗಿ ಪಕ್ಷಾಂತರ ನಿಷೇಧ ಕಾನೂನು ತರಲಾಯಿತು. ಅಭ್ಯರ್ಥಿಗಳ ಆಸ್ತಿ, ಅಪರಾಧ ಹಿನ್ನೆಲೆ ಕುರಿತಂತೆ ೨೦೦೨ರಲ್ಲಿ ಸುಪ್ರೀಂ ಕೋರ್ಟ್ ತೀರ್ಪಿನ ಹಿನ್ನೆಲೆಯಲ್ಲಿ ೨೦೦೩ರಲ್ಲಿ ಕಾನೂನು ಮಾಡಲಾಯಿತು. ಈ ಎಲ್ಲ ವರದಿ, ಶಿಫಾರಸ್ಸುಗಳ ಆಧಾರದಲ್ಲಿ ಚುನಾವಣಾ ಆಯೋಗ ಕಟ್ಟುನಿಟ್ಟಿನ ನೀತಿ ಸಂಹಿತೆಯನ್ನು ರೂಪಿಸಿದೆ. ಇಷ್ಟೆಲ್ಲ ಪ್ರಯತ್ನದ ನಂತರವೂ ಭಾರತದ ಚುನಾವಣಾ ವ್ಯವಸ್ಥೆ ದುರುಪಯೋಗಕ್ಕೊಳಗಾಗುತ್ತಲೇ ಇದೆ.

ಜಾತಿ, ಧರ್ಮದಂಥ ಭಾವನಾತ್ಮಕ ಸಂಗತಿಗಳು ಚುನಾವಣಾ ವಿಷಯವಾಗಬಾರದೆಂದಿದ್ದರೂ ಮಂದಿರ, ಮಸೀದಿ, ರಾಮಜನ್ಮಭೂಮಿ, ಅಯ್ಯಪ್ಪ ಸ್ವಾಮಿ, ಗೋಮಾಂಸ ಇಂಥ ಹಲವಾರು ಭಾವನಾತ್ಮಕ ಸಂಗತಿಗಳು ಇಂದು ಚುನಾವಣೆಯ ಪ್ರಧಾನ ವಿಷಯಗಳಾಗುತ್ತಿವೆ. ಜಾತಿ ಚುನಾವಣೆಯ ಪ್ರಮುಖ ಅಸ್ತ್ರವಾಗಿದೆ. ಅಪರಾಧೀಕರಣ ತಡೆಯಲು ಕಾನೂನುಗಳೇ ಇದ್ದರೂ ಇಂದು ನಮ್ಮ ಸಂಸತ್‌ನಲ್ಲಿ ಶೇ. ೩೦ರಿಂದ ೪೦ರಷ್ಟು ಸಂಸದರು ಅಪರಾಧಗಳ ಆರೋಪ ಹೊತ್ತವರೇ ಆಯ್ಕೆಯಾಗಿದ್ದಾರೆ. ಪಕ್ಷಾಂತರ ನಿಷೇಧ ಕಾನೂನು ಇದ್ದರೂ ಇಂದು ಪಕ್ಷಾಂತರ ಬೇರೆ ರೂಪದಲ್ಲಿ ನಿರಂತರವಾಗಿ ನಡೆದಿದೆ. ಪರಿಣಾಮವಾಗಿ ಜನಪ್ರತಿನಿಧಿಗಳ ಖರೀದಿ, ಆಳುವ ಪಕ್ಷಗಳ ಪತನ, ಉಪಚುನಾವಣೆ, ಮರುಚುನಾವಣೆ ನಿತ್ಯದ ವಿದ್ಯಮಾನವಾಗಿದೆ. ಕರ್ನಾಟಕ ಇತ್ತೀಚಿನ ತಾಜಾ ಉದಾಹರಣೆ. ಚುನಾವಣಾ ಅಕ್ರಮಗಳು ನಿರಾತಂಕವಾಗಿವೆ. ಮತದಾರನಿಗೆ ಆಮಿಷ ಇಂದಿನ ಚುನಾವಣೆಗಳ ಸಾಮಾನ್ಯ ಸಂಗತಿಯಾಗಿದೆ. ಚುನಾವಣಾ ವೆಚ್ಚದ ಮಿತಿ ಇದ್ದರೂ ಗ್ರಾಮ ಪಂಚಾಯಿತಿ ಚುನಾವಣೆಗೆ ಲಕ್ಷಾಂತರ ಖರ್ಚು ಮಾಡಿದರೆ, ಸಂಸತ್ ಚುನಾವಣೆಗೆ ನೂರಾರು ಕೋಟಿ ಖರ್ಚು ಮಾಡಿದ ಉದಾಹರಣೆಗಳು ಕಣ್ಮುಂದೆಯೇ ಇವೆ.

ಇಂದ್ರಜಿತ್ ಗುಪ್ತ ಸಮಿತಿಯ ಶಿಫಾರಸ್ಸಿನಲ್ಲಿ ರಾಜಕೀಯ ಪಕ್ಷಗಳಿಗೆ ಕಾರ್ಪೊರೇಟ್ ದೇಣಿಗೆಯನ್ನು ನಿಷೇಧಿಸಲು ಹೇಳಿದ್ದರು. ಅದಕ್ಕೆ ಬಿಜೆಪಿ, ಕಾಂಗ್ರೆಸ್ ಪಕ್ಷಗಳೇ ವಿರೋಧ ವ್ಯಕ್ತಪಡಿಸಿದ್ದವು. ಇಂದ್ರಜಿತ್ ಗುಪ್ತ ಅವರು ಕಾರ್ಪೊರೇಟ್ ಕಂಪನಿಗಳು ರಾಜಕೀಯ ಪಕ್ಷಗಳಿಗೆ ದೇಣಿಗೆ ಕೊಡುವುದರ ಮೂಲಕ ಸಂಸತ್ತು, ವಿಧಾನ ಸಭೆಗಳಂಥ ಶಾಸನ ರೂಪಿಸುವ ಕೇಂದ್ರಗಳನ್ನೇ ದುರ್ಬಳಕೆ ಮಾಡಿಕೊಳ್ಳುತ್ತವೆ ಎಂದು ಆತಂಕ ವ್ಯಕ್ತಪಡಿಸಿದ್ದರು. ಇಂದು ಅಂಬಾನಿ, ಅದಾನಿಯಂಥ ಕಂಪನಿಗಳು ದೇಶ–ವಿದೇಶಿ ಕಾರ್ಪೊರೇಟ್ ಕಂಪನಿಗಳು ಅಕ್ಷರಶಃ ಸರಕಾರಗಳಿಗೆ ನಿರ್ದೇಶನಗಳನ್ನು ಕೊಡುತ್ತಿವೆ. ಕಾರ್ಪೊರೇಟ್ ಕಂಪನಿಗಳ, ಅವರ ಹಣ ಪಡೆದ ರಾಜಕೀಯ ಪಕ್ಷಗಳ, ಕೋಟ್ಯಧಿಪತಿ ಅಭ್ಯರ್ಥಿಗಳ ಕೂಟ ಇಂದು ಚುನಾವಣೆಗಳನ್ನು ವ್ಯಾಪಾರವಾಗಿಸಿದೆ. ಇಂದು ಚುನಾವಣೆಯೆನ್ನುವುದು ಕೋಟ್ಯಧಿಪತಿಗಳ ಅಖಾಡವಾಗಿ ಪರಿವರ್ತನೆಯಾಗಿ ದೇಶದ ಪ್ರಜೆ ಅನಾಥನಾಗಿದ್ದಾನೆ. ಪ್ರಜೆ ಕೇವಲ ಮತದಾರನಾಗಿದ್ದಾನೆ, ಆ ಮೂಲಕ ಸರಕೂ ಆಗಿದ್ದಾನೆ. ಅವನ ಮತವನ್ನು ಖರೀದಿಸಲಾಗುತ್ತಿದೆ. ಮತ ಖರೀದಿದಾರರೇ ತುಂಬಿರುವ ನಮ್ಮ ಜನಪ್ರತಿನಿಧಿ ವೇದಿಕೆಗಳು ಸಂವಿಧಾನದ ಆಶಯದಿಂದ ದೂರ ಸಾಗಿವೆ. ಇತ್ತೀಚೆಗೆ ಮತ ಯಂತ್ರಗಳ ಮೇಲೆ ಅನುಮಾನ ಶುರುವಾಗಿದೆ.

ನಿರೀಕ್ಷಿಸಿದ್ದ ಪ್ರಜಾಸತ್ತೆಯ ಕನಸು ನಾಶವಾಗಿದೆ. ಸಂವಿಧಾನವನ್ನೇ ಬದಲಾಯಿಸುವ ಮಾತನಾಡುವ ಇಂದಿನ ಆಡಳಿತ ಪಕ್ಷ ಬಿಜೆಪಿಯೂ ಈ ಚುನಾವಣಾ ಪದ್ಧತಿಯನ್ನು ಬದಲಾಯಿಸುವ ಗುರಿ ಹೊಂದಿದೆ. ಅಧ್ಯಕ್ಷೀಯ ಮಾದರಿ ಸರಕಾರದ ಕುರಿತು ಮಾತನಾಡುತ್ತಿದೆ. ನಮ್ಮ ಸಂವಿಧಾನವನ್ನು, ಒಕ್ಕೂಟ ವ್ಯವಸ್ಥೆಯನ್ನು ಅವರು ಯಾವತ್ತೂ ಒಪ್ಪಿಲ್ಲ. ಆರ್‌ಎಸ್‌ಎಸ್‌ನ ಗುರು, ಸಿದ್ಧಾಂತಿ ಮ. ಸ. ಗೋಳವಲಕರ ಅವರು "ನಮ್ಮ ದೇಶದ ಸಂವಿಧಾನದ ಒಕ್ಕೂಟ ಸ್ವರೂಪದ ಎಲ್ಲ ಮಾತನ್ನೂ ಆಳವಾಗಿ ಹೂಳಬೇಕು. 'ಒಂದು ದೇಶ – ಒಂದು ರಾಜ್ಯ' ಒಂದು ಶಾಸಕಾಂಗ, ಒಂದು ಕಾರ್ಯಾಂಗ ಎಂದು ಘೋಷಿಸಬೇಕು... ಏಕಾತ್ಮಕ ಸರಕಾರದ ಪದ್ಧತಿಯನ್ನು ಸ್ಥಾಪಿಸುವಂತೆ ಸಂವಿಧಾನವನ್ನು ಪುನಃ ಬರೆದಿಡೋಣ" (ಚಿಂತನಗಂಗಾ – ೧೯೫೬ರಲ್ಲಿ ಬರೆದ ಲೇಖನ) ಎಂದು ಹೇಳಿದ್ದಾರೆ. ಇದನ್ನು ನೋಡಿದರೆ ಸದ್ಯದ ಚುನಾವಣಾ ಪದ್ಧತಿಯ ವೈಫಲ್ಯಕ್ಕೆ, ವಿಫಲವಾಗಿಸಲು ಪ್ರಧಾನಿ ಮೋದಿ ಹಾಗೂ ಅವರ ಬಣ ನಿರಂತರ ಕ್ರಿಯಾಶೀಲವಾಗಿದೆ.

ವಿಶ್ವದ ಬೃಹತ್ ಪ್ರಜಾಸತ್ತೆ ಹೈರಾಣಾಗಿದೆ. ಅಪಾಯದಲ್ಲಿದೆ. ಡಾ॥ ಬಿ. ಆರ್. ಅಂಬೇಡ್ಕರ್ ಅವರು "ರಾಜಕೀಯ ಪ್ರಜಾಪ್ರಭುತ್ವದ ತಳಪಾಯ ಸಾಮಾಜಿಕ ಪ್ರಜಾಪ್ರಭುತ್ವ" ಎಂದು ಹೇಳಿದ್ದರು ಹಾಗೂ 'ಒಂದು ಮತ ಒಂದು ಮೌಲ್ಯ' ಎಂದರು. ಇಂದಿನ ನಮ್ಮ ಸಮಾಜದಲ್ಲಿ ಒಂದು ಸರಕಾದ ಮತದಾರನ ಮೌಲ್ಯ ಹೆಚ್ಚಿದೆ. ಮತದ ಮೌಲ್ಯ ಕುಸಿದಿದೆ. ಸಾಮಾಜಿಕ ಪ್ರಜಾಪ್ರಭುತ್ವವನ್ನು ಸಾಧಿಸುವ ಚಳುವಳಿ ತೀವ್ರವಾಗಬೇಕು. ಅಂದಾಗ ಮಾತ್ರ ರಾಜಕೀಯ ಪ್ರಜಾಪ್ರಭುತ್ವ ಉಳಿಯುತ್ತದೆ.



ತಿಂಗಳ ಪತ್ರಿಕೆ
**ಹೊಸತು**
ನವಕರ್ನಾಟಕ ಪ್ರಕಾಶನ

■ **ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಅನಸೂಯ ಕಾಂಬಳೆ
ಎಂ. ಡಿ. ಒಕ್ಕುಂದ
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬಿ. ಪೀರ ಬಾಷಾ
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ಎಸ್. ಮಂಜುನಾಥ
ಎಸ್. ಎಸ್. ರೇಣುಕಾರಾಧ್ಯ
ವಿಜಯಾ
ಶಿವಗಂಗ ರುಮ್ಮ
ಬಿ. ಶ್ರೀನಿವಾಸ ಕಕ್ಕಿಲ್ಲಾಯ
ಎಲ್. ಹನುಮಂತಯ್ಯ

■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

■ **ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೧೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(೩ನೇ ಪುಟದಿಂದ : ಈ ತಿಂಗಳು)*

ಮಹಾರಾಷ್ಟ್ರದಲ್ಲಿ ರಾಷ್ಟ್ರಪತಿ ಆಳ್ವಿಕೆ ಜಾರಿಯಾಗಿದೆ. ಯಾವ ಪಕ್ಷಕ್ಕೂ ಸರಕಾರ ರಚಿಸಲು ಅಗತ್ಯವಾದ ಸಂಖ್ಯಾಬಲ ಇಲ್ಲದಂತಾಗಿದೆ. ಭಾಜಪ – ಶಿವಸೇನಾ ಮೈತ್ರಿ ಮುರಿದುಬಿದ್ದಿದೆ. ಶಿವಸೇನೆಯ ಕೇಂದ್ರ ಸಚಿವ ರಾಜೀನಾಮೆ ನೀಡಿದ್ದಾಯಿತು. ಎನ್‌ಡಿಎಯಿಂದ ಶಿವಸೇನೆ ಹೊರನಡೆದದ್ದೂ ಆಯಿತು. ಮುಖ್ಯಮಂತ್ರಿ ಸ್ಥಾನಕ್ಕೆ ಶಿವಸೇನೆ ಪಟ್ಟುಹಿಡಿದದ್ದರಿಂದ ಪರಿಸ್ಥಿತಿ ಹೀಗಾಯಿತು ಎಂಬುದು ಭಾಜಪದ ಆಪಾದನೆ. ಶಿವಸೇನೆ – ಭಾಜಪ ಮೈತ್ರಿ ಸಾಕಷ್ಟು ಹಳೆಯದು. ಚುನಾವಣಾ ಪೂರ್ವದ ಹೊಂದಾಣಿಕೆಯಲ್ಲಿ ಯಶಸ್ಸು ಕಂಡ ಮೈತ್ರಿ ನಂತರ ನುಚ್ಚುನೂರಾಗಿದೆ. ಸರಕಾರ ರಚಿಸುವ ಕಸರತ್ತು ಮುಂದುವರಿದಿದೆ.

ಕನಿಷ್ಠ ಕಾರ್ಯಕ್ರಮದಡಿಯಲ್ಲಿ ಶಿವಸೇನೆ–ಶರತ್‌ಪವಾರ್‌ರ ಎನ್‌ಸಿಪಿ ಹಾಗೂ ಕಾಂಗ್ರೆಸ್ ಜೊತೆ ಗೂಡಿ ಸರಕಾರ ರಚಿಸುವ ಪ್ರಯತ್ನ ನಡೆದಿದೆ. ಮೊದಲಲ್ಲಿ ಡೋಲಾಯಮಾನದಲ್ಲಿದ್ದ ಕಾಂಗ್ರೆಸ್ ಪವಾರ್ ಒತ್ತಡಕ್ಕೆ ಮಣಿದಿದೆ. ಭಾಜಪಗೂ ಶಿವಸೇನೆಗೂ ವ್ಯತ್ಯಾಸವೇನಿಲ್ಲ. ಎರಡೂ ಹಿಂದುತ್ವ ವಾದಿ ಪಕ್ಷಗಳೇ. ಹಾಗಾಗಿ ಕಾಂಗ್ರೆಸ್ ಅದರ ಜೊತೆ ಕೈಗೂಡಿಸುವುದು ಆತ್ಮಹತ್ಯೆಯ ಹಾದಿ ಹಿಡಿದಂತೆಯೇ. ಹಿಂದುತ್ವವಾದಿಗಳ ಪ್ರಾಬಲ್ಯಕ್ಕೆ ಪೋಷಣೆ ನೀಡಿದ್ದೇ ಕಾಂಗ್ರೆಸ್. ಅಧಿಕಾರ ವಂಚಿತ ಕಾಂಗ್ರೆಸ್ ಈಗ ಮಹಾರಾಷ್ಟ್ರದಲ್ಲಿ ಶಿವಸೇನೆ ಜೊತೆ ಹೊರಟಿರುವುದು ಅಚ್ಚರಿ ಏನಲ್ಲ. ಕನಿಷ್ಠ ಕಾರ್ಯಕ್ರಮ ಎನ್ನುವುದು ಒಂದು ರಾಜಕೀಯ ಚದುರಂಗ ಅಷ್ಟೆ. ಕನಿಷ್ಠ ಕಾರ್ಯಕ್ರಮವನ್ನು ಕಾರ್ಯಗತ ಮಾಡುವುದು ಶಿವಸೇನೆ ನೇತೃತ್ವದ ಸರಕಾರ ತಾನೆ? ಇದಕ್ಕಿಂತ ಚುನಾವಣೆಯೇ ಲೇಸು.

* * *

ಮತ್ತೆ 'ದಿ ಎಕಾನಮಿಸ್ಟ್' ಪುರವಣಿಗೆ ಹಿಂದಿರುಗೋಣ. ಜಪಾನಿಗೆ ಭೇಟಿ ನೀಡಿದ್ದ ಪ್ರಧಾನಿ ಮೋದಿ ಬುಲೆಟ್ ಟ್ರೇನಿನಲ್ಲಿ ಪ್ರಯಾಣ ಮಾಡಿದ್ದು ದೊಡ್ಡ ಸುದ್ದಿಯಾಗಿತ್ತು. ಒಡನೆಯೇ ಜಪಾನಿನೊಂದಿಗೆ ಬುಲೆಟ್ ಟ್ರೇನ್ ಭಾರತಕ್ಕೆ ತರಲು ಒಪ್ಪಂದವೂ ಆಯಿತು. ಮುಂಬೈಯಿಂದ ಗುಜರಾತಿನ ರಾಜಧಾನಿ ಅಹಮದಾಬಾದ್‌ಗೆ ೫೦೦ ಕಿ.ಮೀ. ದೂರ ಬುಲೆಟ್ ಟ್ರೇನ್ ಯೋಜನೆ ಸಿದ್ಧವಾಯಿತು. ಭಾರತೀಯ ರೈಲಿನಲ್ಲಿ ಪ್ರಯಾಣ ಮಾಡಿದರೆ ಆರು ಗಂಟೆ ಬೇಕು. ಅದೇ ಬುಲೆಟ್ ರೈಲಿನಲ್ಲಿ ಎರಡು ಗಂಟೆಗಳಲ್ಲಿ ತಲಪಬಹುದು. ಈ ಪ್ರತಿಷ್ಠೆಯ ಮೋದಿ ಯೋಜನೆ ಸಿದ್ಧವಾಗಿ ಐದು ವರ್ಷಗಳಾಯಿತು. ಮೋದಿ ಬುಲೆಟ್ ರೈಲಿನ ಶಂಕುಸ್ಥಾಪನೆ ಮಾಡಿಯೂ ಆಯಿತು. ಯೋಜನೆಯ ವೆಚ್ಚವೆಲ್ಲ ಜಪಾನಿನದೇ ಸಾಲ. ಆದರೆ ಈವರೆಗೆ ಈ ಯೋಜನೆ ಇನ್ನೂ ಕನಸಾಗಿಯೇ ಇದೆ. ಇದುವರೆಗೆ ರೈಲು ಮಾರ್ಗಕ್ಕೆ ಅಗತ್ಯವಾದ ಭೂಮಿಯನ್ನು ವಶಪಡಿಸಿಕೊಳ್ಳುವ ಕಾರ್ಯ ಅರ್ಧದಷ್ಟೂ ಮುಗಿದಿಲ್ಲ. ಸದ್ಯಕ್ಕಂತೂ ರೈಲು ಓಡದು. ಬೇರೇ ಎಲ್ಲ ಯೋಜನೆಗಳಂತೆಯೇ ಇದೂ ವಿಫಲ. ಅದೇ ಚೀಣಾದಲ್ಲಿ ೨೦೧೮ರ ವೇಳೆಗೆ ೪,೦೦೦ ಕಿ.ಮೀ. ಬುಲೆಟ್ ರೈಲು ನಿರ್ಮಿಸಲಾಗಿದೆ. ಭಾರತ – ಚೀಣಾಗಳ ಸ್ಥಿತಿ ಹೆಚ್ಚು ಕಡಿಮೆ ಒಂದೇ ತೆರವಾಗಿತ್ತು. ೧೯೮೦ರ ನಂತರ ಚೀಣಾದ ಆರ್ಥಿಕಾ ಭಿವೃದ್ಧಿ ದಾಪುಗಾಲಿಟ್ಟಿತು. ಈಗ ಚೀಣಾ ಬೃಹತ್ ಗಾತ್ರದ ಅರ್ಥವ್ಯವಸ್ಥೆ ಹೊಂದಿದೆ. ಚೀಣೀ ಸರಕುಗಳು ಜಗತ್ತಿನಾದ್ಯಂತ ಹರಿದಾಡುತ್ತಿದೆ. ಮೋದಿ ಆಡಳಿತದಲ್ಲಿ ಹಿಂದುತ್ವ ಮೆರೆದಾಡುತ್ತಿದೆ. ಈಡೇರದ ಭರವಸೆಗಳು ಬೇಕಾದಷ್ಟು ಹರಿದಾಡುತ್ತಿವೆ. ಇದನ್ನು ಬಹುಸೂಕ್ಷ್ಮವಾಗಿ 'ದಿ ಎಕನಾಮಿಸ್ಟ್' ವಿಶ್ಲೇಷಣೆ ಮಾಡಿದೆ.

* * *

ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಮೂರ್ತಿ ರಂಜನ್ ಗೊಗೋಯ್ ನಿವೃತ್ತರಾಗಿದ್ದಾರೆ. ಮುಖ್ಯ ನ್ಯಾಯಮೂರ್ತಿಗಳು ಮೋದಿ ಸರಕಾರದ ಕೃಪೆಗೆ ಒಳಗಾಗಿದ್ದುದು ಸಹಜ. ನಿವೃತ್ತರಾಗುವುದಕ್ಕೆ ಮುನ್ನ ಅವರು ಮೂರು ಪ್ರಮುಖ ತೀರ್ಪುಗಳನ್ನು ನೀಡಿದ್ದಾರೆ. ಎಲ್ಲವೂ ಒಂದು ರೀತಿಯಲ್ಲಿ ಎಬ್ಬಂಕ. ಯಾರು ಹೇಗೆ ಬೇಕಾದರೂ ಅರ್ಥೈಸಬಹುದು. ಆದರೆ ಎಳೆ ಮಾತ್ರ ಹಿಂದೂಪರ. ಸಂವಿಧಾನಕ್ಕಿಂತ ಪರಂಪರೆಯನ್ನು, ನಂಬಿಕೆಯನ್ನು ಎತ್ತಿಹಿಡಿಯುವಂಥದ್ದು. ಮೊದಲನೆಯದು ಅಯೋಧ್ಯೆಯ ರಾಮ ಜನ್ಮಭೂಮಿ ವಿವಾದಕ್ಕೆ ಸಂಬಂಧಿಸಿದ್ದು. ಪುರಾತತ್ವ ಇಲಾಖೆಯ ವರದಿಯೇ ಆಧಾರ, ಹಿಂದೂಪರ ತೀರ್ಮಾನಕ್ಕೆ. ಬಾಬ್ರಿ ಮಸೀದಿ ಧ್ವಂಸ ಅಪರಾಧ ಕೃತ್ಯ, ಶಿಕ್ಷಾರ್ಹ ಎನ್ನುವ ತೀರ್ಪು ಏನು ಕ್ರಮ ಕೈಗೊಳ್ಳಬೇಕೆನ್ನುವುದಿಲ್ಲ. ಅದು ಸರಕಾರದ ಮರ್ಜಿಗೆ ಬಿಟ್ಟದ್ದು. ಮಸೀದಿ ಕಟ್ಟಲು ಬೇರೆ ಐದು ಎಕರೆ ಜಾಗ ಅಯೋಧ್ಯೆಯಲ್ಲಿ. ಅಂತೂ ಈಗ ಈ ತೀರ್ಪು ಚರ್ಚೆಗೆ ಗ್ರಾಸವಾಗಿದೆ. ಹಿಂದೂ ಮೆಜಾರಿಟೇರಿನಿಯಸಂ ಎದ್ದುಕಾಣುತ್ತದೆ. ಅದೇ ರೀತಿಯಲ್ಲಿಯೇ ಇದೆ ಶಬರಿಮಲೈ ಅಯ್ಯಪ್ಪ ಕುರಿತ ತೀರ್ಪು. ಸುಪ್ರೀಮ್ ಕೋರ್ಟು ಜಾರಿಕೊಂಡು ಏಳು ಸದಸ್ಯರ ಪೀಠಕ್ಕೆ ವಿವಾದವನ್ನು ಒಪ್ಪಿಸಿದೆ. ಈ ಇಬ್ಬಂದಿಯ ಸ್ಥಿತಿಯಲ್ಲಿ ಕೇರಳ ಸರಕಾರವೂ ಕೂಡ ಮಹಿಳೆಯರಿಗೆ ಪೊಲೀಸು ರಕ್ಷಣೆ ಕೊಡಲು ಹಿಂಜರಿದಿದೆ. ಹೇಳಿ ಕೇಳಿ ಎಡಪಂಥೀಯ ಸರಕಾರ. ಮುಂಬರುವ ಚುನಾವಣೆಯಲ್ಲಿ ಹಿಂದೂಗಳ ಮತ ಜಮಾಯಿಸಲು ಓಲೈಕೆ ಪ್ರಾರಂಭವಾಗಿದೆ ಎಂದು ಊಹಿಸಬಹುದಾಗಿದೆ. ಅಂತೂ ರಜನ್ ಗೊಗೋಯ್ ನೇತೃತ್ವದ ಪೀಠ ನಾಜೂಕಾಗಿ ಕೈತೊಳೆದುಕೊಂಡಿದೆ. ಇನ್ನು ಮೂರನೆಯ ತೀರ್ಪು ಕರ್ನಾಟಕದ ಅನರ್ಹ ಶಾಸಕರನ್ನು ಕುರಿತದ್ದು. ಇದೊಂದು ವಿಚಿತ್ರವಾದ ತೀರ್ಪು 'ಅಂದರಕಿ ಮಂಚಿವಾಡು' ಎಂಬ ತೆಲುಗು ನುಡಿಗಟ್ಟು ನೆನಪಿಗೆ ಬರುತ್ತದೆ ತೀರ್ಪು ಪರಿಗಣಿಸಿದಾಗ. ಶಾಸನ ಸಭಾಧ್ಯಕ್ಷರು ರಾಜೀನಾಮೆ ಅಂಗೀಕರಿಸಿದ್ದು ಸರಿ, ಆದರೆ ಅನರ್ಹರೆಂದು ಘೋಷಿಸಿದ್ದು ಸರಿಯಲ್ಲ. ಚುನಾವಣೆಯಲ್ಲಿ ಸ್ಪರ್ಧಿಸಲು ಅರ್ಹರು. ಆದರೆ ಸಚಿವರಾಗುವಂತಿಲ್ಲ. ಹೀಗಿದೆ ಸರ್ವೋಚ್ಚ ನ್ಯಾಯಾಲಯದ ತೀರ್ಪು. ಇದಕ್ಕೆ ಏನೆನ್ನೋಣ?

* * *

ರಾಜೀನಾಮೆ ನೀಡಿದ ಕಾಂಗ್ರೆಸ್–ಜೆಡಿಎಸ್ ಶಾಸಕರೆಲ್ಲ ಈಗ ಭಾಜಪ ಬಾವುಟ ಹಿಡಿದಿದ್ದಾರೆ. ಭಾಜಪ ಅಭ್ಯರ್ಥಿಗಳಾಗಿ ಟಿಕೇಟು ಪಡೆದುಕೊಂಡಿದ್ದಾರೆ. ಸಚಿವ (ಮಾಜಿ) ರೋಷನ್ ಬೇಗ್‌ಗೆ ಆರೆಸ್ಸೆಸ್ ಆಕ್ಷೇಪ. ಶಿವಾಜಿನಗರದಿಂದ ಭಾಜಪ ಟಿಕೆಟ್ ಇಲ್ಲ ಇವರಿಗೆ. ಎಲ್ಲ ನಿರೀಕ್ಷೆಯಂತೆಯೇ ಆಗಿಹೋಗಿದೆ ಸುಪ್ರೀಂ ಕೋರ್ಟಿನ ತೀರ್ಪಿನ ನಂತರ. ಮೋದಿ – ಷಾ ಜೋಡಿಗೆ ಜೈ ಎನ್ನಲೇ ಬೇಕಾಗಿ ಬಂದಿದೆ. ಇದೊಂದು ರಾಜ್ಯ ರಾಜಕಾರಣದಲ್ಲಿ ಹೊಸ ಬೆಳವಣಿಗೆ. ಫಲಿತಾಂಶ ಏನಾಗುತ್ತದೋ ವರ್ಷಾಂತ್ಯದವರೆಗೆ ಗೊತ್ತಾಗದು.

ಏತನ್ಮಧ್ಯೆ ದೇವೇಗೌಡರು, ಕುಮಾರಸ್ವಾಮಿ ಬಣ್ಣ ಬದಲಿಸಿದ್ದಾರೆ ಮಾಧ್ಯಮಗಳ ವರದಿ ಪ್ರಕಾರ. ಭಾಜಪದೊಂದಿಗೆ ಮತ್ತೊಮ್ಮೆ ಕೈ ಜೋಡಿಸಲು ಜೆಡಿಎಸ್ ಸಿದ್ಧವಾಗುತ್ತಿರುವ ಹಾಗೆ ತೋರುತ್ತಿದೆ. ಮುಂದಿನ ಮೂರುವರೆ ವರ್ಷ ಭಾಜಪದ ಯಡಿಯೂರಪ್ಪ ಸರಕಾರವೇ ಆಡಳಿತದಲ್ಲಿರುತ್ತದೆಂದು ಮಾರ್ಮಿಕವಾಗಿ ಕುಮಾರಸ್ವಾಮಿ ಹೇಳಿದ್ದಾರೆ. ಹಿಂದೆ ಇದೇ ಕುಮಾರಸ್ವಾಮಿ ಯಡಿಯೂರಪ್ಪನವರಿಗೆ ಕೈಕೊಟ್ಟದ್ದನ್ನು ಇನ್ನೂ ಕರ್ನಾಟಕದ ಜನ ಮರೆತಿಲ್ಲ. ಎಷ್ಟು ಕಾಲ ನಡೆದೀತು ತಂದೆ–ಮಗನ ರಾಜಕಾರಣ. ಎಲ್ಲ ದೈವೇಚ್ಛೆ ಎನ್ನುತ್ತಾರೆ ಅಪ್ಪ–ಮಗ. ಅದಕ್ಕೇ ಅಂತ ಕಾಣುತ್ತೆ ದೇವಾಲಯಗಳ ಸಂದರ್ಶನ, ಹೋಮ–ಹವನ ಇತ್ಯಾದಿ.

ಇನ್ನು ಕಾಂಗ್ರೆಸ್ ಪಾಳ್ಯದಲ್ಲಿ ಗೊಂದಲವೋ ಗೊಂದಲ. ಕೊನೆಗೂ ಮಾಜಿ ಸಚಿವ ಡಿ. ಕೆ. ಶಿವಕುಮಾರ್ 'ಇಡಿ' ಕಾಟ ತಪ್ಪಿಸಿಕೊಂಡು ಜಾಮೀನು ಗಿಟ್ಟಿಸಿಕೊಂಡು ರಾಜ್ಯಕ್ಕೆ ಮರಳಿದ್ದಾರೆ. ಸದ್ಯಕ್ಕೆ ಅವರು ದೇವರ ಮೊರೆಹೋಗಿ ದೇವಾಲಯಗಳನ್ನು ಸುತ್ತುವುದರಲ್ಲಿ ಬ್ಯುಸಿಯಾಗಿದ್ದಾರೆ. ಚುನಾವಣೆಯ ಸಮಯದಲ್ಲಿ ಚುರುಕುಗೊಂಡಾರು. ಮೂಲ ಕಾಂಗ್ರೆಸಿಗರು ಮತ್ತು ವಲಸೆ ಬಂದವರ ಮಧ್ಯೆ ತಿಕ್ಕಾಟ ಜೋರಾಗಿ ನಡೆದಿದೆ. ವಿರೋಧ ಪಕ್ಷದ ನಾಯಕನ ಪಟ್ಟ (ಹೈಕಮಾಂಡ್ ಕೃಪೆಯಿಂದ) ವಹಿಸಿಕೊಂಡಿರುವ ಸಿದ್ದರಾಮಯ್ಯ ಮಾಧ್ಯಮಗಳ ಮುಂದೆ ಕಾಣಿಸಿಕೊಂಡು ದಿನಕ್ಕೊಂದು ಹೇಳಿಕೆ ನೀಡತೊಡಗಿದ್ದಾರೆ. ಇನ್ನು ಮುಖ್ಯಮಂತ್ರಿಯಾಗುವ ಕನಸು ಕಾಣುತ್ತಿರುವ ಸಿದ್ದರಾಮಯ್ಯನವರ ಭವಿಷ್ಯ ಮುಂಬರುವ ಉಪ ಚುನಾವಣೆಗಳ ಫಲಿತಾಂಶದ ಮೇಲೆ ಅವಲಂಬಿತ.

ಭಾಜಪ ನೇತೃತ್ವದ ಸರಕಾರ ಅಧಿಕಾರಕ್ಕೆ ಬಂದು ತಿಂಗಳುಗಳು ಕಳೆದರೂ ರೈತರ ಬವಣೆ ತಪ್ಪಿಲ್ಲ. ಇಡೀ ಉತ್ತರ ಕರ್ನಾಟಕ, ಹೈದರಾಬಾದ್ ಕರ್ನಾಟಕ, ದಕ್ಷಿಣ ಕನ್ನಡ, ಮಲೆನಾಡಿನ ಜಿಲ್ಲೆಗಳು ಪ್ರವಾಹ, ಅತೀವೃಷ್ಟಿಯಿಂದ ತತ್ತರಿಸುತ್ತಿದೆ. ರೈತರ ಮಿತ್ರ ಎಂದು ಎದೆತಟ್ಟಿ ಹೇಳಿಕೊಳ್ಳುವ ಯಡಿಯೂರಪ್ಪ ಸರಕಾರದ ಅಡಿಯಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳು ಅಧಿಕಗೊಳ್ಳುತ್ತಿದೆ. ಅದು ದಿನನಿತ್ಯದ ಸುದ್ದಿಯಾಗುತ್ತಿದೆ. ಕೇಂದ್ರದಿಂದ ನಿರೀಕ್ಷಿತ ನೆರವು ಬಾರದ್ದರಿಂದ ಯಡಿಯೂರಪ್ಪ ಸರಕಾರ ಸ್ಥಳೀಯವಾಗಿಯೇ ಪ್ರಯತ್ನ ನಡೆಸಬೇಕಾಗಿದೆ. ಮೋದಿ ಸರಕಾರದ ಕೃಪೆ ಯಾವಾಗ ರಾಜ್ಯದ ಮೇಲೆ ಬೀಳುತ್ತದೋ

ನೋಡಬೇಕು. ಆರ್ಥಿಕ ಸಂಕಷ್ಟಕ್ಕೀಡಾಗಿರುವ ದೇಸೀ ಆರ್ಥಿಕ ನೀತಿಯಿಂದಾಗಿ ಇನ್ನೂ ಏನು ಕಾದಿದೆಯೋ!

✴ ✴ ✴

ಇತಿಹಾಸ ತಜ್ಞನೆಂದು ತನ್ನನ್ನು ತಾನು ಗುರುತಿಸಿಕೊಂಡಿರುವ ಕೇಂದ್ರ ಗೃಹಮಂತ್ರಿ ಶ್ರೀ. ಅಮಿತ್ ಶಾ "ಇತಿಹಾಸ ಬರೆಯಲು ನಿರ್ಬಂಧವೇನು?" ಎಂದು ಸಾವರ್ಕರ್ ಬಗೆಗಿನ ತಕರಾರುಗಳ ಸಂದರ್ಭದಲ್ಲಿ ಪ್ರಶ್ನಿಸಿದ್ದಾರೆ. ಯಾವುದೋ ಅಪ್ರಬುದ್ಧ ಗ್ರಂಥವೊಂದರ ಬಿಡುಗಡೆ ಸಮಾರಂಭದಲ್ಲಿ ಅವರ ಮಾತಿನ ವೈಖರಿಯು ಈ ಪ್ರಶ್ನೆಯ ಸುತ್ತ ಹೆಣೆದುದಾಗಿತ್ತು. "ಪುರಾವೆಗಳಿಲ್ಲದೆ ಇತಿಹಾಸವಿಲ್ಲ" ಎಂಬುದು ಒಂದು ಮೂಲಭೂತ ತಿಳಿವಳಿಕೆ. ಇತಿಹಾಸದ ಕ್ಷೇತ್ರದಲ್ಲಿ ಯಾವುದೇ ತೀರ್ಮಾನವು ಶಿಸ್ತುಬದ್ಧವಾಗಿರಬೇಕಾದರೆ ಈ ಸೂತ್ರವನ್ನು ಗೌರವಿಸಿಯೇ ಮುಂದುವರಿಯಬೇಕು. ಅದೇ ನಿರ್ಬಂಧ ಮತ್ತು ಸಚಿವ ಶಾ ಅವರು ನಿರ್ಬಂಧಗಳನ್ನು ಮೀರುವವರಾದ್ದರಿಂದ ಇತಿಹಾಸ ರಚನೆಯಲ್ಲೂ ಅವರಿಗೆ ನಿರ್ಬಂಧವು ಅಪಥ್ಯವೆನಿಸಿರಬೇಕು. ಸಾವರ್ಕರ್ ಅಂಡಮಾನಿನ ಸೆರೆಮನೆಯಿಂದ ಹೊರಬರಲು ಅಂದಿನ ವಸಾಹತು ಸರ್ಕಾರಕ್ಕೆ ಕ್ಷಮಾಪಣಾ ಪತ್ರವನ್ನು ಬರೆದಿದ್ದು, ತಾವು ಹೊರಬಂದರೆ ಬ್ರಿಟಿಷರ ಸರ್ಕಾರದ ಸ್ಥಿರತೆಗೆ ಕಾಣಿಕೆ ನೀಡುವ ಸೂಚನೆ ನೀಡಿದ್ದರು. ಇದು ಎಲ್ಲರಿಗೂ ಲಬ್ಧವಿರುವ ಪುರಾವೆ. ಅದನ್ನು ಅವಗಣಿಸಿ ಸಾವರ್ಕರ್ ಅವರ ಜೀವನಗಾಥೆಯ ಮಾಪನ ಸಾಧ್ಯವಿಲ್ಲ. ಈಚೆಗೆ ಒಬ್ಬ ಸಾವರ್ಕರ್ ಅಭಿಮಾನಿ ಆ ಪುರಾವೆಯನ್ನು ವ್ಯಾಖ್ಯಾನಿಸಿದ್ದು ಹೀಗೆ : "ಕ್ಷಮಾಪಣಾ ಪತ್ರ ಬರೆದರು ನಿಜ, ಆದರೆ ಅದು ಅವರ ಮನದಾಳದ ಮಾತಲ್ಲ. ಹೇಗೋ ಹೊರಬಂದು ತಮ್ಮ ಧ್ಯೇಯ ಮತ್ತು ಪಕ್ಷಕ್ಕಾಗಿ ದುಡಿಯಲು ಸಾವರ್ಕರ್ ಹಂಬಲಿಸುತ್ತಿದ್ದರು; ಆದ್ದರಿಂದ ಅಂತಹ ಪತ್ರ ಬರೆದರು." ಸರಿ, ಆದರೆ ಅದಕ್ಕೆ ಮತ್ತೆ ಪುರಾವೆ ಬೇಕಲ್ಲವೆ? ಮುಂದೆ ಎಂದಾದರೂ ಸ್ವತಃ ಸಾವರ್ಕರ್ ಅಂತಹ ಸೂಚನೆ ನೀಡಿದ್ದಿದ್ದರೆ ಅದಕ್ಕೆ ಬೆಲೆ ಬಂದಿರುತ್ತಿತ್ತು. ಹಾಗೆಂದೂ ಅವರು ಸೂಚನೆ ನೀಡಲಿಲ್ಲ. ಅವರ ತಥಾಕಥಿತ ಶ್ರೇಯಸ್ಸುಗಳಲ್ಲಿ ಹಡಗಿನಿಂದ ಜಿಗಿದು ಈಜುತ್ತಾ ದಡ ಮುಟ್ಟಿ ಪಾರಾದರು ಎಂಬ ಐತಿಹ್ಯವೊಂದಿದೆ. ಅದು ಫ್ರಾನ್ಸಿನ ಒಂದು ಬಂದರಿನಲ್ಲಿ ನಡೆದ ಘಟನೆ. ಫ್ರಾನ್ಸಿನ ಗಡಿಯಲ್ಲಿ ಅವರನ್ನು ಬಂಧಿಸಲಾಯಿತು; ಬಂಧಿಸಲಾಗುತ್ತದೆಂಬ ಅನುಮಾನ ಸಾವರ್ಕರರಲ್ಲಿ ಏಕೆ ಮೂಡಿರಲಿಲ್ಲ? ಇದು ಅಂಡಮಾನಿನ ಸೆರೆವಾಸಕ್ಕೆ ಮುಂಚಿನ ಸಂಗತಿ. ಪುರಾವೆಯಿಲ್ಲದೆ ಸಾವರ್ಕರರನ್ನು ವೈಭವೀಕರಿಸುವ ಅಗತ್ಯವಿಲ್ಲ. ಇವರ ಬಗೆಗಿನ ಚರ್ಚೆಯಲ್ಲಿ "ವೇದದ ಕಾಲದಲ್ಲಿ ಅಂತರಗ್ರಹ ಯಾನ ನಡೆಯುತ್ತಿತ್ತು" ಎಂಬ ಹೇಳಿಕೆಯ ಛಾಯೆ ಇದೆ. ಅಲ್ಲಿಯೂ ಪುರಾವೆಯಿಲ್ಲದ ತೀರ್ಮಾನ ಕಣ್ಣು ಕುಕ್ಕುತ್ತದೆ : ಯಾನ ಯಂತ್ರದ ಬಿಡಿಭಾಗಗಳು ಎಲ್ಲಾದರೂ ಉತ್ಖನನದಲ್ಲಿ ದೊರೆತಿವೆಯೆ? ಯಾನದ ಇಂಧನ ಯಾವುದಾಗಿತ್ತು? ಆ ಇಂಧನವು ವಿದ್ಯುತ್ತಾಗಿ ಪರಿಣಮಿಸಿ ಯಾನವನ್ನು ಹೊತ್ತೊಯ್ಯುತ್ತಿತ್ತೆ? ಅದಕ್ಕೆ ಉತ್ತರಗಳಿಲ್ಲ. ಅಂತೆಯೇ ಪೌರಾಣಿಕ ವ್ಯಕ್ತಿಯನ್ನಾಗಿ ಮಾರ್ಪಡಿಸುವ ಯತ್ನದಲ್ಲಿ ಸಾವರ್ಕರ್ ಅವರನ್ನು ಇನ್ನೂ ಹೆಚ್ಚು ಬೆತ್ತಲಾಗಿಸುತ್ತಿದ್ದಾರೆ, ಅಷ್ಟೆ. ಯಾವ ನಿರ್ಬಂಧವೂ ಇಲ್ಲದೆ ಇತಿಹಾಸದ ರಚನೆಗೆ ಅಮಿತ್ ಶಾ ಮುಂದಾದರೆ ಪೇಚಿನ ಪ್ರಸಂಗಗಳು ನೂರ್ಮಡಿಯಾದಾವು!

✴ ✴ ✴

ಕರ್ನಾಟಕದ ಸಂಸ್ಕೃತಿ ಸಚಿವ ಶ್ರೀ. ಸಿ. ಟಿ. ರವಿಯವರ ನಾಲಿಗೆ ಬಹು ಉದ್ದ; ಚಿಕ್ಕಮಗಳೂರಿನ ಪರ್ವತಶ್ರೇಣಿಗಳಂತೆ, ಎನ್ನೋಣವೆ? ಹಿಂದಿನ ಸರ್ಕಾರದ ಅವಧಿಯಲ್ಲಿ ಸಂಸ್ಕೃತಿ ಸಚಿವಾಲಯದ ವ್ಯಾಪ್ತಿಯಲ್ಲಿರುವ ಅಕಾದೆಮಿಗಳು, ಪ್ರಾಧಿಕಾರಗಳು, ಎಲ್ಲಾ "ಮನೆಮುರುಕ"ರ ನೇತೃತ್ವದಲ್ಲಿದ್ದವು ಮತ್ತು ತಾವು ಎಲ್ಲವನ್ನೂ ಶುದ್ಧೀಕರಿಸಿ ಆಧಾರಸ್ತಂಭಗಳನ್ನು ಗಟ್ಟಿಗೊಳಿಸಿರುವ ಭಾವ ಅವರದು. ಭ್ರಮೆಗೂ ದುರಹಂಕಾರಕ್ಕೂ ಬಹಳ ವ್ಯತ್ಯಾಸವಿದೆ. ಭ್ರಮೆಯ ಅಪಲಾಪವು ಕ್ಷಮಾರ್ಹ, ಆದರೆ ದುರಹಂಕಾರದ ಗರ್ಜನೆಯು ಖಂಡನೀಯ. ಯಾರನ್ನು ಬೇಜವಾಬ್ದಾರಿಯಿಂದ "ಮನೆಮುರುಕರು" ಎಂದು ಸಿ. ಟಿ. ರವಿ ಹಂಗಿಸಿದ್ದಾರೋ ಅವರ ಕೆಲಸಗಳನ್ನು ಸಚಿವರು ತಿಳಿಯುವ ಯತ್ನ ಮಾಡಬೇಕಿತ್ತು ಮತ್ತು ಅವುಗಳಲ್ಲಿ ಯಾವುವು ಯಾವ ಮನೆ ಮುರಿಯುವಂಥವಾಗಿದ್ದವು ಎಂಬುದನ್ನು ದಾಖಲೆ ಸಮೇತ ಹೇಳಬೇಕಾಗಿತ್ತು. ಅಂತಹ ಮೂಲಭೂತ ತಿಳಿವಳಿಕೆ ಇಲ್ಲದ ವ್ಯಕ್ತಿ ಸಂಸ್ಕೃತಿ ಸಚಿವರಾಗಿರುವುದು ಶೋಚನೀಯ. ಅವರ ಮೂದಲಿಕೆಯ ಮಾತನ್ನು ಸ್ವತಃ ಅವರಿಗೇ ಅನ್ವಯಿಸಿದರೆ ಹೇಗಿರುತ್ತದೆ? ಬರುವ ದಿನಗಳಲ್ಲಿ ಅಂತಹ ಅನ್ವಯಕ್ಕೆ ಸಾಕಷ್ಟು ಪುರಾವೆಗಳು ಸಿಗುವ ಸಾಧ್ಯತೆ ವಿಪುಲವಾಗಿದೆ ಎನ್ನಲಡ್ಡಿಯಿಲ್ಲ.

✴ ✴ ✴

ನಮ್ಮ ರಾಜ್ಯದ ಹಿರಿಯ ವಕೀಲರಾದ ಶ್ರೀ. ಬಿ. ವಿ. ಆಚಾರ್ಯ ಅವರು "ನ್ಯಾಯಾಂಗವು ಕೇಂದ್ರ ಕಾನೂನು ಸಚಿವರ ಆಣತಿಯಂತೆ ನಡೆಯುತ್ತಿದೆ" ಎಂದು ವಾಗ್ದಾಳಿ ನಡೆಸಿದರೆಂದು ವರದಿಯಾಗಿದೆ (ಪ್ರಜಾವಾಣಿ, ನವೆಂಬರ್ ೧, ೨೦೧೯). ನ್ಯಾಯ ಮಂಡಳಿ ಹಾಗೂ ಆಯೋಗಗಳ ಸಂಖ್ಯೆ ಈಗ ಜಾಸ್ತಿ ಇರುವುದು ನ್ಯಾಯಮೂರ್ತಿಗಳಿಗೆ ಒಂದು ಆಕರ್ಷಣೆಯಾಗಿದೆಯೆಂದೂ ಅವರು ವ್ಯಥೆ ವ್ಯಕ್ತಪಡಿಸಿದ್ದಾರೆ. ಹಿರಿಯ ವಕೀಲರಾಗಿ ಅವರು ಸಾಕ್ಷ್ಯಾಧಾರಗಳನ್ನು ಹೊಂದಿಯೇ ಈ ಮಾತುಗಳನ್ನು ಸಾರ್ವಜನಿಕವಾಗಿ ಆಡಿದ್ದಾರೆಂದು ಭಾವಿಸಬಹುದಾಗಿದೆ. ಅಯೋಧ್ಯೆಯ ಮಸೀದಿ ಪ್ರಕರಣದಲ್ಲೂ ಇಂತಹ ಆಮಿಷವೇನಾದರೂ ಕೆಲಸ ಮಾಡಿದೆಯೋ ಎಂಬ ಶಂಕೆಯನ್ನು ಸದ್ಯಕ್ಕೆ ಪಕ್ಕಕ್ಕಿರಿಸಬಹುದು. ಆದರೆ ಇನ್ನೊಬ್ಬ ಹಿರಿಯ ವಕೀಲ ಶ್ರೀ. ಸಿ. ಎಚ್. ಹನುಮಂತರಾಯ ಅವರ ಮಾತನ್ನು ಹಾಗೆ ಸರಿಸಿಬಿಡಲು ಸಾಧ್ಯವಿಲ್ಲ. ಧಾರ್ಮಿಕ ನಂಬಿಕೆ ಮತ್ತು ಶ್ರದ್ಧೆ, ಇವನ್ನು ಯಾವುದೇ ಪ್ರಕರಣದಲ್ಲಿ ನ್ಯಾಯಾಲಯಗಳು ಸಾಕ್ಷಿಯೆಂದು ಸ್ವೀಕರಿಸುವುದಾದರೆ ಅದು ಮೊಕದ್ದಮೆಗಳಲ್ಲಿ ನ್ಯಾಯಕ್ಕೆ ಇತಿಶ್ರೀ ಹಾಡಿದಂತೆಯೇ ಸರಿ ಎಂದು ಅವರು ಅಭಿಪ್ರಾಯಪಟ್ಟಿರುವುದು ಗಮನಾರ್ಹ. ಬಾಬ್ರಿ ಮಸೀದಿ ಮೊಕದ್ದಮೆಯು ಮೂಲತಃ ಆಸ್ತಿಯ ತಕರಾರಿಗೆ ಸಂಬಂಧಿಸಿದ್ದು; ಅದನ್ನು ದಾಖಲೆಗಳ ಆಧಾರದಿಂದ ತೀರ್ಮಾನಿಸಬೇಕೆಂದು ನಿರೀಕ್ಷಿಸುವುದು ಅಪ್ರಕೃತವಲ್ಲ. ಅದಕ್ಕೆ ಮಹಾಕಾವ್ಯವೊಂದರ ಪ್ರಮುಖ ಪಾತ್ರವಾದ ರಾಮನ ಲೇಪವನ್ನು ಬಳಿದು ಕಾವ್ಯ ಮತ್ತು ಪುರಾಣಗಳ 'ಉವಾಚ'ಗಳನ್ನು ಇತಿಹಾಸವೆಂದು ನ್ಯಾಯಾಲಯವು ಭ್ರಮಿಸುವಂತಾದರೆ ನಾಳೆ ಒಂದು ದಿನ ಧೃತರಾಷ್ಟ್ರನ ನೂರು ಮಂದಿ ಮಕ್ಕಳನ್ನು ಇತಿಹಾಸದ ವ್ಯಕ್ತಿಗಳೆಂದು ಪರಿಗಣಿಸುವ ಬಾಲಿಶತೆಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಮತ್ತೊಂದು ದಿನ ಕಣ್ವಾಶ್ರಮವಿದ್ದ ಜಾಗವನ್ನು ಶೋಧಿಸಿ, ದುಷ್ಯಂತ–ಶಕುಂತಲೆಯರ ಸಮಾಗಮದ ತಾವನ್ನು ಗುರುತಿಸಿ, ಅಲ್ಲೊಂದು ಪ್ರೇಮಮಂದಿರ ರಚಿಸಲು ನ್ಯಾಯಾಲಯವು ಆದೇಶ ಹೊರಡಿಸಬಹುದಲ್ಲವೆ? ಅಯೋಧ್ಯೆಯಲ್ಲಿ ಪುರಾತತ್ವ ಶೋಧ ನಡೆಸಿದ ವ್ಯಕ್ತಿ ಬಿ. ಬಿ. ಲಾಲ್ ನೀಡಿದ್ದ ವರದಿಯನ್ನು ಯಾವ ಉತ್ಖನನ ಶಾಸ್ತ್ರದ ತಜ್ಞರೂ ಮಾನ್ಯ ಮಾಡಿರಲಿಲ್ಲ; ಆದರೆ ನಮ್ಮ ಸರ್ವೋಚ್ಚ ನ್ಯಾಯಾಲಯವು ಅದಕ್ಕೆ ಅವ್ಯಕ್ತವಾಗಿ ಮಾರುಹೋಗಿದೆ. ಬೇರೆ ತಜ್ಞರ ಅಭಿಪ್ರಾಯ ಪಡೆಯುವ ಗೋಜಿಗೆ ನ್ಯಾಯಾಲಯವು ಹೋಗಲಿಲ್ಲವೆನಿಸುತ್ತದೆ. ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪಿಗೆ ಪರಿಶಿಷ್ಟವಾಗಿ ಒಬ್ಬ ನ್ಯಾಯಮೂರ್ತಿ ಪಂಡಿತರು ಪರಿಶಿಷ್ಟವೊಂದನ್ನು ಸೇರಿಸಿದ್ದಾರೆ. ಅದು ತೀರ್ಪಿಗೆ ತೋಳ್ಬಲ ತುಂಬುತ್ತದೆಯೆಂದು ಭಾವಿಸಿದ್ದಾರೋ ಏನೋ! ಸ್ಕಾಂದಪುರಾಣವು ರಾಮ ಹುಟ್ಟಿದ ಜಾಗವನ್ನು ಬಹಳ ನಿಖರವಾಗಿ ಗುರುತಿಸಿದೆ ಎಂಬುದೊಂದು ಪುರಾವೆ; ತುಲಸೀದಾಸರ ರಾಮಚರಿತಮಾನಸದ ಸೂಚನೆ ಇನ್ನೊಂದು ಪುರಾವೆ. ವಾಲ್ಮೀಕಿಯ ರಾಮಾಯಣವು ಏನಿಲ್ಲವೆಂದರೂ ೨೫೦೦ ವರ್ಷಗಳಷ್ಟು ಪ್ರಾಚೀನವಾದ್ದು ಮತ್ತು ಮಹಾನ್ ಪರಿಶಿಷ್ಟವು ಗಣನೆಗೆ ತೆಗೆದುಕೊಂಡಿರುವ ಸ್ಕಾಂದ ಪುರಾಣ ಕನಿಷ್ಠ ೧೧೦೦ ವರ್ಷಗಳ ನಂತರದ್ದು. ತುಲಸೀದಾಸರು ಇನ್ನೂ ಈಚಿನವರು. ಅವು ಸರ್ವೋಚ್ಚ ನ್ಯಾಯಾಲಯದ ದೃಷ್ಟಿಯಲ್ಲಿ ಪುರಾವೆಗಳೆಂದಾದರೆ ನಮ್ಮ ದೇಶದಲ್ಲಿ ಏನೇನು ಇತಿಹಾಸ ರಚನೆ ಆಗಿಹೋಗಬಹುದು ಗೊತ್ತೆ? ಟಿಬೆಟ್ಟಿನಲ್ಲಿರುವ ಕೈಲಾಸ ಪರ್ವತದ ಯಾವುದೋ ಭಾಗದಲ್ಲಿ ಈಶ್ವರ–ಪಾರ್ವತಿಯರ ನಿವಾಸವನ್ನು ಗುರುತಿಸಿ ಅವರ ಗೈರುಹಾಜರಿಯಲ್ಲಿ ಅಲ್ಲೊಂದು ಶಿವ–ಪಾರ್ವತಿ ಮಂದಿರ ಕಟ್ಟಿ ಪುಣ್ಯ ಕಟ್ಟಿಕೊಳ್ಳಬಹುದು.

ಅತಿಮುಖ್ಯವಾಗಿ ಪರಿಗಣಿಸಬೇಕಾದ ವಿಚಾರವೆಂದರೆ ವಾಲ್ಮೀಕಿಯ ರಾಮನು ಹುಟ್ಟಿದ ಜಾಗವು ನ್ಯಾಯಾಲಯದ ಪರಿಧಿಗೆ ಬರಲಾಗದಂತಹ ಸಂಗತಿ. ಒಂದು ಮಹಾಕಾವ್ಯವನ್ನು ಉತ್ಕೃಷ್ಟ ಸಾಹಿತ್ಯವೆಂದು ಸವಿಯದೆ ಅದನ್ನು ಇತಿಹಾಸ ಗ್ರಂಥವೆಂದು ಬಗೆಯುವುದು ಆಭಾಸವೇ ಸರಿ. ಮಾನ್ಯ ಶ್ರೀ. ಸಿ. ಎಚ್. ಹನುಮಂತರಾಯ ಅವರ ಹೇಳಿಕೆಯ ಅರ್ಥ ಅದೇ ಎನಿಸುತ್ತದೆ. ಆಸ್ತಿಯು ಯಾರದ್ದೆಂಬ ತನಿಖೆಗೆ

ದಾಖಲೆಗಳನ್ನು ಪರಿಶೀಲಿಸುವ ಜವಾಬ್ದಾರಿಯನ್ನು ನ್ಯಾಯಾಲಯಕ್ಕೆ ಮೊಕದ್ದಮೆಯು ನೀಡಿತ್ತು; ಆದರೆ ರಾಮನ ಜನ್ಮಸ್ಥಾನದ ನಿಷ್ಕರ್ಷೆಯನ್ನು ಮಾಡಿಬಿಡ ಲಾಗಿದೆ. ಮುಂದೊಂದು ದಿನ ಮಾಗಡಿಯ ಬಳಿಯ ಕೆಂಪಸಾಗರದ ಮಾರಮ್ಮನ ಜನ್ಮಸ್ಥಾನವು ಆ ಊರಿನ ಯಾವುದೋ ಮನೆ ಇರುವೆಡೆ ನಡೆದಿದ್ದಿತೆಂದು ಗುಲ್ಲೆಬ್ಬಿಸಿ ಹುಮ್ಮಸ್ಸಿನಿಂದ ಭಕ್ತಗಣವು ಆ ಮನೆಯನ್ನು ಉರುಳಿಸಿದರೆ ತಪ್ಪೇನು! ಕಾನೂನು ಮತ್ತು ನ್ಯಾಯ ಎಂಬುವು ಯಾವುದೇ ಬಣದ ಭಾವೋದ್ರೇಕಗಳಿಗೆ ಸೊಪ್ಪುಹಾಕಬಹುದೆ? ಹಾಗೆ ಮಾಡಿದರೆ ತೀರ್ಪುಗಳು ಅಪಖ್ಯಾತಿಗೆ ಅನಿವಾರ್ಯವಾಗಿ ಮಾದರಿಗಳಾಗು ವುದರಲ್ಲಿ ಸಂದೇಹ ಇಲ್ಲ. ಚರಿತ್ರೆಯ ತಪ್ಪುಗಳನ್ನು ಸರಿಪಡಿಸುವ ವಿಧಾನಕ್ಕೆ ಆರಂಭ ಮತ್ತು ಕೊನೆಗೆ ಎಲ್ಲೆ ಎಲ್ಲಿದೆ? ಎಂದೋ ಮಂದಿರ ಉರುಳಿಸಿ ಮಸೀದಿ ಕಟ್ಟಿದ್ದರು ಎಂದು ಹುಯಿಲೆಬ್ಬಿಸಿ ಮಸೀದಿ ಉರುಳಿಸುವುದು ನ್ಯಾಯಬದ್ಧವಾದರೆ ನಮ್ಮ ದೇಶದ ತಥಾಕಥಿತ ಅಸ್ಪೃಶ್ಯರು ಒಂದಷ್ಟು ಮಹಾಬ್ರಾಹ್ಮಣರ ರುಂಡಗಳ ಚೆಂಡಾಡುವುದು ಸಹ ನ್ಯಾಯಬದ್ಧವೇ! ಬಿ. ಬಿ. ಲಾಲ್ ಅವರ ಉತ್ಖನನಾ ವರದಿಯು ಸರ್ವೋಚ್ಚ ನ್ಯಾಯಾಲಯದ ತೀರ್ಪಿಗೆ ಪುರಾವೆ ಯಾಗಲಾರದು. ಅಲ್ಲಿರದಿದ್ದ ವಸ್ತುಗಳನ್ನು ಅಲ್ಲಿ ಉತ್ಖನನದಲ್ಲಿ ದೊರೆಯಿತೆಂದು ಹೇಳುವ ಸಾಹಸ ಮಾಡಿರಲಾರರೆ? ಒಂದು ಅತಿಸಾಮಾನ್ಯ ತಿಳಿವಳಿಕೆ ಏನು ಹೇಳುತ್ತದೆ? ಒಂದು ಕಟ್ಟಡ ಉರುಳಿಸಿ ಆ ಜಾಗದಲ್ಲಿ ಬೇರೊಂದನ್ನು ಕಟ್ಟಹೊರಟಾಗ ಆ ಜಾಗದಲ್ಲಿ ಮೊದಲಿಗಿದ್ದ ಕಟ್ಟಡದ ಕಂಬಗಳನ್ನು ಮತ್ತು ಕಲ್ಲುಗಳನ್ನು ಅಲ್ಲಿಯೇ ಬಿಟ್ಟು ಅವುಗಳ ಮೇಲೆ ಕಟ್ಟಡ ಕಟ್ಟುವುದಿಲ್ಲ, ಎಂದು. ಹಾಗಿದ್ದರೆ ಬಿ. ಬಿ. ಲಾಲ್‌ಗೆ ಉತ್ಖನನದ ದೆಸೆಯಿಂದ ಕೆತ್ತಿದ ಕಂಭಗಳು ದೊರೆತಿದ್ದೆಂತು? ಅಷ್ಟೇ ಅಲ್ಲ, ಲಾಲ್ ಸಾಹೇಬರಿಗೆ ಪೂರ್ವದಲ್ಲಿದ್ದ ಕಟ್ಟಡದ ನೆಲಹಾಸು ಸಹ ದೊರಕಿ ಬಿಟ್ಟಿದ್ದಿತಂತೆ! ಅದನ್ನೆಲ್ಲಾ ಹಾಗೆಯೇ ಉಳಿಸಿ ಮಸೀದಿ ಎಂಬ ಚರಿತಾರ್ಹ ಕಟ್ಟಡ ಕಟ್ಟಿದ ಮೂರ್ಖನಾರಿರ ಬಹುದು!! ಅಲಹಾಬಾದ್ ಉಚ್ಚ ನ್ಯಾಯಾಲಯವು ೨೦೦೩ರಲ್ಲಿ ಉತ್ಖನನ ಮಾಡಬೇಕೆಂದು ಹೇಳಿತು, ಅದರಂತೆ ಬಿ. ಬಿ. ಲಾಲ್ ಅವರಿಗೆ ಆ ಕೆಲಸವನ್ನು ವಹಿಸಲಾಯಿತು. ಅಲ್ಲಿ ಅವರಿಗೆ ದೊರೆತುವೆನ್ನಲಾದ ಕಂಭಗಳು ಮತ್ತು ನೆಲಹಾಸು ಸರ್ವೋಚ್ಚ ನ್ಯಾಯಾಲಯಕ್ಕೆ ಬಹುಶಃ ನಂಬಲರ್ಹವಾದ ಮೂರ್ತ ಪುರಾವೆಗಳಾದವು. ಇಲ್ಲವಾದರೆ ಅವುಗಳ ಅಷ್ಟು ದೀರ್ಘ ವ್ಯಾಖ್ಯೆ ಏಕೆ ಬೇಕಾಗಿತ್ತು!

೧೯೪೯ರಲ್ಲಿ ಆ ಕಟ್ಟಡದಲ್ಲಿ ಯಾವುದೋ ಹಿಂದು ದೇವತೆಯ ಸ್ಥಾಪನೆಯಾಗಿತ್ತು. ಅಂದಿನ ಮುಖ್ಯಮಂತ್ರಿ ಜಿ. ಬಿ. ಪಂತ್ ಅವನ್ನು ತೆಗೆಸ ದಿದ್ದುದು ಸರಿಯಲ್ಲವೆಂದು ಸರ್ವೋಚ್ಚ ನ್ಯಾಯಾಲಯವು ಒಪ್ಪಿದೆ. ಹಾಗಿದ್ದರೆ ಅದರ ಮುಂದಿನ ಘಟನೆಗಳು ನ್ಯಾಯಬದ್ಧವಲ್ಲವೆಂದು ತರ್ಕಿಸುವುದು ಅನಿವಾರ್ಯವಲ್ಲವೆ? ೧೯೯೨ರಲ್ಲಿ ಮಸೀದಿಯನ್ನು ಉರುಳಿಸಿದ್ದು ಅಪರಾಧವೆಂದು ಸರ್ವೋಚ್ಚ ನ್ಯಾಯಾಲಯವು ಅಂಗೀಕರಿಸಿ ಮಸೀದಿಯ ಅಂದಿನ ಮಾಲೀಕರಿಗೆ ಒಂದಕ್ಕೆ ಎರಡರಷ್ಟು ಜಮೀನು ಮಂಜೂರು ಮಾಡಬೇಕೆಂದು ತೀರ್ಪಿನಲ್ಲಿ ಹೇಳಲಾಗಿದೆ. ಇಲ್ಲಿ ಎರಡು–ಮೂರು ಪ್ರಶ್ನೆಗಳು ಉದ್ಭವಿಸುತ್ತವೆ : (ಅ) ಮಸೀದಿಯ ಮಾಲೀಕರು ಬದಲಿ ಜಾಗಕ್ಕೆ ಆಗ್ರಹಿಸಿದ್ದರೆ? ಹಾಗಿದ್ದರೆ ಮಸೀದಿ ಉರುಳಿಸಿದವರು ಆ ಬದಲಿ ಜಾಗ ಕೊಡಬೇಕೇ ವಿನಾ ಸರ್ಕಾರವೇಕೆ ಕೊಡಬೇಕು? ಆಗ್ರಹಿಸಿಲ್ಲದಿದ್ದರೆ ಅವರು ಜಾಗ ಪಡೆಯಲು ನಿರಾಕರಿ ಸುವುದು ಅವರ ನೈತಿಕ ಜವಾಬ್ದಾರಿಯಾಗಬೇಕು. (ಆ) ನಮ್ಮ ಇಂದಿನ ವಿಧಾನಸೌಧದ ಆಸುಪಾಸಿನಲ್ಲಿ ಇರುವ ಯಾವುದೋ ಕಟ್ಟಡವನ್ನು ಕೆಲವು ದುಷ್ಕರ್ಮಿಗಳು ಕೆಡವಿಹಾಕಿದರೆ ಅದಕ್ಕೆ ಪರಿಹಾರ ವಾಗಿ ಸುಂಕದಕಟ್ಟೆಯ ಬಳಿ ಎರಡರಷ್ಟು ಜಮೀನು ಮಂಜೂರು ಮಾಡುತ್ತೇವೇನು? (ಇ) ಮುಂದೆ ಬೇರಾವುದೇ ಪೂಜಾಮಂದಿರವನ್ನು ಅಥವಾ ಮಂದಿರಗಳನ್ನು ವಿವಿಧ ಬಣಗಳು ಧರ್ಮಶ್ರದ್ಧೆಯ ಕಾರಣ ಕೊಟ್ಟು ಉರುಳಿಸಿದರೆ ಅವನ್ನೂ ನಂಬಿಕೆ ಮತ್ತು ಶ್ರದ್ಧೆ ಎಂಬ ಅಳತೆ ಗೋಲಿನಿಂದ ತೀರ್ಮಾನಿಸುತ್ತೇವೆಯೆ? (ಈ) ಆಗಲೂ ಸರ್ಕಾರಗಳೇ ಟ್ರಸ್ಟುಗಳನ್ನು ರಚಿಸಿ, ಸಾರ್ವಜನಿಕ ಹಣವನ್ನು ನೀಡಿ, ನೂತನ ಪೂಜಾಮಂದಿರಗಳನ್ನು ನಿರ್ಮಿಸುತ್ತವೆಯೆ?

ಒಟ್ಟಿನಲ್ಲಿ, ಸರ್ವೋಚ್ಚ ನ್ಯಾಯಾಲಯದ ತೀರ್ಪು ಯಾರೂ ನಿರೀಕ್ಷಿಸಿರದಿದ್ದ ಗೊಂದಲಗಳನ್ನು ಸೃಷ್ಟಿಸಿದೆ. ಅನೇಕ ನಿವೃತ್ತ ನ್ಯಾಯಮೂರ್ತಿಗಳು, ಇತಿಹಾಸ ತಜ್ಞರು ಮತ್ತು ಪರಿಣತರು ಈ ಗೊಂದಲದ ಗೂಡಿನ ವಿವಿಧ ಭಾಗಗಳ ಪರಾಮರ್ಶೆ ನಡೆಸಿದ್ದಾರೆ. ಯಾವುದೇ ಮತಧರ್ಮದ ಅನುಯಾಯಿಗಳು ಗಲಭೆ ಮತ್ತು ಹಿಂಸೆಗಳಲ್ಲಿ ತೊಡಗಕೂಡದೆಂಬುದು ನಿಜಕ್ಕೂ ಸಾರ್ವತ್ರಿಕವಾಗಿ ಅಂಗೀಕಾರಾರ್ಹವಾಗ ಬೇಕಾದ ಅಂಶವೇನೋ ಹೌದು. ಆದರೆ ಸರ್ವೋಚ್ಚ ನ್ಯಾಯಾಲಯದ ತೀರ್ಪು ಗಾತ್ರದಲ್ಲಿ ಅಗಾಧವಾಗಿದೆ (ಅದು ಒಂದು ಸಾವಿರ ಪುಟಗಳಿಗೂ ಹೆಚ್ಚಾಗಿದೆ ಯಂತೆ), ಆದರೆ ಸುಸಂಬದ್ಧವಾಗಿರಬೇಕೆಂಬ ನೆಲೆಯಲ್ಲಿ ತೀರಾ ಪ್ರಶ್ನಾರ್ಹವಾಗಿದೆ. ಇಪ್ಪತ್ತೇಳು ವರ್ಷಗಳ ಕಾಲ ಬೆಟ್ಟವನ್ನು ಅಗೆದು ಹಿಡಿಯಲಾದ ಇಲಿಯು ನ್ಯಾಯದ ವಸ್ತುನಿಷ್ಠತೆಗೆ ಸಮರ್ಥನೆ ನೀಡುವುದಿಲ್ಲ. ಜೊತೆಗೆ, ಅಂದು ಮಸೀದಿಯನ್ನು ಕೆಡವಿದ್ದು ಅಪರಾಧವೆಂದು ಸೂಚಿಸುವ ತೀರ್ಪು ಅಪರಾಧಿಗಳಿಗೆ ಶಿಕ್ಷೆ ವಿಧಿಸುವುದೆಂದು? ಸರ್ಕಾರವು ಮಂದಿರವನ್ನು ಕಟ್ಟಲು ಮತ್ತು ಅದಕ್ಕಾಗಿ ಹಣವನ್ನು ನೀಡಲು ಮುಂದಾಗುವುದು ಸರ್ವಥಾ ಯೋಗ್ಯವಲ್ಲ. ಆಸಕ್ತರು ಸ್ವತಂತ್ರವಾಗಿ ಯೋಜನೆ ಸಿದ್ಧಗೊಳಿಸಿ ಕಾರ್ಯ ನಿರ್ವಹಿಸಿಕೊಳ್ಳಬೇಕೆ ವಿನಾ ಸರ್ಕಾರದಿಂದ ನಿಧಿಯನ್ನು ಪಡೆಯಬಾರದು. ದೇಶವಿದೇಶಗಳಿಂದ ಸಾರ್ವಜನಿಕರು ಹಣ ಒಗ್ಗೂಡಿಸಲು ಸಿದ್ಧರಿರುವಾಗ ಸಾರ್ವಜನಿಕರ ಖಜಾನೆಯಿಂದ ಹಣದ ಸರಬರಾಜಿಗೆ ಅವಶ್ಯಕತೆ ಎಲ್ಲಿದೆ? ಸರ್ವೋಚ್ಚ ನ್ಯಾಯಾಲಯವು ಮುಂದೆಂದೂ ಇಷ್ಟು ಪ್ರಶ್ನಾರ್ಹವಾದ ತೀರ್ಪುಗಳನ್ನು ನೀಡದಿರಲೆಂದು ಆಶಿಸೋಣ. ಸದ್ಯದ ತೀರ್ಪನ್ನು ಪುನಃ ಪರಿಶೀಲಿಸಬೇಕು.

* * *

ನಮ್ಮ ರಾಜ್ಯದ ಒಂದು ಮಾಸಪತ್ರಿಕೆಯು ತನ್ನ ನವೆಂಬರ್ ೨೦೧೯ರ ಸಂಚಿಕೆಯಲ್ಲಿ ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿ ಕೇಂದ್ರ ಸಚಿವ ಶ್ರೀ. ಜಿತೇಂದ್ರ ಸಿಂಗ್ ಅವರು ಸಂವಿಧಾನದ ವಿಧಿ ೩೭೦ರ ರದ್ದತಿ ಕುರಿತು ಮಾತನಾಡಲು ಆಮಂತ್ರಿತರಾಗಿದ್ದರೂ "ಅದಕ್ಕೆ ಅವಕಾಶ ನೀಡಬಾರದು ಎಂದು ವಾಮಪಂಥಿ ವಿದ್ಯಾರ್ಥಿ ಸಂಘಗಳವರು ಗುಲ್ಲೆಬ್ಬಿಸಿದರು" ಎಂದು ದಾಖಲಿಸಿದೆ. ಸಚಿವರು ಭಾಷಣ ಮಾಡಿ ವಿದ್ಯಾರ್ಥಿಗಳ ಪ್ರಶ್ನೆಗಳೇನಾದರೂ ಇದ್ದರೆ ಅವಕ್ಕೆ ಉತ್ತರಿಸಬೇಕಾಗಿತ್ತೆಂಬುದು ಸರಿ. ಅದಕ್ಕೆ ತಕರಾರು ಕೂಡದು. ಅಂತೆಯೇ ಗುಲ್ಬರ್ಗ ಕೇಂದ್ರ ವಿಶ್ವವಿದ್ಯಾನಿಲಯವು ಆಮಂತ್ರಿಸಿದ್ದ ಡಾ॥ ಕನ್ಹಯ್ಯ ಕುಮಾರ ಅವರು ನೀಡಬೇಕಾಗಿದ್ದ "ಅಂಬೇಡ್ಕರ್ ಮತ್ತು ಭಾರತದ ಸಂವಿಧಾನ" ಕುರಿತ ಭಾಷಣಕ್ಕೆ ಸ್ವತಃ ಕೇಂದ್ರ ಸರ್ಕಾರವೇ ಕರ್ನಾಟಕದ ರಾಜ್ಯಪಾಲರ ಮುಖೇನ ನಿರ್ಬಂಧ ಹೇರಿದ್ದು ಕೇವಲ ಗುಲ್ಲು ಎನಿಸಿ ಕೊಳ್ಳುವುದಿಲ್ಲ, ಅದು ಸಂವಿಧಾನಬಾಹಿರವಾದ ಅಕೃತ್ಯ ವೆಂದು ದಾಖಲಿಸಬೇಕಾಗಿದೆ. ಅದಕ್ಕೂ ತಕರಾರು ಕೂಡದು. ಕೇಂದ್ರ ಸರ್ಕಾರದ ಹುನ್ನಾರವನ್ನು ಗುಲ್ಬರ್ಗದ ವಿದ್ಯಾರ್ಥಿಗಳು ಮತ್ತು ಸಾರ್ವಜನಿಕರು ನಿಷ್ಠೆಯಿಂದ ಹಿಮ್ಮೆಟ್ಟಿಸಿದ್ದು ಅಭಿನಂದನಾರ್ಹವಾಗಿದೆ.

* * *

ಡೇವಿಡ್ ಇಂಗಲ್‌ಮನ್ ಎಂಬ ಅಮೆರಿಕಾದ ಸುಪ್ರಸಿದ್ಧ ವೈದ್ಯರು "ದಿ ಬ್ರೇನ್" ಎಂಬ ಅದ್ಭುತ ಗ್ರಂಥವನ್ನು ಪ್ರಕಟಿಸಿ ಭೌತಿಕ ಮಿದುಳಲ್ಲದೆ ಬೇರಾವುದೂ ಮಾನವನ ಕ್ರಿಯೆಗೆ ಕಾರಣವಲ್ಲವೆಂದು ವಿಸ್ತಾರವಾಗಿ ಚರ್ಚಿಸಿದ್ದಾರೆ. ಅವರು ಸರ್ಬಿಯಾಕ್ಕೆ ಅಧ್ಯಯನಕ್ಕೆಂದು ಭೇಟಿ ನೀಡಿದ್ದರು; ಆಗ್ಗೆ ಅಲ್ಲಿ ಮತೀಯ ಘರ್ಷಣೆಗಳಿಂದಾಗಿ ಸಾವಿರಾರು ಮಂದಿ ಕೊಲ್ಲಲ್ಪಟ್ಟಿದ್ದರು. ಬೋಸ್ನಿಯ ಮುಂತಾದೆಡೆಗಳಲ್ಲಿ ಹತ್ಯೆಗೆ ಕುಮ್ಮಕ್ಕು ನೀಡಿದ ಅಂಶಗಳಲ್ಲಿ ಸರ್ಬಿಯಾದ ದೂರದರ್ಶನ ವಾಹಿನಿಗಳ ಪಾತ್ರ ಅಗಾಧವಾಗಿತ್ತೆಂದು ಈ ವೈದ್ಯರು ಅಂಕಿ–ಅಂಶ ಹಾಗೂ ವಿಶ್ಲೇಷಣೆ ನೀಡಿದ್ದಾರೆ. ಬೋಸ್ನಿಯಾದ ಜನ ಮಾಡಿಲ್ಲದಿದ್ದುದನ್ನು ಅವರು ಮಾಡಿದ್ದೆಂದು ಸರ್ಬಿಯಾದಲ್ಲಿ ದೂರದರ್ಶನ ವಾಹಿನಿಗಳು ಸತತವಾಗಿ ಸಂವಹನ ಮಾಡಿದ್ದವು. ಸರ್ಬಿಯಾದ ಜನರನ್ನು ರಾಕ್ಷಸೀ ಕೃತ್ಯಗಳಲ್ಲಿ ತೊಡಗಲು ಇದು ಪ್ರೇರೇಪಿಸಿತೆಂದು ಈಗಲ್‌ಮನ್ ವಾದಿಸಿದ್ದಾರೆ. "ಗುಂಪು ಘರ್ಷಣೆಗಳನ್ನು ನಿವಾರಿಸಲು ಮತ್ತು ಅಮಾನವೀಯ ಕೃತ್ಯಗಳನ್ನು ನಿರ್ಬಂಧಿಸಲು" ಶಿಕ್ಷಣ ಕ್ಷೇತ್ರವು ಜನರ ಮಿದುಳುಗಳನ್ನು ಸೂಕ್ತವಾಗಿ ಪರಿವರ್ತಿಸಬಲ್ಲದೆಂಬುದು ಅವರ ನಿರೀಕ್ಷೆ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಇದರ ತಿಳಿವು ಮೂಡುವು ದೆಂದು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅದಕ್ಕೆ ಯೋಜನಾಬದ್ಧ ಕ್ರಮಗಳನ್ನು ತೆಗೆದು ಕೊಳ್ಳುವುದು ಎಂದು? ವಿಶ್ವವಿದ್ಯಾನಿಲಯಗಳ ವಿಚಾರ ಸಂಕಿರಣಗಳು ಇತ್ತ ಗಮನ ಹರಿಸಿಯಾವೆ?




**ನಗದು ರಹಿತ ವ್ಯವಹಾರ**

ಹಳ್ಳಿಯಿಂದ ಬಂದು ತರಕಾರಿ ಮಾರುವ ಮುದುಕಿ ನಗರದ ಮನೆ ಮುಂದಿನ ಅಂಗಳದಲ್ಲಿ ಕುಳಿತು ವಠಾರದ ಎಲ್ಲರನ್ನೂ ಕೂಗಿ ಕರೆಯುತ್ತಾಳೆ. ತರಕಾರಿ ಬುಟ್ಟಿ, ತಕ್ಕಡಿ ಕೆಳಗಿರಿಸಿ ಬೇಕಾದವರಿಗೆ ಅಳತೆ ಮಾಡಿ ಅವರು ಕೇಳಿದ ಕಾಯಿಪಲ್ಲೆ ಕೊಡುತ್ತಾಳೆ. ನಗದು ಹಣ ಕೊಡಲು ಹೋದರೆ ನೀವು ಇನ್ನೂ ಯಾವ ಕಾಲದಲ್ಲಿದ್ದೀರವ್ವ ಆ ಹಣ ತಕೊಂಡು ಅದ್ಯಾರು ಎಣಿಸಿಕೋತ ಕೂಡಬೇಕು. ಎಲ್ಲಿಂದ ಅದಕ್ಕೆ ಚಿಲ್ಲರೆ ಕೊಡಬೇಕು. ಆ ಹಣ ತಗೊಂಡು ರಾತ್ರಿಯೆಲ್ಲಾ ದಿಂಬಿನ ಕೆಳಗಿಟ್ಟು ಕಾಯಬೇಕು. ಮನೆಯವರೋ ಹೊರಗಿನವರೋ ಕದ್ದು ಬಿಟ್ಟರೆ ಎಂಬ ಚಿಂತೆಮಾಡಿ ನಿದ್ದೆ ಕೆಡಿಸಿಕೋಬೇಕು. ಮುಂದಿನ ದಿನ ಕೆಲಸ ಬಿಟ್ಟು ಕ್ಯೂನಲ್ಲಿ ನಿಂತು ಬ್ಯಾಂಕಿನ ನಮ್ಮ ಖಾತೆಗೆ ಕಟ್ಟಿ ಪಾಸ್‌ಬುಕ್ಕಿನಲ್ಲಿ ಎಂಟ್ರಿ ಮಾಡಿಸಿಕೊಳ್ಳಬೇಕು ಅಂದ್ರೆ ಸಾಕು ಸಾಕಾಗೋಯ್ತದೆ. ಅದೇನು ಪಾಡಂತೀರಾ ಅನ್ನುತ್ತಾ ತನ್ನ ಮಡಿಲಿನಲ್ಲಿ ಇಟ್ಟುಕೊಂಡಿರುವ ಪುಟ್ಟ ಮೆಷಿನ್ ಮುಂದಿರಿಸಿ ಗ್ರಾಹಕರ ಕಾರ್ಡ್‌ಅನ್ನು ಅದರಲ್ಲಿ ಗೀರಿ ನಂತರ ಕೊಟ್ಟ ತರಕಾರಿ ಬೆಲೆಯನ್ನು ಅದರಲ್ಲಿ ನಮೂದಿಸಲು ಹೇಳುತ್ತಾಳೆ. ಅದು ಸರಿಯೆನಿಸಿದ ನಂತರ ಹೆಬ್ಬೆರಳನ್ನು ಅದರಲ್ಲಿ ಒತ್ತಿಸಿಕೊಳ್ಳುತ್ತಾಳೆ. ಅದರ ಬೆಲೆ ಉದಾಹರಣೆಗೆ ೪೨ ರೂಪಾಯಿ ಎಂದಿಟ್ಟುಕೊಳ್ಳಿ, ಅದು ಕ್ಷಣಾರ್ಧದಲ್ಲಿ ಗ್ರಾಹಕನ ಖಾತೆಯಿಂದ ಖರ್ಚಾಗಿ ಮಾರುವವಳ ಖಾತೆಗೆ ಜಮಾ ಆಗಿದ್ದಕ್ಕೆ ನಿರ್ದಿಷ್ಟ ಧ್ವನಿ ಸೂಚನೆ ಬರುತ್ತದೆ. ಆಗ ಮಾತ್ರ ತೂಕ ಮಾಡಿಟ್ಟ ತರಕಾರಿಯ ಬ್ಯಾಗ್‌ಅನ್ನು ಅವರ ಕೈಗೆ ಇರಿಸುತ್ತಾಳೆ. ಒಂದರ್ಧ ಗಂಟೆಯಲ್ಲಿ ಅವರಿಗೆಲ್ಲಾ ವ್ಯಾಪಾರ ಮಾಡಿ ಮೇಲೆದ್ದು ಬುಟ್ಟಿ ತಲೆಮೇಲಿರಿಸಿ ಮೆಷಿನ್‌ಅನ್ನು ಜತನದಿಂದ ಮಡಿಲಿಗೇರಿಸಿ ಇಟ್ಟುಕೊಳ್ಳುತ್ತಾಳೆ. ತೂಕ ಮಾಡುವ ತಕ್ಕಡಿ ತರುವುದನ್ನು ಮರೆತರೂ ಈ ಮೆಷಿನ್ ಮಾತೆಯನ್ನು ಮಡಿಲಲ್ಲಿ ತರುವುದನ್ನು ಮಾತ್ರ ಖಂಡಿತ ಮರೆಯುವುದಿಲ್ಲ ಎನ್ನುತ್ತಾಳೆ. ಅವಳು ಸಹ ತರಕಾರಿ ದೊಡ್ಡ ಮಾರ್ಕೆಟ್‌ನಲ್ಲಿ ಸಗಟು ಖರೀದಿಸುವಾಗ ಇದನ್ನೇ ಬಳಸುತ್ತಾಳೆ.

ಇನ್ನೊಂದು ಪ್ರಸಂಗ. ತಮ್ಮ ಬಹಳ ದಿನಗಳ ನಂತರ ಅಣ್ಣನ ಮನೆಗೆ ಬಂದಿದ್ದಾನೆ. ಅಣ್ಣನ ಮಗ ರವಿ ಚಿಕ್ಕಪ್ಪನಿಗೆ ಎರಡು ನೂರು ರೂಪಾಯಿ ಪಾಕೆಟ್ ಮನಿ ಕೊಡೆಂದು ಗಂಟುಬಿದ್ದಿದ್ದಾನೆ. ಚಿಕ್ಕಪ್ಪನ ಜೇಬಲ್ಲಿ ಅಷ್ಟು ದುಡ್ಡಿಲ್ಲ. ಅಸಹಾಯಕತೆ ವ್ಯಕ್ತಪಡಿಸಿದಾಗ ಚಿಕ್ಕಪ್ಪ ನಿನ್ನ ಬ್ಯಾಂಕ್ ಖಾತೆಯಲ್ಲಿ ಸಾಕಷ್ಟು ಶಿಲ್ಕು (ಬ್ಯಾಲೆನ್ಸ್) ಇದ್ದರೆ ಸಾಕು. ನಾನು ಯಾರ ಪತ್ರನೂ ನಗದು ತೆಗೆದುಕೊಳ್ಳುವುದಿಲ್ಲ. ನಿಮ್ಮ ಮೊಬೈಲ್ ಬಳಸಿಯೇ ನನಗೆ ೨೦೦ ರೂಪಾಯಿ ಕೊಡಿ ಎಂದು ಟಕಟಕನೆ ಬಟನ್ ಒತ್ತುವುದರ ಮೂಲಕ ಪಿನ್ ನಂ. ಬಳಸಿ ೨೦೦ ರೂಪಾಯಿ ಪಡೆದ. ಚಿಕ್ಕಪ್ಪನ ಖಾತೆಯಿಂದ ಕ್ಷಣಾರ್ಧದಲ್ಲಿ ಹಣ ವರ್ಗಾವಣೆ ಯಾದಂತೆಯೇ ರವಿ ಚಿಕ್ಕಪ್ಪನಿಗೆ ಥ್ಯಾಂಕ್ಸ್ ಹೇಳಿ ಸಂತೋಷದಲ್ಲಿ ಕುಣಿದಾಡಿದ.

ಇದರಂತೆ ಈಗಿನ ಯಾವುದೇ ಹಣಕಾಸಿನ ವ್ಯವಹಾರದಲ್ಲಿ ನಗದು ಬಳಸದೇ ಬರಿ ಡಿಜಿಟಲ್ ಆಗಿಯೇ ಬಳಸಬಹುದು. ಅದಕ್ಕೆಂದೇ ಈ ನಗದು ರಹಿತ ವ್ಯವಹಾರಕ್ಕೆ 'ಡಿಜಿಟಲ್ ಪೇಮೆಂಟ್' ಎನ್ನುವುದು.

ಜಗತ್ತಿನ ಎಲ್ಲ ಪ್ರಬುದ್ಧ ರಾಷ್ಟ್ರಗಳು ಈ ಡಿಜಿಟಲ್ ಪೇಮೆಂಟ್ ತಂತ್ರವನ್ನೇ ಅಳವಡಿಸಿಕೊಂಡಿವೆ. ಇದರಿಂದ ನೋಟು ಮುದ್ರಿಸುವ ಸಾವಿರಾರು ಕೋಟಿ ಹಣ ಉಳಿತಾಯವಾಗುವುದು. ನಮ್ಮ ದೇಶದಲ್ಲಿ ಪ್ರತಿ ವರ್ಷ ನೋಟುಮುದ್ರಣ, ನಾಣ್ಯ ಟಂಕಿಸುವ




> **ತಿದ್ದುಪಡಿ**
>
> ನವೆಂಬರ್ ೨೦೧೮ರ ಸಂಚಿಕೆಯಲ್ಲಿ ಪುಟ ೨೯: ವಿವೇಕಾನಂದರ ಪ್ರಕಾರ "ಇಸ್ಲಾಂ ಭಾರತದ ಐಕ್ಯತೆಗೆ ದೋಹದಕಾರಿ ಯಾಗಿದೆ." ಅಂದರೆ, ಐಕ್ಯತೆಗೆ ಪ್ರೇರಣೆ ನೀಡುವಂಥದು ಎಂದರ್ಥ. ಅದು ತಪ್ಪಾಗಿ 'ದ್ರೋಹಕಾರಿಯಾಗಿದೆ' ಎಂದು ಅಚ್ಚಾಗಿದೆ. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ. ಓದುಗರು 'ದೋಹದಕಾರಿ' ಎಂದು ಸರಿಯಾಗಿ ಓದಿಕೊಳ್ಳಬೇಕಾಗಿ ವಿನಂತಿ. 'ದೋಹದ' ಎಂಬುದು ಸಂಸ್ಕೃತ ಕವಿಗಳ ಒಂದು ಕವಿಸಮಯ. ಅಶೋಕ ವೃಕ್ಷವು ಹೂವು ನೀಡುವಂತೆ ಮಾಡಲು ಮಹಿಳೆಯೊಬ್ಬಳು ಅದಕ್ಕೆ ತನ್ನ ಕಾಲು ತಾಕಿಸಬೇಕಂತೆ. ಅದು 'ದೋಹದ'.
>
> – ಸಂ

ಪ್ರಕ್ರಿಯೆಗೇ ವೆಚ್ಚವಾಗುವ ಸುಮಾರು ೪೦,೦೦೦ ಕೋಟಿ ರೂಪಾಯಿಗಳ ಉಳಿತಾಯ. ಜತೆಗೆ ಅಕ್ರಮ ಹಣ ಶೇಖರಣೆಯ ಪ್ರಶ್ನೆ ಉದ್ಭವಿಸದು. ತಾನಾಗಿಯೇ ಜಾಲಿ ನೋಟಿನ ಮುದ್ರಣ ಮತ್ತು ಪ್ರಸಾರದ ಪೆಡಂಭೂತದ ನಿವಾರಣೆಯಾಗುವುದು. ಹಣ ದುಬ್ಬರದ ಸಮಸ್ಯೆ ನೀಗಿ ವಿಶ್ವಬ್ಯಾಂಕ್, ಐಎಂಎಫ್ ಇತರೇ ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ದೇಶದ ಆರ್ಥಿಕತೆಯ ಸುಭದ್ರತೆ ಬಗ್ಗೆ ಸದಭಿಪ್ರಾಯ ಮೂಡುತ್ತದೆ. ಆರ್ಥಿಕ ಸದೃಢತೆಗೆ ಪೂರಕವಾಗುತ್ತದೆ. ನಗದುರಹಿತ ವ್ಯವಹಾರವೆಲ್ಲಾ ಪಾರದರ್ಶಕವಾಗಿರುವುದರಿಂದ ಭ್ರಷ್ಟಾಚಾರ, ಅಕ್ರಮ ದಂಧೆ, ತೆರಿಗೆ ವಂಚನೆ ಮುಂತಾದ ಅನೇಕ ಪಿಡುಗುಗಳು ನಿಯಂತ್ರಿತಗೊಳ್ಳುತ್ತವೆ.

ನಗದುರಹಿತ ವ್ಯವಹಾರದ ಸಾಹಸಕ್ಕೆ ಬರುವ ಮೊದಲು ಕೆಲವು ಆರ್ಥಿಕ ಸುಧಾರಣೆಯನ್ನು ತರಬೇಕಾಗುತ್ತದೆ. ಏಕದಂ ಒಂದೇ ಹಂತದಲ್ಲಿ ಅದನ್ನು ಸಾಧಿಸಲಾಗದು. ಅದರಲ್ಲೂ ಬೃಹತ್ ಗ್ರಾಮೀಣ ಭಾರತದಲ್ಲಿ ಅನಕ್ಷರಸ್ಥರ ಸಂಖ್ಯೆ ಜಾಸ್ತಿಯಿರುವ ಸಾಮಾಜಿಕ ಸ್ಥಿತಿಗತಿಯ ವಾತಾವರಣದಲ್ಲಿ ಆ ಪರಿಕಲ್ಪನೆಯನ್ನು ನಾನಾ ಹಂತದಲ್ಲಿ (phased manner) ಜಾರಿಗೊಳಿಸಲಾಗುತ್ತಿದೆ. ಮೊದಲಿಗೆ ಪ್ಲಾಸ್ಟಿಕ್ ಕರೆನ್ಸಿ (ಬ್ಯಾಂಕ್‌ವ್ಯಾಪಾರ/ಖರೀದಿ/ವೀಸಾ ಕಾರ್ಡ್‌ಗಳು ಇತ್ಯಾದಿ); ಸುಲಭ ಹಾಗೂ ಕ್ಷಿಪ್ರಗತಿಯ ಯುಪಿಐ, ವಾಲೆಟ್, ಭೀಮ್, ಯೊನೊ, ಮೊಬೈಲ್/ನೆಟ್ ಬ್ಯಾಂಕಿಂಗ್ ಮುಂತಾದ ಪದ್ಧತಿಗಳ ಅನುಷ್ಠಾನ. ಇದೆಲ್ಲವನ್ನೂ ಪರಿಣಾಮಕಾರಿಯಾಗಿ ಅಷ್ಟೇ ಅನಿವಾರ್ಯವಾಗಿ ಬಳಸುವಂತೆ ಮಾಡಲು ಹೆಚ್ಚು ಮೌಲ್ಯದ ನೋಟಿನ ಅಮಾನ್ಯೀಕರಣಗೊಳಿಸುವುದು. ಜತೆಗೆ ಇತರೇ ಗುಣಕಗಳ ಚಲಾವಣೆಯ ಸರಬರಾಜನ್ನು ಕಡಿತಗೊಳಿಸುವುದು. ಆಗ ಹೆಚ್ಚು ನೋಟಿನ ಬಳಕೆ ಕಡಿಮೆಯಾಗಿ, ರವಾನೆ ಕಷ್ಟವಾಗಿ, ಕಡಿಮೆ ಮೌಲ್ಯದ ನೋಟಿನ ಅಗಾಧಸಂಖ್ಯೆಯ ಅಕ್ರಮ ಸಂಗ್ರಹಣೆ ದುಸ್ಸಾಧ್ಯವಾಗಿ, ಜನರು ವಿಧಿಯಿಲ್ಲದೆ ನಗದುರಹಿತ ವ್ಯವಹಾರ ಪದ್ಧತಿಯನ್ನು ಅಳವಡಿಸಿಕೊಳ್ಳಲೇಬೇಕಾಗುತ್ತದೆ.

ಒಂದಂತೂ ನಿಜ ಪ್ರಾರಂಭಿಕ ಅವಧಿಯಲ್ಲಿ ಜನಸಾಮಾನ್ಯರಿಗೆ ಹೊಸಪದ್ಧತಿಗೆ ಹೊಂದಿಕೊಳ್ಳುವುದು ಬಹಳ ಕಷ್ಟದಾಯಕವಾಗುತ್ತದೆ. ಆದರೆ ದಿನ ಕಳೆದಂತೆ ಹಂತಹಂತವಾಗಿ ನಗದುರಹಿತ ಪದ್ಧತಿಗೆ ಸರಿ ಹೊಂದಿಕೊಳ್ಳುತ್ತಾರೆ. ಆದರೆ ಐದುನೂರು, ಸಾವಿರ ರೂಪಾಯಿ ಮೌಲ್ಯದ ನೋಟು ರದ್ದತಿ ಮಾಡಿ ನಂತರದ ಸ್ವಲ್ಪದಿನಗಳಲ್ಲಿಯೇ ಏಕಾಏಕಿ ಅತಿಮೌಲ್ಯದ ಎರಡು ಸಾವಿರ ಮುಖಬೆಲೆಯ ನೋಟು ತಂದದ್ದು ರಾತ್ರಿ ಮಾಡುವ ಕಳ್ಳ ದಂಧೆಯನ್ನು ನಿಲ್ಲಿಸುವ ಬದಲಾಗಿ ದಿನಪೂರ್ತಿ ದಂಧೆಗೆ ಹೆಬ್ಬಾಗಿಲು ತೆರೆದುಕೊಟ್ಟ ವಿಘಟನೆ ಸಂಭವಿಸಿದ್ದು ವಿಪರ್ಯಾಸವೇ ಸರಿ.

ಬ್ಯಾಂಕ್ ಮತ್ತು ಇತರೆ ಹಣಕಾಸಿನ ವ್ಯವಹಾರ ಸಂಸ್ಥೆಗಳಲ್ಲಿ ಉದ್ಯೋಗ ಕಡಿತ, ನೋಟು ಮುದ್ರಣಾಲಯಗಳ ಸ್ಥಗಿತ ಮುಂತಾದ ಕೆಲವು ಪ್ರತಿಕೂಲ

ಪರಿಸ್ಥಿತಿ ಉದ್ಭವವಾದರೂ ಸಾರ್ವಜನಿಕರಿಗೆ ದೀರ್ಘಾವಧಿ ಅನುಕೂಲ ಮತ್ತು ಕ್ಷಿಪ್ರ ಪ್ರಕ್ರಿಯೆಯಲ್ಲಿ ಗಣನೀಯವಾಗಿ ಸಮಯ ಉಳಿತಾಯದ ನೆಮ್ಮದಿ ಲಭ್ಯವಾಗುವುದು ಸಾಧ್ಯ. ಒಂದು ಪಕ್ಷ ತಂತ್ರಜ್ಞಾನ ಜಗತ್ತಿನ ಸರ್ವ 'ಸರ್ವರ್'ಗಳು ದಿಢೀರ್ ಎಂದು 'ಸ್ಟ್ರೈಕ್' ಮಾಡಿ ಸ್ಥಗಿತಗೊಂಡರೆ, ಸಿಬ್ಬಂದಿ 'ಸ್ಟ್ರೈಕ್' ಗಿಂತಲೂ ಮಹಾಘಾತವಾಗುವುದನ್ನು ಅಲ್ಲಗಳೆಯ ಲಾಗದು. ಡಿಜಿಟಲ್ ತಂತ್ರಜ್ಞಾನದ ದುರ್ಬಳಕೆಯ ಅಪಾಯವೂ ಇದೆ. ಅದಕ್ಕೆ ಸೂಕ್ತ ಪರ್ಯಾಯ ಪರಿಹಾರೋಪಾಯ ಕಂಡುಹಿಡಿಯಲು ವಿಜ್ಞಾನ ತಂತ್ರಜ್ಞಾನದೊಂದಿಗೆ ಪರಿಣತರು ಸಜ್ಜಾಗಿರುತ್ತಾರೆ ಎಂದು ನಂಬೋಣ. ನಂಬಲೇಬೇಕು.

ಬಳ್ಳಾರಿ **ಡಾ॥ ವೆಂಕಟಯ್ಯ ಅಪ್ಪಗೆರೆ**

## ಮಾನ್ಯ ಸಂಪಾದಕರಲ್ಲಿ ಬಿನ್ನಹ!

ಸಂಪಾದಕೀಯ ತುಂಬ ಒಳ್ಳೆಯ ವಿಶ್ಲೇಷಣೆ ಯಾಗಿದೆ. ಇನ್ನೂ ಎಷ್ಟೋ ಹೇಳಬೇಕಾದುದು ಇದೆ ಅಂದರೆ ಅದು ಟೀಕೆಯಲ್ಲ. ಸಂಪಾದಕೀಯ ಈ ಕುರಿತ ವಿಸ್ತೃತ ಚರ್ಚೆಗೆ ಪೀಠಿಕೆ ಆಗಲಿ.

ಕರ್ನಾಟಕದ ರಚನೆಯನ್ನು ಸಾಧಿಸಿದ್ದು ಕನ್ನಡ ನಾಡಿನ ಸಾಹಿತಿಗಳು ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ. ಮೈಸೂರಿನ ರಾಜಕೀಯಕ್ಕೆ ಅದು ಬೇಕಿರಲಿಲ್ಲ. ಕರಾವಳಿ ಕರ್ನಾಟಕದ ಉದ್ಯಮಲೋಕ ಮತ್ತು ರಾಜಕೀಯಕ್ಕೆ ಅದರ ಬಗ್ಗೆ ಚಿಂತೆಯಿರಲಿಲ್ಲ. ಮಿಕ್ಕ ಪ್ರಾಂತ್ಯಗಳಲ್ಲಿ ಈ ಕುರಿತ ರಾಜಕೀಯದ ಸೊಲ್ಲಿರಲಿಲ್ಲ. ಸಾಹಿತ್ಯ ಸಮ್ಮೇಳನಗಳು ಮಾತ್ರ ಮುಂಬಯಿ, ಮದ್ರಾಸ್ ಮತ್ತು ಹೈದರಾಬಾದ್‌ಗಳಲ್ಲೂ ನಡೆಯುತ್ತಿದ್ದು, ಅವುಗಳ ಕಾರಣ ಏಕೀಕರಣದ ಆಸೆ ಕನ್ನಡಿಗರಲ್ಲಿ ಕುದುರಿಸಲು ಸಾಧ್ಯವಾಗಿತ್ತು.

ಕರ್ನಾಟಕ ಏಕೀಕರಣ ಪರ ಹೋರಾಟಗಾರರು ಬೆಳಗಾವಿಯ ಅಖಿಲ ಭಾರತ ಕಾಂಗ್ರೆಸ್ ಸಮ್ಮೇಳನ ದಲ್ಲಿ ಕನ್ನಡಿಗರು ಭಾಗವಹಿಸಲು ಷರತ್ತು ಹಾಕಿದರು. ಅದು ಕರ್ನಾಟಕ ಪ್ರದೇಶದಲ್ಲಿ ನಡೆಯುತ್ತಿದ್ದ ಪ್ರಪ್ರಥಮ ಸಮಾವೇಶ. ಗಾಂಧೀಜಿ ಅಂಥ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದು ಒಂದೇ ಸಲ. ಅದು ಬೆಳಗಾವಿಯಲ್ಲಿ. ಅವರು ಭಾಷಾವಾರು ಪ್ರಾಂತ್ಯವನ್ನು ರಚಿಸುವುದು ಸ್ವತಂತ್ರ ಭಾರತದ ಆದ್ಯತೆ ಅಂತ ಸೂಚನೆ ಸ್ವೀಕರಿಸಿದರು. ಈ ಸಮ್ಮೇಳನದ ತರುವಾಯ ಆಂಧ್ರದಲ್ಲಿ ನಡೆದ ಸಮಾವೇಶದಲ್ಲಿ ಇದನ್ನು ಸ್ಪಷ್ಟ ನೀತಿಯಾಗಿ ಮತ್ತೊಮ್ಮೆ ಕಾಂಗ್ರೆಸ್ ಸ್ವೀಕರಿಸಿತು. ಸ್ವಾತಂತ್ರ್ಯ ಬಂದಮೇಲೂ ನಾಯಕರು ಈ ಕುರಿತು ತೀರ್ಮಾನಿಸಲು ೧೯೫೬ರ ವರೆಗೆ ತಡಮಾಡಿದರು. ಆಂಧ್ರಪ್ರದೇಶ ಬೇಕೆಂದು ಉಪವಾಸ ಸತ್ಯಾಗ್ರಹ ಕೈಗೊಂಡಿದ್ದ ಶ್ರೀರಾಮುಲು ಅವರು ಜೀವತೆತ್ತ ಮೇಲಷ್ಟೆ ಕೇಂದ್ರ ಮಣಿದು ಭಾಷಾ ವಾರು ಪ್ರಾಂತ್ಯ ರಚಿಸಲು ಖಚಿತವಾಗಿ ಮುಂದಾಯಿತು.

೧೯೫೬ರಲ್ಲಿ ಕರ್ನಾಟಕ ಆದರೂ ಆ ಹೆಸರಿಂದ ಕರೆಯಲು ೧೯೭೩ಕ್ಕೆ ಕಾಯಬೇಕಾಯ್ತು. ಅರಸು ಬರಬೇಕಾಯ್ತು. ನೀವು ಹೇಳಿರುವಂತೆ, ಭಾರತವೋ ಕರ್ನಾಟಕವೋ ಎರಡೂ ತಮ್ಮಲ್ಲಿ ವಿಲೀನಗೊಂಡ ಬಿಡಿ ಬಿಡಿ ಪ್ರದೇಶಗಳ ನಡುವೆ ಸಾಮರಸ್ಯ ಕುದುರಿಸಿ ಒಂದು ರಾಷ್ಟ್ರೀಯತೆಯ ಮನೋಭಾವ ಬೆಳೆಸುವಂತಹ ಆಡಳಿತ ನೀಡಲು ವಿಫಲವಾಗಿವೆ. ಹಲವಾರು ರಾಷ್ಟ್ರೀಯತೆಗಳ ನಡುವೆ ಸಂವಿಧಾನ ಬದ್ಧ ಐಕ್ಯತೆಯನ್ನು ಸಾಧಿಸಲು ಸೋತಿವೆ. ಪ್ರಸಕ್ತ ಪರಿಸ್ಥಿತಿಯಲ್ಲಿ ರಾಷ್ಟ್ರೀಯ ಸ್ವಯಂ ಸೇವಕ ಸಂಘ ವೆನ್ನುವ ಹಿಂದೂತ್ವ-ಫ್ಯಾಸೀ ಸಂಸ್ಥೆ ಅಧಿಕಾರ ಹಿಡಿದಿದೆ. ಅದು ಬಿಡಿ ಬಿಡಿ ರಾಷ್ಟ್ರೀಯತೆಗಳನ್ನು ಹಾಗೂ ಭಾಷಾವಾರು ರಾಜ್ಯಗಳನ್ನು ಒಪ್ಪುವುದಿಲ್ಲ. ಅದು ಈ ನಮ್ಮ ಭಾರತವನ್ನು ೫೦ ಸಣ್ಣ ರಾಜ್ಯಗಳಾಗಿ ವಿಂಗಡಿಸಿ, ಹಿಂದೀ ಭಾಷೆಯನ್ನು ರಾಷ್ಟ್ರ ಭಾಷೆಯಾಗಿ ಹೇರಿ ಕೇಂದ್ರ ಆಡಳಿತ ರಚನೆ ಮಾಡುವ ಉದ್ದೇಶ ಉಳ್ಳದ್ದು. ಈ ಗಂಭೀರ ಪರಿಸ್ಥಿತಿಯ ತಿಳಿವು ಕರ್ನಾಟಕದ ಪ್ರಸ್ತುತ ರಾಜಕೀಯಕ್ಕೆ ಇಲ್ಲ. ಹೀಗಿರುವಾಗ ಕರ್ನಾಟಕದ ಉಳಿವಿಗೆ ಮತ್ತೊಮ್ಮೆ ಸಾಹಿತ್ಯ ಸಾಂಸ್ಕೃತಿಕ ವಲಯ ಒಗ್ಗಟ್ಟಿನಿಂದ ಕೆಲಸ ಮಾಡಬೇಕಾದ ತುರ್ತು ಬಂದಿದೆ.

ಬೆಂಗಳೂರು **ಪಾರ್ಥಸಾರಥಿ**

"ವ್ಯಾಸರಾಯತೀರ್ಥರು ಕನಕದಾಸರ ಗುರುಗಳಲ್ಲವೇ ಅಲ್ಲ" ಎಂಬ ಲೇಖನದಲ್ಲಿ ಪ್ರೊ॥ ಜ್ಯೋತಿ ಹೊಸೂರ ಅವರು ಕನಕದಾಸರ ಕೃತಿ, ಕೀರ್ತನೆಗಳ ಓದಿನ ಕ್ರಮದ ಬಗ್ಗೆ ಮಾತಾಡಿದ್ದಾರೆ. ಇಂದು ಓದುಗರು, ವಿದ್ವಾಂಸರು, ಸಂಶೋಧನಾ ವಿದ್ಯಾರ್ಥಿಗಳು, ವೇದಿಕೆಯ ಮೇಲೆ ಭಾಷಣ ಮಾಡುವವರು ಕನಕದಾಸರು ಬರೆದಂಥ ಕೃತಿಗಳನ್ನು, ಕೀರ್ತನೆಗಳನ್ನಿಟ್ಟುಕೊಂಡು ಮಾತಾಡು ತ್ತಾರೆಯೇ ಎನ್ನುವ ಪ್ರಶ್ನೆ ಬಂದಾಗ ಪ್ರೊ॥ ಜ್ಯೋತಿ ಹೊಸೂರರು ಕೊಡುವ ಉತ್ತರ ಇಲ್ಲ ಎಂಬುದಾಗಿ ಹೇಳಿದ್ದಾರೆ. ಕಲ್ಪನೆಯ ವಿಚಾರಗಳನ್ನು, ಮೌಢ್ಯವನ್ನು ಬಿತ್ತುವಂಥ ಕಟ್ಟು ಕಥೆಗಳನ್ನು, ಘಟನೆಗಳನ್ನು, ಸನ್ನಿವೇಶಗಳನ್ನಿಟ್ಟುಕೊಂಡು ಮಾತಾಡುತ್ತಾರೆಂಬ ವಿಚಾರದ ಬಗ್ಗೆ ಲೇಖನದ ಉದ್ದಕ್ಕೂ ಹೇಳಿದ್ದಾರೆ. ಲೇಖನದ ಮುಖ್ಯ ಉದ್ದೇಶ ಕನಕದಾಸರಿಗೆ ವ್ಯಾಸರಾಯ ತೀರ್ಥರು ಗುರುವೇ ಅಲ್ಲ ಎಂದು ವಾದಿಸುತ್ತಾರೆ. ಇದರ ಜೊತೆಗೆ ಕನಕದಾಸರು ಎಲ್ಲಿಯೂ ವ್ಯಾಸರಾಯರು ಗುರು ಎಂದು ಹೇಳಿಕೊಂಡಿಲ್ಲ ಎಂಬ ಅಂಶವನ್ನು ಲೇಖನದಲ್ಲಿ ಖಚಿತಪಡಿಸಿದ್ದಾರೆ.

ಕನಕದಾಸರು ಬರೆದಿರುವ ಕೃತಿಗಳು, ಕೀರ್ತನೆ ಗಳನ್ನಿಟ್ಟುಕೊಂಡು ನಾವು ಇಂದಿನ ಜನಾಂಗಕ್ಕೆ ಕನಕರ ವಿಚಾರಗಳು ಉಪಯೋಗವಾಗುತ್ತವೆಯೇ, ಇಲ್ಲವೇ ಎಂಬುದರ ಚರ್ಚೆ, ವಿಚಾರ ಸಂಕಿರಣಗಳು ನಡೆಯಬೇಕೆಂಬ ಆಶಯ ಅವರದಾಗಿದೆ. ನಾವು ಇಂದು ಕನಕದಾಸರ ಭಾವಚಿತ್ರಕ್ಕೆ, ಪ್ರತಿಮೆಗೆ, ಪ್ರಚಾರಕ್ಕೆ, ಲಾಭಕ್ಕೆ ಹೆಚ್ಚಿನ ಮಹತ್ವ, ಪ್ರಾಮುಖ್ಯತೆ ಕೊಟ್ಟಿದ್ದೇವೆ. ಕವಿಗೆ ಹಾಡುಗಾರರ, ರಾಜಕೀಯ ನಾಯಕರ, ಧಾರ್ಮಿಕ ನಾಯಕರ, ಜನಸಾಮಾನ್ಯರ, ಓದುಗರ ದೊಡ್ಡ ಬಳಗವಿದೆ. ಆದರೇ ಅವರು ಬರೆದಂಥ ಕೃತಿಗಳನ್ನು, ಕೀರ್ತನೆಗಳನ್ನಿಟ್ಟುಕೊಂಡು ವೇದಿಕೆಯ ಮೇಲೆ ಮಾತನಾಡುವವರು, ಚರ್ಚಿಸುವವರು ಕಡಿಮೆ.

ಇನ್ನು ಜ್ಯೋತಿ ಹೊಸೂರರು ಎತ್ತಿರುವ ಪ್ರಶ್ನೆಗೆ ಬರುತ್ತೇನೆ - 'ಗುರು' ಎಂದರೆ ಸದಾ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸುವವರನ್ನು 'ಗುರು' ಎಂದು ಕರೆಯ ಬಹುದು. ಟೀ ಮಾರುವ ಕೆಲಸವಿರಬಹುದು, ಬಡಗಿ ಕೆಲಸವಿರಬಹುದು, ಮಡಿಕೆ ಮಾಡುವ ಕೆಲಸವಿರ ಬಹುದು, ಕೆತ್ತನೆ ಕೆಲಸವಿರಬಹುದು, ಓದಿನ ಕೆಲಸವಿರ ಬಹುದು. ಆಯಾ ಕ್ಷೇತ್ರದಲ್ಲಿ ಚಟುವಟಿಕೆಯಿಂದ ಓಡಾಡಿಕೊಂಡು ಜನರಿಗೆ ಉಪಯೋಗವಾಗುವಂಥ ಕೆಲಸ ಕಾರ್ಯ ಮಾಡುವವರನ್ನು 'ಗುರು' ಎಂದು ಕರೆಯಲು ಅಡ್ಡಿಯಿಲ್ಲ. ವ್ಯಾಸರಾಯರು ಈ ರೀತಿಯ ಗುರು ಪರಂಪರೆಗೆ ಸೇರಿದವರಲ್ಲ. ಕನಕದಾಸರು ಅಧಿಕಾರ, ಸಂಪತ್ತಿನ ವ್ಯಾಮೋಹದಿಂದ ಬಿಡುಗಡೆ ಯಾದ ಮೇಲೆ ಜನರ ನಡುವೆ ಓಡಾಡಿಕೊಂಡು ಜನಾಂಗಕ್ಕಾಗುತ್ತಿದ್ದ ಶೋಷಣೆ, ಅನ್ಯಾಯ, ಅಸಮಾನತೆ ಜಾತೀಯತೆ, ರಾಜಕೀಯ, ಸಂಸ್ಕೃತಿ, ಧರ್ಮದಲ್ಲಿ ಆಗುತ್ತಿದ್ದ ನೋವುಗಳನ್ನು, ಸಮಸ್ಯೆಗಳನ್ನು ಅನುಭವಿಸಿ ವಿರೋಧಿಸುವವರೆಗೂ ವಿರೋಧಿಸಿ, ಬಂಡಾಯಗಾರರಾಗಿ ಸಾಮಾನ್ಯ ಜನಕ್ಕೆ ಸಮಾನತೆ ದೊರಕಿಸಿಕೊಡುವಂಥ ಕೆಲಸ ಕಾರ್ಯ ಮಾಡಿದ ಮಹಾನ್ ಚೇತನ. ಇಂಥ ಜಂಗಮ ಸ್ವರೂಪದ ವ್ಯಕ್ತಿಯ ವಿಚಾರಗಳನ್ನು ನಾವು ಸ್ಥಾವರ ರೂಪಕ್ಕಿಳಿಸಿ ಬಾಳೆಹಣ್ಣಿನ ಪ್ರಸಂಗ, ಕನಕನಕಿಂಡಿ, ವ್ಯಾಸರಾಯರ ಶಿಷ್ಯ ಈ ರೀತಿಯ ಕಲ್ಪನೆಯ ಕಥೆಗಳನ್ನು ಹೇಳುತ್ತಾ ಕಾಲ ಕಳೆಯುತ್ತಿದ್ದೇವೆ.

ಕನಕದಾಸರು, ವ್ಯಾಸರಾಯರು ಅಸಮಾನತೆಯ, ಜಾತೀಯತೆಯ ವಿರುದ್ಧ ಪ್ರತಿಭಟಿಸಿದ್ದಾರೆಯೇ, ಒಟ್ಟಾಗಿ ಸೇರಿ ಓಡಾಡಿಕೊಂಡು ಜನಗಳಿಗೆ ಹರಡಿ ಕೊಂಡಿರುವ ರೋಗಗಳನ್ನು ಗುಣಪಡಿಸುವುದಕ್ಕೆ ಕೆಲಸ ಕಾರ್ಯ ಮಾಡಿದ್ದಾರೆಯೇ ಇಂಥ ವಿಚಾರಗಳಿದ್ದರೆ ಚರ್ಚೆ ನಡೆಯಲಿ ಮುಕ್ತವಾಗಿ ನಾವು ಸ್ವೀಕರಿಸೋಣ.

ಕನಕದಾಸರು ಭಕ್ತಿ, ಅಧ್ಯಾತ್ಮದ ಕಾರ್ಯ ಚಟುವಟಿಕೆ ಗಳ ಮೂಲಕ ಮಾನವನ ಅಭಿವೃದ್ಧಿಗೆ, ಚಿಂತನೆಗೆ ಅವಕಾಶ ಮಾಡಿಕೊಡುವಂಥ ವಿಚಾರಗಳನ್ನು "ರಾಮಧಾನ್ಯ ಚರಿತ್ರೆ" ಅವರ ಕೆಲವು ಕೀರ್ತನೆಗಳಲ್ಲಿ ಹೇಳಿದ್ದಾರೆ. ಇಂದಿನ ಭಕ್ತಿ, ಅಧ್ಯಾತ್ಮ, ಧರ್ಮ ಹಣದ ವಹಿವಾಟಿನ ವ್ಯಕ್ತಿ ಪ್ರತಿಷ್ಠೆಯ ಕಾರ್ಯ ಚಟುವಟಿಕೆಗಳಾಗಿ ಮುಂದುವರಿಯುತ್ತಿವೆ. ಸಮಾಜ ಬದಲಾವಣೆಗೆ ಬಳಕೆಯಾಗಿದ್ದ ಭಕ್ತಿ, ಅಧ್ಯಾತ್ಮ ಇಂದು ಲಾಭದಾಯಕವಾದ ಮೌಲ್ಯವಾಗಿ ಪರಿವರ್ತನೆ ಯಾಗಿದೆ. ವ್ಯಕ್ತಿ ಒಬ್ಬನ ಅಭಿವೃದ್ಧಿಯ, ಪ್ರತಿಷ್ಠೆಯ ಕ್ರಿಯೆಯಾಗಿ ಮುಂದುವರಿಯುತ್ತಿದೆ.

ಕನಕದಾಸರು ಬರೆದಿರುವ ಕೃತಿಗಳು, ಕೀರ್ತನೆ ಗಳನ್ನು ಓದಿ, ಅವು ಇಂದು ನಮಗೆ ಯಾವ ರೀತಿಯಲ್ಲಿ ಉಪಯುಕ್ತವಾಗುತ್ತವೆ ಎಂಬಂತಹ ಮಹತ್ವದ ಚರ್ಚೆಗಳು, ವಿಚಾರ ಸಂಕಿರಣಗಳು, ಸಮಾರಂಭಗಳು ನಡೆಯಲಿ ಎಂಬ ಆಶಾ ಭಾವನೆ ಜನಗಳಲ್ಲಿ, ಓದುಗರಲ್ಲಿ, ರಾಜಕೀಯ ನಾಯಕರಲ್ಲಿ, ವಿದ್ವಾಂಸರಲ್ಲಿ, ಧಾರ್ಮಿಕ ನಾಯಕರಲ್ಲಿ ಬರಲಿ ಎಂಬ ಉದ್ದೇಶಕ್ಕಾಗಿ, ಈ ಲೇಖನದಲ್ಲಿ ಬಂದಿರುವ ವಿಚಾರಗಳ ಸಮರ್ಥನೆಗೆ ಇಷ್ಟೆಲ್ಲ ಹೇಳಬೇಕಾಯಿತು.

ಬೆಂಗಳೂರು **ಡಾ॥ ನರಸಿಂಹಮೂರ್ತಿ ಹೂವಿನಹಳ್ಳಿ**

# ಭಾರತದ ಆರ್ಥಿಕ ಬೇನೆಯ ಹಿಂದಿನ ಕಾರಣ



ಭಾರತದ ಆರ್ಥಿಕತೆಯ ಸ್ಥಿತಿ ತುಂಬ ಆತಂಕಕಾರಿಯಾಗಿದೆ. ನಾನು ಇದನ್ನು ಒಬ್ಬ ವಿರೋಧ ರಾಜಕೀಯ ಪಕ್ಷದ ಸದಸ್ಯನಾಗಿ ಹೇಳುತ್ತಿಲ್ಲ. ಈ ದೇಶದ ಪ್ರಜೆಯಾಗಿ, ಅರ್ಥಶಾಸ್ತ್ರದ ವಿದ್ಯಾರ್ಥಿಯಾಗಿ ಹೇಳುತ್ತಿದ್ದೇನೆ. ಈ ವೇಳೆಗೆ ಎಲ್ಲರಿಗೂ ವಾಸ್ತವ ಸ್ಥಿತಿ ಸ್ಪಷ್ಟವಾಗಿದೆ. ನಾಮಿನಲ್ ಜಿಡಿಪಿ ಬೆಳವಣಿಗೆಯ ದರ ೧೫ ವರ್ಷಗಳಲ್ಲೇ ಕನಿಷ್ಠ ಮಟ್ಟಕ್ಕೆ ಕುಸಿದಿದೆ. ನಿರುದ್ಯೋಗ ದರ ೪೫ ವರ್ಷಗಳಲ್ಲೇ ಗರಿಷ್ಠ ಮಟ್ಟ ತಲುಪಿದೆ. ಗ್ರಾಹಕರ ಬಳಕೆಯ ಪ್ರಮಾಣ ನಾಲ್ಕು ದಶಕಗಳಲ್ಲಿ ಎಂದೂ ಇಷ್ಟು ಕುಸಿದಿರಲಿಲ್ಲ. ಬ್ಯಾಂಕುಗಳಲ್ಲಿ ಮರುಪಾವತಿಯಾಗದ ಸಾಲದ ಸ್ಥಿತಿ ಎಂದೂ ಇಷ್ಟು ಹದಗೆಟ್ಟಿರಲಿಲ್ಲ. ವಿದ್ಯುತ್ ಉತ್ಪಾದನೆಯ ಪ್ರಮಾಣ ಕಳೆದ ೧೫ ವರ್ಷಗಳಲ್ಲೇ ಕನಿಷ್ಠ ಮಟ್ಟದಲ್ಲಿದೆ. ಈ ಗರಿಷ್ಠ ಕನಿಷ್ಠಗಳ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಜೊತೆಗೆ ಅಷ್ಟೇ ಸಂಕಟವೂ ಆಗುತ್ತದೆ. ಇವೆಲ್ಲಾ ಕಳವಳಕಾರಿಯಾದ ಅಂಕಿಅಂಶಗಳು ಅನ್ನೋದು ನಿಜ. ಆದರೆ ದೇಶದ ಆರ್ಥಿಕ ಸ್ಥಿತಿಯ ಬಗ್ಗೆ ನಾವು ಅಷ್ಟೊಂದು ಆತಂಕಗೊಳ್ಳುವುದಕ್ಕೆ ಈ ಮಾಹಿತಿಗಳೇ ಕಾರಣವಲ್ಲ. ಇವೆಲ್ಲಾ ಇಂದು ನಮ್ಮ ದೇಶದ ಆರ್ಥಿಕತೆಯನ್ನು ಕಾಡುತ್ತಿರುವ ಗಂಭೀರವಾದ ರೋಗದ ಲಕ್ಷಣಗಳು ಅಷ್ಟೇ.

**ಮೂಲ : ಮನಮೋಹನ್ ಸಿಂಗ್**
**ಅನುವಾದ : ಟಿ. ಎಸ್. ವೇಣುಗೋಪಾಲ್**

ಒಂದು ದೇಶದ ಸಮಾಜದ ಸ್ಥಿತಿ ಆ ದೇಶದ ಆರ್ಥಿಕ ಸ್ಥಿತಿಯನ್ನು ನಿರ್ಧರಿಸುತ್ತದೆ, ಅದನ್ನು ಪ್ರತಿಫಲಿಸುತ್ತದೆ. ಜನರ ಹಾಗೂ ಸಂಸ್ಥೆಗಳ ನಡುವಿನ ಸಾಮಾಜಿಕ ಸಂಬಂಧಗಳು, ಒಡನಾಟಗಳು ಒಟ್ಟಾರೆಯಾಗಿ ಒಂದು ದೇಶದ ಆರ್ಥಿಕತೆಯನ್ನು ನಿರ್ಧರಿಸುತ್ತವೆ. ಹೀಗೆ ಆರ್ಥಿಕತೆಯ ಪ್ರಗತಿಯನ್ನು ಬೆಳೆಸುವ, ಪೋಷಿಸುವ ಸಾಮಾಜಿಕ ಒಡನಾಟ, ಸಂಬಂಧಗಳು ನಿಂತಿರುವುದೇ ಪರಸ್ಪರ ನಂಬಿಕೆ ಹಾಗೂ ಆತ್ಮವಿಶ್ವಾಸದ ಮೇಲೆ. ಅವುಗಳೇ ಅದರ ಆಧಾರಸ್ತಂಭ. ಆದರೆ ಇಂದು ಅಂತಹ ವಿಶ್ವಾಸ ಹಾಗೂ ನಂಬಿಕೆಯನ್ನು ಆಧರಿಸಿದ ನಮ್ಮ ಸಾಮಾಜಿಕ ನೇಯ್ಗೆಯೇ ಹರಿದು ಛಿದ್ರಗೊಂಡಿದೆ.

**ಕೈಗಾರಿಕೋದ್ಯಮಿಗಳು ಹೆದರಿಕೆಯಲ್ಲಿ ಬದುಕುತ್ತಿದ್ದಾರೆ**

ಇಂದು ನಮ್ಮ ಸಮಾಜವನ್ನು ಆವರಿಸಿರುವ ಭಯದ ವಾತಾವರಣ ಸ್ಪಷ್ಟವಾಗಿ ಕಾಣುತ್ತಿದೆ. ಸರ್ಕಾರಿ ಅಧಿಕಾರಿಗಳ ಕಿರುಕುಳದ ಭೀತಿಯಲ್ಲಿ ನಾವು ಬದುಕುತ್ತಿದ್ದೇವೆ ಎಂದು ಹಲವು ಕೈಗಾರಿಕೋದ್ಯಮಿಗಳು ನನಗೆ ಹೇಳುತ್ತಿದ್ದಾರೆ. ಬ್ಯಾಂಕರುಗಳು ಹೊಸ ಸಾಲ ಕೊಡಲು ಹಿಂದೇಟು ಹಾಕುತ್ತಿದ್ದಾರೆ. ಪ್ರತೀಕಾರದ ಭಯ ಅವರನ್ನು ಕಾಡುತ್ತಿದೆ. ಉದ್ದಿಮೆದಾರರು ಹೊಸ ಪ್ರಾಜೆಕ್ಟುಗಳನ್ನು ಪ್ರಾರಂಭಿಸಲು ಹಿಂಜರಿಯುತ್ತಿದ್ದಾರೆ. ಯಾವುದೋ ದುರುದ್ದೇಶಕ್ಕೆ ಬಲಿಯಾಗಿ ತಮ್ಮ ಪ್ರಾಜೆಕ್ಟುಗಳು ವಿಫಲವಾಗಬಹುದು ಎಂಬ ಆತಂಕ ಅವರನ್ನು ಬಾಧಿಸುತ್ತಿದೆ. ತಾಂತ್ರಿಕ ಸ್ಟಾರ್ಟ್‌ಅಪ್‌ಗಳು ಆರ್ಥಿಕ ಬೆಳವಣಿಗೆಗೆ ಹಾಗೂ ಉದ್ಯೋಗದ ಸೃಷ್ಟಿಗೆ ಪ್ರಧಾನವಾದ ನೆಲೆ. ಇಂದು ಅದೇ ನಿರಂತರ ಬೇಹುಗಾರಿಕೆಯ ಹಾಗೂ ತೀವ್ರ ಅನುಮಾನದ ನೆರಳಿನಲ್ಲಿ ಬದುಕುತ್ತಿರುವಂತೆ ಭಾಸವಾಗುತ್ತಿದೆ. ಸರ್ಕಾರ ಮತ್ತು ಇತರ ಸಂಸ್ಥೆಗಳಲ್ಲಿ ನಿಯಮಗಳನ್ನು ರೂಪಿಸಬೇಕಾದವರೇ ನಿಜ ಹೇಳುವುದಕ್ಕೆ ಹೆದರುತ್ತಿದ್ದಾರೆ. ನೀತಿಗಳನ್ನು ರೂಪಿಸುವ ಸಂದರ್ಭದಲ್ಲಿ ಪ್ರಾಮಾಣಿಕವಾಗಿ ಚರ್ಚೆಯಲ್ಲಿ ಪಾಲ್ಗೊಳ್ಳಲು ಹೆದರುತ್ತಿದ್ದಾರೆ. ಆರ್ಥಿಕ ಪ್ರಗತಿಯ ಏಜೆನ್ಸಿಗಳಾಗಿ ದುಡಿಯುತ್ತಿರುವ ಜನರಲ್ಲಿ ತೀವ್ರವಾದ ಹೆದರಿಕೆ ಹಾಗೂ ಅಪನಂಬಿಕೆ ನೆಲೆನಿಂತಿದೆ. ಒಂದು ಸಮಾಜದಲ್ಲಿ ವಿಶ್ವಾಸ, ನಂಬಿಕೆಗಳೇ ಇಲ್ಲದೆ ಹೋದರೆ ಅದು ಅಲ್ಲಿಯ ಆರ್ಥಿಕ ಸಂಬಂಧದ ಮೇಲೆ ದುಷ್ಪರಿಣಾಮ ಬೀರುತ್ತದೆ. ಆರ್ಥಿಕತೆಗೆ ಹಾನಿಯಾಗುತ್ತದೆ. ಜನ ಹಾಗೂ ಸಂಸ್ಥೆಗಳ ನಡುವಿನ ಸಂಬಂಧ, ಒಡನಾಟ ಹಾಳಾದರೆ ಆರ್ಥಿಕ ಚಟುವಟಿಕೆಯೂ ನಿಧಾನಗೊಳ್ಳುತ್ತದೆ. ಕೊನೆಗೆ ಆರ್ಥಿಕತೆ ಸ್ಥಗಿತಗೊಳ್ಳುತ್ತದೆ. ಜನರನ್ನು ಆವರಿಸಿಕೊಂಡಿರುವ ಭಯ, ಅಪನಂಬಿಕೆ ಮತ್ತು ವಿಶ್ವಾಸದ ಕೊರತೆಯ ಈ ದುಸ್ಥಿತಿಯೇ ಈವತ್ತು ನಾವು ನೋಡುತ್ತಿರುವ ಆರ್ಥಿಕ ಮಂದಗತಿಗೆ ಪ್ರಮುಖವಾದ ಮೂಲಭೂತ ಕಾರಣ.

ಇವುಗಳ ಜೊತೆಗೆ ಅಸಹಾಯಕತೆಯ ಸ್ಥಿತಿಯು ಸೇರಿಕೊಂಡಿದೆ. ತಮ್ಮ ಕುಂದುಕೊರತೆಗಳನ್ನು ಹೇಳಿಕೊಳ್ಳಲು ನೊಂದವರಿಗೆ ಅವಕಾಶವೇ ಇಲ್ಲ. ಸ್ವತಂತ್ರ ಸಂಘಟನೆಗಳಾದ ಮಾಧ್ಯಮಗಳು, ನ್ಯಾಯಾಂಗ, ನಿಯಂತ್ರಕ ಅಧಿಕಾರಿಗಳು ಮತ್ತು ತನಿಖಾ ಸಂಸ್ಥೆಗಳು ಸಾರ್ವಜನಿಕರ ವಿಶ್ವಾಸ ಕಳೆದುಕೊಳ್ಳುತ್ತಿವೆ. ಹಾಗಾಗಿ ತಮಗೆ ತೆರಿಗೆಗೆ ಸಂಬಂಧಿಸಿದಂತೆ ಅನಾವಶ್ಯಕವಾಗಿ ಕಿರುಕುಳವಾದಾಗ ಅಥವಾ ಕಾನೂನುಬಾಹಿರ ನೀತಿಗಳ ವಿರುದ್ಧ ರಕ್ಷಣೆಯೇ ಇಲ್ಲದಾಗಿದೆ. ಅಂತಹ ಸಂದರ್ಭದಲ್ಲಿ ತಮ್ಮ ಬೆಂಬಲಕ್ಕೆ ನಿಲ್ಲಬಹುದಾದ ಒಂದು ವ್ಯವಸ್ಥೆಯೇ ಉದ್ದಿಮೆದಾರರಿಗೆ ಕಾಣುತ್ತಿಲ್ಲ. ಇದರಿಂದ ಉದ್ದಿಮೆದಾರರಿಗೆ ಹೊಸ ಉದ್ದಿಮೆಯನ್ನು ಪ್ರಾರಂಭಿಸುವುದಕ್ಕಾಗಲಿ, ಉದ್ಯೋಗಗಳನ್ನು ಸೃಷ್ಟಿಸುವುದಕ್ಕೆ ರಿಸ್ಕ್ ತೆಗೆದುಕೊಳ್ಳುವ ಉತ್ಸಾಹವಾಗಲಿ ಇನ್ನಷ್ಟು ಕಮರಿಹೋಗುತ್ತದೆ. ನಮ್ಮ ಸಮಾಜವನ್ನು ಇಂದು ತೀವ್ರವಾಗಿ ವ್ಯಾಪಿಸಿಕೊಂಡಿರುವ ಗಾಢವಾದ ಅವಿಶ್ವಾಸ, ಭಯ, ನಿರಾಸೆಯ ಭಾವನೆ ಇವೆಲ್ಲಾ ಒಟ್ಟಾಗಿ ಸೇರಿಕೊಂಡು ಒಂದು ವಿಷಪೂರಿತ ಸ್ಥಿತಿಯನ್ನು ನಿರ್ಮಿಸಿವೆ. ಅದರಿಂದಾಗಿ ಇಂದು ಆರ್ಥಿಕ ಚಟುವಟಿಕೆಗಳು ಕುಂಠಿತಗೊಂಡಿವೆ. ಅದರ ಪರಿಣಾಮವಾಗಿ ಆರ್ಥಿಕ ಬೆಳವಣಿಗೆ ಕುಂಠಿತಗೊಂಡಿದೆ.



ನಮ್ಮ ಸಾಮಾಜಿಕ ರಚನೆಯು ಈ ಪ್ರಮಾಣದಲ್ಲಿ ಛಿದ್ರವಾಗುವುದಕ್ಕೆ ಮೋದಿ ಸರ್ಕಾರದ 'ವ್ಯತಿರಿಕ್ತವಾಗಿ ಸಾಬೀತಾಗುವವರೆಗೆ ಇದು ದುರುದ್ದೇಶದಿಂದ ಕೂಡಿದೆ'

ಎನ್ನುವ ಆಡಳಿತ ನೀತಿ ಕೂಡ ಮೂಲಭೂತವಾಗಿ ಕಾರಣವಾಗಿದೆ. ಆರ್ಥಿಕ ಚಟುವಟಿಕೆಯಲ್ಲಿ ಪಾಲ್ಗೊಳ್ಳುವವರೆಲ್ಲಾ ಯಾವುದೋ ದುರುದ್ದೇಶದಿಂದಲೇ ಅದರಲ್ಲಿ ತೊಡಗಿಕೊಂಡಿರುತ್ತಾರೆ ಎಂದು ಭಾವಿಸಿಕೊಂಡೇ ಸರ್ಕಾರದ ನೀತಿ ರೂಪುಗೊಳ್ಳುತ್ತದೆ. ಇದಕ್ಕೆ ವ್ಯತಿರಿಕ್ತವಾದದ್ದು ಸಾಬೀತಾಗುವವರೆಗೆ ಇದೇ ಸತ್ಯ ಅಂತಲೇ ಅದು ಭಾವಿಸುತ್ತದೆ. ಪ್ರತಿಯೊಬ್ಬ ಕೈಗಾರಿಕೋದ್ಯಮಿ, ಬ್ಯಾಂಕರ್, ನಿಯಮವನ್ನು ರೂಪಿಸುವವನು, ನಿಯಂತ್ರಕ, ಉದ್ದಿಮೆದಾರ ಹಾಗೂ ಪ್ರಜೆಗೂ ಸರ್ಕಾರವನ್ನು ಮೋಸಗೊಳಿಸುವುದೇ ಉದ್ದೇಶವಾಗಿರುತ್ತದೆ ಅನ್ನುವ ಅನುಮಾನ ಸರ್ಕಾರದ್ದು. ಈ ಅನುಮಾನದಿಂದಾಗಿಯೇ ನಮ್ಮ ಸಮಾಜದಲ್ಲಿ ಇದ್ದಂತಹ ವಿಶ್ವಾಸ ಸಂಪೂರ್ಣವಾಗಿ ನಾಶವಾಗಿರುವುದು. ಇದು ನಮ್ಮ ದೇಶದ ಆರ್ಥಿಕ ಬೆಳವಣಿಗೆಯನ್ನು ಸ್ಥಗಿತಗೊಳಿಸಿದೆ. ಬ್ಯಾಂಕರುಗಳಿಗೆ ಸಾಲಕೊಡಲು ಸಾಧ್ಯವಾಗುತ್ತಿಲ್ಲ. ಉದ್ದಿಮೆದಾರರಿಗೆ ಬಂಡವಾಳ ಹೂಡಲು ಆಗುತ್ತಿಲ್ಲ ಮತ್ತು ನಿಯಮಗಳನ್ನು ರೂಪಿಸುವವರಿಗೆ ತಮ್ಮ ಕೆಲಸ ಮಾಡಲು ಆಗುತ್ತಿಲ್ಲ.

ಮೋದಿ ಸರ್ಕಾರ ಪ್ರತಿಯೊಂದನ್ನೂ, ಪ್ರತಿಯೊಬ್ಬರನ್ನೂ ಅನುಮಾನ ಹಾಗೂ ಅವಿಶ್ವಾಸದ ಕನ್ನಡಿಯಲ್ಲೇ ನೋಡುತ್ತಿರುವಂತೆ ಕಾಣುತ್ತಿದೆ. ಅದರಿಂದಾಗಿಯೇ ಹಿಂದಿನ ಸರ್ಕಾರದ ಪ್ರತಿಯೊಂದು ನೀತಿಯೂ ದುರುದ್ದೇಶದಿಂದಲೇ ಕೂಡಿರುವಂತೆ ಅದಕ್ಕೆ ತೋರುತ್ತಿದೆ. ಅದು ನೀಡಿದ ಯಾವುದೇ ಸಾಲವೂ ಈ ಸರ್ಕಾರಕ್ಕೆ ಯೋಗ್ಯವಾಗಿ ಕಾಣುತ್ತಿಲ್ಲ. ಪ್ರತಿಯೊಂದು ಹೊಸ ಕೈಗಾರಿಕಾ ಯೋಜನೆಯ ಹಿಂದೆಯೂ ಸ್ವಹಿತಾಸಕ್ತಿಯೇ ಕಾಣುತ್ತಿದೆ. ಸರ್ಕಾರ ತನ್ನನ್ನು ಒಬ್ಬ ರಕ್ಷಕನ ಸ್ಥಾನದಲ್ಲಿಟ್ಟುಕೊಂಡು ನಗದು ಅಮಾನ್ಯೀಕರಣದಂತಹ ಸ್ವಲ್ಪವೂ ಯೋಚಿಸದ ಮತ್ತು ಆಘಾತಕಾರಿಯಾದ, ಅವಿವೇಕದ ನೈತಿಕ ಕಾವಲುಗಾರಿಕೆಯ ನೀತಿಗಳನ್ನು ಜಾರಿಗೊಳಿಸುತ್ತಾ ಹೋಗುತ್ತಿದೆ. ಪ್ರತಿಯೊಬ್ಬರನ್ನು ದುಷ್ಟರಾಗಿ ಚಿತ್ರಿಸುವ ಮತ್ತು ಪ್ರತಿಯೊಂದನ್ನು ಕೆಟ್ಟದು ವರ್ಸಸ್ ಒಳ್ಳೆಯದು ಎಂದು ವಿಂಗಡಿಸಿ ನೋಡುವ ಕ್ರಮ ಒಳ್ಳೆಯ ಆಳ್ವಿಕೆಯ ನೀತಿಯಾಗಲಾರದು. ಅದು ಆರೋಗ್ಯಕರ ಆರ್ಥಿಕ ಬೆಳವಣಿಗೆಗೆ ಒಳ್ಳೆಯ ಮಾರ್ಗವಲ್ಲ.

ಆರ್ಥಿಕ ಬೆಳವಣಿಗೆಯಲ್ಲಿ ಸಾಮಾಜಿಕ ವಿಶ್ವಾಸದ ಪಾತ್ರವನ್ನು ಆಡಂ ಸ್ಮಿತ್‌ನಿಂದ ಹಿಡಿದು ಇತ್ತೀಚಿನ ಆಧುನಿಕ ಕಾಲದ ವರ್ತನ ಅರ್ಥಶಾಸ್ತ್ರಜ್ಞರ ವರೆಗೆ ಎಲ್ಲರೂ ಸೊಗಸಾಗಿ ದಾಖಲಿಸಿದ್ದಾರೆ. ಸಾಮಾಜಿಕ ವ್ಯವಸ್ಥೆಯ ವಿಶ್ವಾಸದ ಚಾದರನ್ನು ಹರಿದು ಚಿಂದಿ ಮಾಡಿದ್ದೇ ಇಂದಿನ ಆರ್ಥಿಕ ದುಸ್ಥಿತಿಗೆ ಮುಖ್ಯ ಕಾರಣ. ಇಂದು ನಮ್ಮ ಆರ್ಥಿಕ ಬೆಳವಣಿಗೆ ಮತ್ತೆ ಚೇತರಿಸಿಕೊಳ್ಳಬೇಕಾದರೆ ಭೀತಿ ಮತ್ತು ಅಪನಂಬಿಕೆಯಿಂದಾಗಿ ಚಿಂದಿಯಾಗಿರುವ ಚಾದರವನ್ನು ಮತ್ತೆ ಸೇರಿಸಿ, ಹೊಲಿದು, ನೇಯ್ದು, ನಂಬಿಕೆ ಹಾಗೂ ವಿಶ್ವಾಸವನ್ನು ಮೂಡಿಸ ಬೇಕಾಗಿದೆ. ವ್ಯಾಪಾರಸ್ಥರಲ್ಲಿ, ಬಂಡವಾಳ ಒದಗಿಸುವವರಲ್ಲಿ ಮತ್ತು ಕಾರ್ಮಿಕರಲ್ಲಿ ಮತ್ತೆ ವಿಶ್ವಾಸ ಮೂಡಬೇಕು. ಅವರಲ್ಲಿ ಹೆದರಿಕೆ, ಆತಂಕ ಹೋಗಿ, ಮತ್ತೆ ಉತ್ಸಾಹ, ಉಲ್ಲಾಸ ಮೂಡಬೇಕು. ಇದು ಸಾಧ್ಯವಾಗಬೇಕಾದರೆ "ಅದು ಸುಳ್ಳು ಎಂದು ಸಾಬೀತಾಗುವವರೆಗೆ ಪ್ರತಿಯೊಬ್ಬರೂ ದುರುದ್ದೇಶಿಗಳೇ ಆಗಿರುತ್ತಾರೆ" ಎನ್ನುವ ಭಾವನೆ ಹೋಗಬೇಕು. ಭಾರತೀಯ ಉದ್ದಿಮೆದಾರರನ್ನು ನಂಬಬೇಕು.

ಇಂದು ಭಾರತದ ಆರ್ಥಿಕತೆ ಆತಂಕಕಾರಿ ಸ್ಥಿತಿಯಲ್ಲಿ ಬಳಲುತ್ತಿದೆ. ವರಮಾನ ಬೆಳೆಯುತ್ತಿಲ್ಲ. ಕುಟುಂಬದಲ್ಲಿನ ಬಳಕೆ ನಿಧಾನವಾಗುತ್ತಿದೆ. ತಮ್ಮ ಹಿಂದಿನ ಮಟ್ಟದ ಬಳಕೆಯನ್ನು ಕಾಪಾಡಿಕೊಳ್ಳಲು ಉಳಿತಾಯಕ್ಕೆ ಕೈಹಾಕುತ್ತಿದ್ದಾರೆ. ಜಿಡಿಪಿ ಬೆಳವಣಿಗೆಯ ಫಲವೆಲ್ಲಾ ಮೇಲ್‌ಸ್ತರದ ಕೆಲವೇ ಅನುಕೂಲಸ್ಥರಿಗೆ ಹೋಗುತ್ತಿದೆ.

**ಸ್ಥಗಿತತೆಯ ಅಪಾಯ**

ನಿಜವಾಗಿ ಆತಂಕಕಾರಿಯಾದ ಬೆಳವಣಿಗೆ ಅಂದರೆ ಇತ್ತೀಚಿನ ಚಿಲ್ಲರೆ (ರಿಟೇಲ್) ಸರಕಿನ ಹಣದುಬ್ಬರದ ಸೂಚಿ ತೀವ್ರವಾಗಿ ಏರಿದೆ. ಅದರಲ್ಲೂ ಆಹಾರಕ್ಕೆ ಸಂಬಂಧಿಸಿದ ಹಣದುಬ್ಬರದ ಸೂಚಿ ಏರುತ್ತಿರುವುದು ನಿಜಕ್ಕೂ ಆತಂಕಕಾರಿಯಾದ ಬೆಳವಣಿಗೆ. ರಿಟೇಲ್ ಹಣದುಬ್ಬರ ಬರುವ ತಿಂಗಳುಗಳಲ್ಲಿ ಇನ್ನಷ್ಟು ಏರುವ ಸಾಧ್ಯತೆಗಳಿವೆ. ನಿರಂತರವಾಗಿ ಏರುತ್ತಿರುವ ಹಣದುಬ್ಬರದ ದರ, ಬೇಡಿಕೆಯ ಸ್ಥಗಿತತೆ ಮತ್ತು ಗರಿಷ್ಠ ಮಟ್ಟದ ನಿರುದ್ಯೋಗ ಎಲ್ಲಾ ಒಟ್ಟಾರೆಯಾಗಿ ಅರ್ಥಶಾಸ್ತ್ರಜ್ಞರು ಸ್ಥಗಿತತೆ ಎಂದು ಕರೆಯುವ ಅಪಾಯಕಾರಿ ಸ್ಥಿತಿಗೆ ನಮ್ಮನ್ನು ತಳ್ಳಿಬಿಡುತ್ತದೆ. ಒಮ್ಮೆ ಆ ಸ್ಥಿತಿ ತಲುಪಿದರೆ ನಮ್ಮಂತಹ ದೊಡ್ಡ ಆರ್ಥಿಕತೆಗೆ ಚೇತರಿಸಿಕೊಳ್ಳುವುದು ತುಂಬ ಕಷ್ಟ. ನಾವು ಸದ್ಯಕ್ಕೆ ಸ್ಥಗಿತತೆಯ ಅಂದರೆ ಸ್ಟಾಗ್‌ಫ್ಲೇಷನ್ ಸ್ಥಿತಿಯನ್ನು ಇನ್ನೂ ತಲುಪಿಲ್ಲ. ತಕ್ಷಣ ಕ್ರಮ ತೆಗೆದುಕೊಂಡು ಬಳಕೆಯ ವಸ್ತುಗಳ ಬೇಡಿಕೆಯನ್ನು ಸುಧಾರಿಸಬೇಕು. ಅದಕ್ಕಾಗಿ ವಿತ್ತೀಯ ಕ್ರಮಗಳನ್ನು ತೆಗೆದುಕೊಳ್ಳಬೇಕು. ಹಣಕಾಸು ಆಧಾರಿತ ನಿಯಮಗಳು ಪರಿಣಾಮಕಾರಿಯಾಗುವಂತೆ ಕಾಣುತ್ತಿಲ್ಲ.

ಭಾರತ ಈಗಿರುವ ಸೂಕ್ಷ್ಮವಾದ ಆರ್ಥಿಕ ಪರಿಸ್ಥಿತಿಯಲ್ಲಿ ಎರಡು ನೀತಿಗಳನ್ನು ಕಾರ್ಯರೂಪಕ್ಕೆ ತರಬೇಕು ಎಂದು ನನಗನ್ನಿಸುತ್ತದೆ. ವಿತ್ತೀಯ ನೀತಿಗಳನ್ನು ಅನುಸರಿಸಿ ಬೇಡಿಕೆಯನ್ನು ಹೆಚ್ಚಿಸಬೇಕು ಮತ್ತು ಎರಡನೆಯದಾಗಿ 'ಸಾಮಾಜಿಕ ನೀತಿಯ' ಮೂಲಕ ಖಾಸಗೀ ಹೂಡಿಕೆಯನ್ನು ಪ್ರೋತ್ಸಾಹಿಸ ಬೇಕು. ಹೂಡಿಕೆದಾರರಲ್ಲಿ ನಂಬಿಕೆ ಮತ್ತು ವಿಶ್ವಾಸ ಮೂಡಿ ಅವರು ಸಮಾಜದ ಆರ್ಥಿಕತೆಯಲ್ಲಿ ಪಾಲ್ಗೊಳ್ಳುವಂತಾದರೆ ಇದು ಸಾಧ್ಯವಾಗುತ್ತದೆ.

ಇಂದು ಭಾರತ ಮೂರು ಟ್ರಿಲಿಯನ್ ಜಾಗತಿಕ ಆರ್ಥಿಕ ಶಕ್ತಿಕೇಂದ್ರವಾಗಿದೆ. ಪ್ರಮುಖವಾಗಿ ಖಾಸಗಿ ವಾಣಿಜ್ಯಸಂಸ್ಥೆಗಳು ಈ ಆರ್ಥಿಕತೆಯ ಚಾಲಕ ಶಕ್ತಿ ಯಾಗಿದ್ದಾರೆ. ಮನಸ್ಸಿಗೆ ಬಂದಂತೆ ನಿಯಂತ್ರಿಸಬಹುದಾದ ಹಾಗೂ ನಿರ್ದೇಶಿಸ ಬಹುದಾದ ಪುಟ್ಟ ಆರ್ಥಿಕತೆ ಇದಲ್ಲ ಅಥವಾ ಪತ್ರಿಕೆಗಳಲ್ಲಿ ವರ್ಣರಂಜಿತ ಪ್ರಮುಖ ಸುದ್ದಿ ಮಾಡಿ ಮತ್ತು ಮಾಧ್ಯಮಗಳಲ್ಲಿ ಗದ್ದಲ ಮಾಡುವ ಟೀಕೆಗಳಿಂದ ನಿರ್ವಹಿಸಿಬಿಡಬಹುದಾದ ಆರ್ಥಿಕತೆಯೂ ಅಲ್ಲ. ನಮಗೆ ರುಚಿಸದ ಅಥವಾ ಕಹಿ ಸುದ್ದಿಯನ್ನು ಹೇಳುವ ಮಂದಿಯನ್ನು ಗುಂಡಿಕ್ಕುವುದೇ ಆಗಲಿ, ಆರ್ಥಿಕ ವರದಿಗಳನ್ನು ಮತ್ತು ದತ್ತಾಂಶಗಳನ್ನು ತಡೆಹಿಡಿಯುವುದೇ ಆಗಲಿ ತೀರಾ ಬಾಲಿಶವಾದ ಕ್ರಮಗಳು. ಅವು ಬೆಳೆಯುತ್ತಿರುವ ಒಂದು ಜಾಗತಿಕ ಆರ್ಥಿಕ ಶಕ್ತಿಗೆ ಉಚಿತವಾದ ಕ್ರಮವೂ ಅಲ್ಲ. ಯಾವುದೇ ಕುತಂತ್ರ ಅಥವಾ ಕುಟಿಲೋಪಾಯ ದಿಂದಲೂ ೧.೨ ಬಿಲಿಯನ್ ಜನರು ಇರುವ ಮೂರು ಟ್ರಿಲಿಯನ್ ಮಾರುಕಟ್ಟೆ ಆರ್ಥಿಕತೆಯ ಸ್ಥಿತಿಯನ್ನು ಮರೆಮಾಚುವುದಕ್ಕೆ ಸಾಧ್ಯವಿಲ್ಲ. ಅವನ್ನು ಕುರಿತ ವಿಶ್ಲೇಷಣೆಯನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲ. ಆರ್ಥಿಕ ವ್ಯವಸ್ಥೆಯಲ್ಲಿನ ಪಾಲುದಾರರಿಗೆ ಬೇಕಿರುವುದು ಸಾಮಾಜಿಕ ಮತ್ತು ಆರ್ಥಿಕ ಪ್ರೇರಣೆ. ಅವರು ಸ್ಪಂದಿಸುವುದು ಅದಕ್ಕೇ ಹೊರತು ಆಜ್ಞೆಗಳಿಗೆ, ಬಲಾತ್ಕಾರಕ್ಕೆ ಅಥವಾ ಸಾರ್ವಜನಿಕ ಸಂಬಂಧಗಳಿಗಲ್ಲ.

ಜಾಗತಿಕ ಆರ್ಥಿಕತೆಯನ್ನು ತನ್ನ ಅನುಕೂಲಕ್ಕೆ ಬಳಸಿಕೊಂಡು ಲಾಭ ಮಾಡಿಕೊಳ್ಳಬಹುದಾದ ವಿಶಿಷ್ಟವಾದ ಮತ್ತು ಸೊಗಸಾದ ಅವಕಾಶ ಭಾರತಕ್ಕಿದೆ. ಇಂತಹ ಅದ್ಭುತ ಗಳಿಗೆಯಲ್ಲಿ ತನ್ನ ಆರ್ಥಿಕತೆಯನ್ನು ಹೀಗೆ ಸ್ವತಃ ಘಾಸಿಗೊಳಿಸಿ ಕೊಳ್ಳುತ್ತಿರುವುದು ದುಃಖಕರ. ಚೀನಾದ ಆರ್ಥಿಕತೆ ಮಂದಗತಿಯಲ್ಲಿದೆ ಮತ್ತು ಅದರ ರಫ್ತು ಇಳಿಮುಖವಾಗುತ್ತಿದೆ. ಭಾರತಕ್ಕೆ ದೊಡ್ಡ ಪ್ರಮಾಣದಲ್ಲಿ ರಫ್ತಿನಲ್ಲಿ ತೊಡಗಿಕೊಳ್ಳುವುದಕ್ಕೆ ಸೊಗಸಾದ ಅವಕಾಶ ಸಿಕ್ಕಿದೆ. ಮತ್ತೆ ಸಮಾಜದಲ್ಲಿ ವಿಶ್ವಾಸ ಮತ್ತು ಆರ್ಥಿಕ ಪ್ರಗತಿಯನ್ನು ಸೃಷ್ಟಿಸಿ, ಈಗಿರುವ ಅಪನಂಬಿಕೆ, ಭಯ ಮತ್ತು ನೈರಾಶ್ಯವನ್ನು ತೊಡೆದು ಹಾಕಬೇಕು. ಆ ಮೂಲಕ ಜಾಗತಿಕ ರಫ್ತಿನಲ್ಲಿ ಸಿಂಹಪಾಲನ್ನು ತನ್ನದಾಗಿಸಿಕೊಳ್ಳಲು ಪ್ರಯತ್ನಿಸಬೇಕು. ಈಗ ಲೋಕಸಭೆಯಲ್ಲಿ ಸರ್ಕಾರಕ್ಕೆ ಸ್ಪಷ್ಟ ಬಹುಮತ ಇದೆ ಮತ್ತು ಜಾಗತಿಕ ತೈಲಬೆಲೆಗಳು ಕಡಿಮೆ ಇವೆ. ಇಂತಹ ಸುವರ್ಣ ಅವಕಾಶಗಳು ದೊರಕುವುದು ತಲೆಮಾರಿಗೊಮ್ಮೆ ಮಾತ್ರ. ಈ ಸುವರ್ಣಾವಕಾಶವನ್ನು ಬಳಸಿಕೊಳ್ಳಬೇಕು. ಭಾರತವನ್ನು ಆರ್ಥಿಕ ಬೆಳವಣಿಗೆಯ ಮುಂದಿನ ಹಂತಕ್ಕೆ ತ್ವರಿತವಾಗಿ ಕೊಂಡೊಯ್ಯುವುದಕ್ಕೆ ಬಳಸಿಕೊಳ್ಳಬೇಕು. ನಮ್ಮ ಕೋಟ್ಯಂತರ ಯುವಕ ಯುವತಿಯರಿಗೆ ಹೊಸ ನೌಕರಿಗಳು ಸೃಷ್ಟಿಯಾಗಬೇಕು. ಉದ್ಯಮಪತಿಗಳು ಮತ್ತು ಕೈಗಾರಿಕೋದ್ಯಮಿಗಳ ಬಗ್ಗೆ ಇರುವ ಆಳವಾದ ಅಪನಂಬಿಕೆಯನ್ನು ಬಿಟ್ಟು ಪ್ರಧಾನಮಂತ್ರಿ ಮೋದಿಯವರು ಸ್ವಾಭಾವಿಕ ಹುರುಪು, ಹುಮ್ಮಸ್ಸುಗಳನ್ನು ಪುನರುಜ್ಜೀವಗೊಳಿಸುವ ಮತ್ತು ನಮ್ಮ ಆರ್ಥಿಕತೆ ಚೇತರಿಸಿಕೊಂಡು ಮೇಲೇರುವುದಕ್ಕೆ ಸಹಕಾರಿಯಾಗುವಂತಹ ಪರಸ್ಪರ ನಂಬಿಕೆ ವಿಶ್ವಾಸಗಳುಳ್ಳ ಸಾಮಾಜಿಕ ವ್ಯವಸ್ಥೆಯನ್ನು ಬೆಳೆಸಬೇಕೆಂದು ನಾನು ಮನವಿ ಮಾಡಿಕೊಳ್ಳುತ್ತೇನೆ.

*ಹಿಂದೂ ಪತ್ರಿಕೆಯಲ್ಲಿ ಪ್ರಕಟವಾದ ಲೇಖನದ ಅನುವಾದ (೧೮-೧೧-೨೦೧೯).*

ಮೂಲ : **ಮನಮೋಹನ್ ಸಿಂಗ್** ಅನುವಾದ : **ಟಿ. ಎಸ್. ವೇಣುಗೋಪಾಲ್**
ನಂ. ಸಿಎಚ್/೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯

*(ನವೆಂಬರ್ ಸಂಚಿಕೆಯಿಂದ ಮುಂದುವರೆದುದು)*

ಈವರೆಗೆ ಮಾನವ ನಾಗರಿಕತೆಯು ಅನೇಕ ಸಾಮಾಜಿಕ ವ್ಯವಸ್ಥೆಗಳಲ್ಲಿ ಹಾದುಬಂದಿದೆ: ಅಲೆಮಾರಿತನ, ಬುಡಕಟ್ಟು ಜೀವನ, ಗುಲಾಮಿ ಪದ್ಧತಿ, ಊಳಿಗಮಾನ್ಯ ಪ್ರಭುತ್ವ, ಬಂಡವಾಳಶಾಹಿ, ಅರೆ-ಊಳಿಗಮಾನ್ಯ ಪದ್ಧತಿ, ಕೆಲವೆಡೆ ಮತ್ತು ಕೆಲಕಾಲ ಸಮಾಜವಾದಿ ಪದ್ಧತಿ, ಇತ್ಯಾದಿ. ಒಂದೊಂದು ವ್ಯವಸ್ಥೆಯಲ್ಲಿಯೂ ಭೌತಿಕ ಸನ್ನಿವೇಶಗಳು ಸಾಕಷ್ಟು ಭಿನ್ನವಾಗಿರುತ್ತವೆ ಮತ್ತು ಆ ಸನ್ನಿವೇಶಗಳು "ಮಹಿಳೆ" ಎಂಬ ವರ್ಗದ ಭಿನ್ನೈಸುವಿಕೆಗೆ ಆಧಾರ ಒದಗಿಸುತ್ತವೆ. "ಸರಕು ಉತ್ಪಾದನೆ" ಎನ್ನುವುದು ಅಂತಹ ಒಂದು ಆಧಾರ. ಮಾರ್ಕ್ಸ್ ಅದರ ಬಗ್ಗೆ ಸುದೀರ್ಘವಾಗಿ ಚರ್ಚಿಸಿದ್ದಾನೆ. ಸರಕಿನ ಅನನ್ಯ ಗುಣವೇನೆಂದರೆ ಅದಕ್ಕೆ 'ಬಳಕೆ ಮೌಲ್ಯ' ಇಲ್ಲವೇ 'ವಿನಿಮಯ ಮೌಲ್ಯ' ಇರುತ್ತದೆ. ನಾನೊಂದು ಮುದ್ದೆ ಮಾಡಿಕೊಂಡು ಅದನ್ನು ಅವರೆಕಾಯಿ ಹುಳಿಯ ಜೊತೆ ನುಂಗಿಹಾಕಿದರೆ ಅದಕ್ಕೆ ಬಳಕೆ ಮೌಲ್ಯವಿದೆಯೆಂದರ್ಥ. ಬಳಕೆಗಲ್ಲದಿದ್ದರೆ ನಾನು ಮುದ್ದೆ ಮಾಡಹೋಗುತ್ತಿರಲಿಲ್ಲ. ಅದನ್ನು ಆಂಗ್ಲ ಭಾಷೆಯಲ್ಲಿ "ಯೂಸ್ ವ್ಯಾಲ್ಯೂ" ಎನ್ನುತ್ತಾರೆ, ವಿನಿಮಯ ಮೌಲ್ಯವನ್ನು "ಎಕ್ಸ್‌ಚೇಂಜ್ ವ್ಯಾಲ್ಯೂ" ಎನ್ನುತ್ತಾರೆ. ಬಳಕೆ ಮೌಲ್ಯವಿರುವ ವಸ್ತುಗಳಿಗೆಲ್ಲಾ ವಿನಿಮಯ ಮೌಲ್ಯ ಇರಲೇಬೇಕೆಂದೇನೂ ಇಲ್ಲ. ನಾನು ಮುದ್ದೆಯನ್ನು ನುಂಗಿಹಾಕದೆ, ಬೀದಿ ಬದಿಯಲ್ಲಿ ನಿಂತು ಅದನ್ನು ಮಾರಿದರೆ ಅದಕ್ಕೆ ವಿನಿಮಯ ಮೌಲ್ಯವು ಕೂಡಿಬರುತ್ತದೆ. ವಿನಿಮಯದಿಂದ ಹಣ, ಹಣದಿಂದ ಬೇರೇನನ್ನಾದರೂ ಕೊಳ್ಳುವುದು, ಇತ್ಯಾದಿ ವ್ಯವಹಾರಗಳು ಸಾಧ್ಯ. ಬಂಡವಾಳಶಾಹಿಯ ಅಡಿಯಲ್ಲಿ ಸಹ ಉತ್ಪಾದನೆಗಳೆಲ್ಲಾ ಸರಕು ಉತ್ಪಾದನೆಗಳೇ ಆಗಿರುವುದಿಲ್ಲ, ಕೆಲವನ್ನು ವೈಯ್ಯಕ್ತಿಕ ಬಳಕೆಗಾಗಿಯೆಂದೇ ಉತ್ಪಾದಿಸಿಕೊಳ್ಳುತ್ತಿರುತ್ತೇವೆ.

ಬಳಕೆ ಮೌಲ್ಯವಿರುವ ಎರಡು ಬಗೆಯ ಉತ್ಪನ್ನಗಳು ಸಾಧ್ಯ: (ಅ) ರೈತನು ತನಗೆ ಮತ್ತು ತನ್ನ ಕುಟುಂಬಕ್ಕೆ ಬೇಕಾದುದನ್ನು ಬೆಳೆದುಕೊಳ್ಳುವುದು. ಅದಕ್ಕೆ ತನ್ನದೇ ಭೂಮಿ, ನೀರು, ಗೊಬ್ಬರ, ದುಡಿಮೆ, ಎಲ್ಲಾ ತೊಡಗಿಸಬೇಕು. (ಆ) ಮನೆಗಳಲ್ಲೇ ಉತ್ಪಾದನೆಗೊಳ್ಳುವ ಬಳಕೆ ಮೌಲ್ಯ. ಅದು ದುಡಿಮೆ ಇಲ್ಲದೆ ಉತ್ಪನ್ನವಾಗುವುದಿಲ್ಲ. ಬಳಕೆಗೆ ಯೋಗ್ಯವಾದ ಎಲ್ಲವುಗಳ ಹಿಂದೆಯೂ ದುಡಿಮೆ ಇದ್ದೇ ಇರುತ್ತದೆ. ನನ್ನ ಮೊಮ್ಮಗಳ ದುಡಿಮೆ ಇಲ್ಲದೆ ನನಗೆ ಮನೆಯಲ್ಲಿ ಅನ್ನ-ಮುದ್ದೆ ದೊರಕುವುದಿಲ್ಲ. ನನ್ನ ಅಂಗಿಗೆ ಗುಂಡಿ ಹಾಕಲು ಸಹ ಅವಳ ದುಡಿಮೆ ಬೇಕು. ಆದರೆ ಇವೆಲ್ಲಾ ಮಾರುಕಟ್ಟೆಗೆ ಹೋಗುವ ಉತ್ಪನ್ನಗಳಲ್ಲ. ಅವುಗಳಿಗೆ 'ವಿನಿಮಯ ಮೌಲ್ಯ' ಸುತರಾಂ ಇಲ್ಲ.

ಶತಮಾನಗಳಿಂದಲೂ ಗಂಡಿನ ದುಡಿಮೆಯು ಸಾಮಾನ್ಯವಾಗಿ ಹೇಗೆ ರೂಪಿತವಾಗಿದೆಯೆಂದರೆ ಅವನ ದುಡಿಮೆಯನ್ನು ಹೆಚ್ಚು ವೇಳೆ ಸರಕು ಉತ್ಪಾದನೆಗೆ ತೊಡಗಿಸಲಾಗಿದೆ. ಆದರೆ, ಮನೆಕೆಲಸಗಳನ್ನು ಮಹಿಳೆಯರ ತಲೆಗೆ ಕಟ್ಟಲಾಗಿದೆ. ಮೀಸಲಾತಿ ಬೇಕೆ ಮಹಿಳೆಗೆ? ಅಗತ್ಯವಾಗಿ ಕೊಡೋಣ, ಮನೆಗೆಲಸಗಳೆಲ್ಲಾ ಅವರಿಗೇ ಮೀಸಲು, ಎಂಬುದು ಪುರುಷ ಧೋರಣೆ. ಸಮಾಜವಾದಿ ದೇಶಗಳಲ್ಲಿ ಕೂಡ ಈ ಪರಿಸ್ಥಿತಿಯು ಪೂರ್ತಿಯಾಗಿ ಇಲ್ಲವಾಗಿಲ್ಲ.

ಮನೆಗೆಲಸಗಳ ಪರಿಮಾಣವನ್ನು ಅಳೆದು ನೋಡಿ: ಎಷ್ಟೆಲ್ಲ ಇದೆ! ಕೊಟ್ಟಿಗೆ ಕೆಲಸವೂ ಅವಳದೇ, ಅಡಿಗೆಮನೆ ಕೆಲಸವೂ ಅವಳದೇ. ಜೊತೆಗೆ ಮಕ್ಕಳ ಪಾಲನೆಯೂ ಅವಳದು. ಈ ಕೆಲಸಗಳೆಲ್ಲಾ "ಸಾಮಾಜಿಕವಾಗಿ ಅಗತ್ಯವಾದ ಉತ್ಪಾದನೆಗಳು." ಯಾವುದನ್ನೂ ಮಾಡದೆ ಬಿಡುವಂತಿಲ್ಲ, ಬಾಳುವಂತಿಲ್ಲ. ಆದರೆ ಅವು "ಸರಕು ಉತ್ಪಾದನೆ" ಅಲ್ಲ, ಏಕೆಂದರೆ ಅವು ಮಾರುಕಟ್ಟೆಯಲ್ಲಿ ವಿನಿಮಯ ಮಾಡಿಕೊಳ್ಳುವಂಥವಲ್ಲ. ಮೊಮ್ಮಗಳು ನನ್ನ ಅಂಗಿಗೆ ಗುಂಡಿ ಹಾಕಿಕೊಡದಿದ್ದರೆ ಮತ್ತು ನಾನೇ ಅದನ್ನು ಹಾಕಿಕೊಳ್ಳದಿದ್ದರೆ ಹೊರಗೆ ಹೋಗಿ ದರ್ಜಿಯ ಬಳಿ ಇರುವ ಹುಡುಗನಿಗೆ ಹಣ ಕೊಟ್ಟು ಹಾಕಿಸಿಕೊಳ್ಳಬೇಕು. ಅವನು ಗುಂಡಿ ಹಾಕಿಕೊಟ್ಟರೆ ಅವನ ದುಡಿಮೆಗೆ ಕೂಲಿ ಕೊಡುತ್ತೇನೆ, ಆದರೆ ಮೊಮ್ಮಗಳಿಗಾದರೆ ಏನನ್ನೂ ಕೊಡುವುದಿಲ್ಲ. ಅದನ್ನು ಕುಟುಂಬದ

# ಮಾರ್ಕ್ಸ್‌ವಾದ ಮತ್ತು ಮಹಿಳೆ

**ಜಿ. ರಾಮಕೃಷ್ಣ**



ವ್ಯವಸ್ಥೆ ಎನ್ನುವ ಹೆಸರಿನಲ್ಲಿ ಜಾಣತನದಿಂದ ಸೇರಿಸಿಬಿಡುತ್ತೇವೆ. ಇಂತಹ ಅದೆಷ್ಟು ದುಡಿಮೆಗಳು ಮಹಿಳೆಗೆ ಕಟ್ಟುಬಿದ್ದಿವೆ ಎಂಬುದನ್ನು ಪರಿಶೀಲಿಸಿಕೊಳ್ಳುವುದು ಅಗತ್ಯ. ಅರ್ಥಾತ್, ಸರಕು ಉತ್ಪಾದನೆಯಲ್ಲದಿದ್ದರೆ ದುಡಿಮೆಯು "ನಿಜವಾದ ದುಡಿಮೆ" ಎನಿಸಿಕೊಳ್ಳದಿರುವುದು ಒಂದು ಮಹಾ ವ್ಯಂಗ್ಯ. ಮಹಿಳೆಯ ಪಾಲಿಗೆ ಸಾಂಪ್ರದಾಯಿಕವಾಗಿ ಇಂತಹ ಹತ್ತಾರು ದುಡಿಮೆಗಳು ಬಂದಿವೆ, ಆದರೆ ಪುರುಷನಿಗೆ ಅಂತಹ ದುಡಿಮೆ ಕನಿಷ್ಠ ಮಟ್ಟದ್ದು. ಉತ್ಪಾದನೆಯಲ್ಲಿ ಮಹಿಳೆಯು ಪುರುಷನಿಗಿಂತಲೂ ಭಿನ್ನ ಎನಿಸಿಕೊಳ್ಳುವುದು ಇದರಿಂದ. ಅವಳು ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ಎಂಟು ಅಥವಾ ಹತ್ತು ಗಂಟೆ ದುಡಿದುಬಂದರೂ ಮನೆಗೆಲಸವು ಪೂರ್ಣ ಪ್ರಮಾಣದಲ್ಲಿ ಅವಳಿಗಾಗಿ ಕಾದಿರಿಸಲಾಗಿರುತ್ತದೆ. ಅಷ್ಟೊಂದು "ಬಳಕೆ ಮೌಲ್ಯ" ಉತ್ಪಾದಿಸಿದರೂ ಆಕೆಯು ಭಿನ್ನ ಮತ್ತು ಬಹುಮಂದಿ ಪುರುಷರು ಈ ವಿಧದ ಮೌಲ್ಯದ ಉತ್ಪಾದನೆಯಲ್ಲಿ ಹೇಳಿಕೊಳ್ಳಬಹುದಾದಷ್ಟು ಪ್ರಮಾಣದಲ್ಲಿ ಪಾಲ್ಗೊಳ್ಳುವುದಿಲ್ಲ. ಕೇವಲ 'ಬಳಕೆ ಮೌಲ್ಯ' ಉತ್ಪಾದಿಸುವವಳಿಗೆ ಔಪಚಾರಿಕ ಶಿಕ್ಷಣ ತಾನೆ ಏಕೆ ಬೇಕು ಎಂದು ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸುವ ಯೋಚನೆಯನ್ನೇ ಮಾಡದೆ ಹಲವು ಶತಮಾನಗಳನ್ನು ನೂಕಿದ್ದೇವಲ್ಲವೇ? ಸಮಸ್ಯೆಯ ಮೂಲವಿರುವುದೇ ಇದರಲ್ಲಿ ಮತ್ತು ಇದರಿಂದ ಫಲಿಸುವ ಪರಿಣಾಮಗಳಲ್ಲಿ.

ಸರಕು ಉತ್ಪಾದನೆಯು ಮಹಿಳೆಗೆ ಔಪಚಾರಿಕವಾಗಿ ನಿಷಿದ್ಧವಲ್ಲ. ಅದನ್ನೂ ಸ್ವಲ್ಪಮಟ್ಟಿಗೆ ಅವಳಿಗೆ ಹೇರಲಾಗಿರುತ್ತದೆ. ಉದಾಹರಣೆಗೆ, ತನ್ನದೇ ಹೊಲದಲ್ಲಿ ಕೆಲಸ ಮಾಡುವ ಒಡತಿ ಮಾರಾಟಕ್ಕೆ ಸೊಪ್ಪು ಬೆಳೆಯುತ್ತಾಳೆ; ಆಕೆ ಕೂಲಿ ಆಳಲ್ಲ. ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ದುಡಿಯುವ ಮಹಿಳೆಗೆ ಹೋಲಿಸಿದರೆ ಈಕೆಯದು ಕೂಲಿಗೆಲಸವಲ್ಲ. ಆದ್ದರಿಂದ ಅವಳಿಗೆ ಯಾವ ವೇತನವೂ ಸಿಗುವುದಿಲ್ಲ; ದುಡಿಮೆ ಮಾತ್ರ ಮಾಡಲೇಬೇಕು. ಅದನ್ನೂ ಕುಟುಂಬದ ವ್ಯವಸ್ಥೆಯ ನೀತಿ ಎಂದು ಬಿಡುತ್ತೇವೆ. ಹೀಗಾಗಿ ಗಾರ್ಮೆಂಟ್ ಫ್ಯಾಕ್ಟರಿಯಲ್ಲಿ ದುಡಿಯುವ ಮಹಿಳೆ ಮತ್ತು ಸೊಪ್ಪು ಬೆಳೆಯುವ ಒಡತಿ ಬೇರೆ ಬೇರೆ ಸ್ತರಗಳಿಗೆ ಸೇರಿಬಿಡುತ್ತಾರೆ. ಅವರಿಬ್ಬರ "ಭೌತಿಕ ಆಧಾರ" ಅಥವಾ ಭೌತಿಕ ಸನ್ನಿವೇಶದಲ್ಲಿ ಭಿನ್ನತೆ ಇದೆ. ಉತ್ಪಾದಿತ ಮೌಲ್ಯವು ಬಳಕೆಯ ಮೌಲ್ಯವಾದಾಗ ಅದನ್ನು "ಇಂತಿಷ್ಟು ಹಣದ ಮೌಲ್ಯ" ಎಂದು ಮಾಪನ ಮಾಡುವುದು ರೂಢಿಯಲ್ಲಿಲ್ಲ. ಆದರೆ ಉತ್ಪನ್ನದಿಂದ ದೊರೆಯುವ ವಿನಿಮಯ ಮೌಲ್ಯವು ಹತ್ತು ರೂಪಾಯಿ ಮಾತ್ರವೇ ಆದರೂ ಅದು ಲೆಕ್ಕಕ್ಕೆ ಬರುತ್ತದೆ. ಮೌಲ್ಯವೆಂದರೆ ಹಣ ಎಂಬ ಸೂತ್ರವಿರುವ ಸಮಾಜದಲ್ಲಿ ಮಹಿಳೆಯು "ಹಣದ ಆರ್ಥಿಕತೆ"ಯ ಹೊರಗೆ ದುಡಿಮೆ ಮಾಡುತ್ತಾಳೆ. ಅಂತಹ ಆರ್ಥಿಕತೆಯ ಒಳಗೆ ಸೇರುವ ಮಹಿಳೆಯರು ಇಂದು ಐವತ್ತು ವರ್ಷಗಳ ಹಿಂದೆ ಇದ್ದುದಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿದ್ದಾರೆ ಎಂಬುದು ಸ್ವಾಗತಾರ್ಹ ಬೆಳವಣಿಗೆ. ಯಾವ ದುಡಿಮೆಯೇ ಆದರೂ ಅದರಿಂದ ಮೌಲ್ಯದ ಉತ್ಪಾದನೆಯಾಗುತ್ತದೆ; ಆದರೆ ಮಹಿಳೆಯರ "ಬಳಕೆ ಮೌಲ್ಯ"ದ ಉತ್ಪಾದನೆಗೆ ತೊಡಗಿಸಲಾಗುವ ದುಡಿಮೆಯು ಲೆಕ್ಕಕ್ಕೆ ಬರುತ್ತಿಲ್ಲ. ಅವರ ಸಾಮಾಜಿಕ ಸ್ಥಾನವನ್ನು ಇದರಿಂದ ಗುರುತಿಸುವುದು ತಾರ್ಕಿಕವಲ್ಲ, ಆದರೆ ಹಾಗೆ ಮಾಡಲಾಗುತ್ತಿರುವುದು ವಸ್ತುಸ್ಥಿತಿ. ದಾಸ್ಯದಲ್ಲಿರುವವರು, ಜೀತದಾಳುಗಳಾಗಿ ಕೃಷಿ ಅಥವಾ ಬೇರಾವುದೋ ಕ್ಷೇತ್ರದಲ್ಲಿ ದುಡಿಯುತ್ತಿರುವವರು "ವಿನಿಮಯ ಮೌಲ್ಯ"ದ ಉತ್ಪಾದಕರು, ಆದರೂ ಅವರಿಗೆ ಕನಿಷ್ಠ ಮಟ್ಟದ ಸಾಮಾಜಿಕ ಸ್ಥಾನ ನೀಡಲಾಗುತ್ತದೆ. ಈ ನಿಟ್ಟಿನಲ್ಲಿ ನೋಡಿದರೆ ಮಹಿಳೆಯರ ದುಡಿಮೆಯಿಂದ ಉತ್ಪಾದನೆಯಾಗುವ ಅಗಾಧ "ಬಳಕೆ ಮೌಲ್ಯ"ದ ಹೊರತಾಗಿಯೂ ಅವರ ಸಾಮಾಜಿಕ ಸ್ಥಾನದಲ್ಲಿ ವರ್ಧನೆಯಾಗಿಲ್ಲ.

ಇದಕ್ಕೆ ಒಂದು ಪರಿಹಾರವೆಂದರೆ ಇಡೀ ಉತ್ಪಾದನಾ ಕ್ರಮದಲ್ಲಿ ಕ್ರಾಂತಿಯುತವಾದ ಬದಲಾವಣೆ ಮಾಡುವುದು; ಅಂದರೆ, ಎಲ್ಲ ದುಡಿಮೆಗೂ ವಿನಿಮಯ ಮೌಲ್ಯವಿರುವಂತೆ ಮಾಡುವುದು. ಆಗಲೂ ವಿನಿಮಯದ ದರವು ಒಂದೊಂದು ಉತ್ಪಾದನಾ ಕ್ಷೇತ್ರದಲ್ಲೂ ಭಿನ್ನವಾಗಿರುವುದು ಶಕ್ಯ. ಹಾಗಾಗಿ ಅದು ಅಲ್ಪಮಟ್ಟದ ಸುಧಾರಣೆಯೇ ಆಗಿಬಿಡಬಹುದು. ಮನೆಗೆಲಸ, ಮಕ್ಕಳ ಪಾಲನೆ, ಇವೆಲ್ಲಾ ಈಗಿರುವುದಕ್ಕಿಂತಲೂ ಬೇರೆಯಾದ ಸ್ವರೂಪ ಪಡೆಯದಿದ್ದಲ್ಲಿ ಗುಣಾತ್ಮಕ ಬದಲಾವಣೆಯು ಕಷ್ಟಸಾಧ್ಯ. ಕೈಗಾರಿಕೀಕರಣವು ಬೇರೆಷ್ಟೋ ಕ್ಷೇತ್ರಗಳಲ್ಲಿ ಜರುಗಿದೆಯಾದರೂ ಮಹಿಳೆಯನ್ನು ವಿಮುಕ್ತಿಯ ಹಾದಿಗೆ ಕೊಂಡೊಯ್ದಿಲ್ಲ; ಏಕೆಂದರೆ ಮನೆಗೆಲಸವು ಕೈಗಾರಿಕೀಕರಣಕ್ಕೆ ಗುರಿಯಾಗಿಲ್ಲ. ಆದ್ದರಿಂದ ನಮ್ಮ ಮುಂದಿರುವ ಪ್ರಶ್ನೆ ಇದು : ಖಾಸಗಿ ಮನೆಕೆಲಸವನ್ನು ಸಾಮಾಜಿಕವಾಗಿ ಉತ್ಪಾದನೆ ಮಾಡುವಂತಹ ದುಡಿಮೆಯನ್ನಾಗಿಸುವುದು ಹೇಗೆ? ಕಾರ್ಖಾನೆ, ಕಾಲೇಜು, ಬ್ಯಾಂಕು, ಗಾರ್ಮೆಂಟ್ ಫ್ಯಾಕ್ಟರಿ, ಹೀಗೆ ಮನೆಯಾಚೆ ಮಹಿಳೆಯು ದುಡಿಯಲು ಹೋದರೆ ಸಾಲದು, ಏಕೆಂದರೆ ಆಗ ಆಕೆಗೆ ಎರಡು ದುಡಿಮೆಗಳಾಗುತ್ತವೆ ಮತ್ತು ಅವುಗಳಲ್ಲಿ ಒಂದಕ್ಕೆ ಮಾತ್ರ ವೇತನ ದೊರೆಯುತ್ತದೆ. ಬಳಕೆ ಮೌಲ್ಯದ ಮನೆಗೆಲಸ, ಇತ್ಯಾದಿಗಳು ಅವಳ ಪಾಲಿನದೇ ಆಗಿ ಉಳಿದಿರುತ್ತವೆ. ಆಗಬೇಕಾದ್ದೇನೆಂದರೆ ಖಾಸಗಿ ಮನೆಕೆಲಸದಂತಹ ದುಡಿಮೆಗಳನ್ನು ಸಾರ್ವಜನಿಕ ಉತ್ಪಾದನೆಯನ್ನಾಗಿಸುವುದು. ಪ್ರಸ್ತುತ ಸನ್ನಿವೇಶದಲ್ಲಿ ಒಂದೊಂದು ಮನೆಯೂ "ಬಳಕೆ ಮೌಲ್ಯದ ಉತ್ಪಾದನೆ" ಮಾಡುತ್ತಿದೆ. ಅದಕ್ಕಾಗಿ ದುಡಿಯುವ ಮಹಿಳೆಯರ ಸನ್ನಿವೇಶವನ್ನು ಕೈಗಾರಿಕೋದ್ಯಮದ ಪೂರ್ವದಲ್ಲಿ ಮನೆಗಳಲ್ಲಿ ನೇಯ್ಗೆ ಮಾಡುತ್ತಿದ್ದು ಹೊಟ್ಟೆ ಹೊರೆಯುತ್ತಿದ್ದರಲ್ಲ, ಅಂಥವರ ದುಡಿಮೆಗೆ ಹೋಲಿಸಬಹುದು. ಈ ದುಡಿಮೆಯು ಕುಟುಂಬಕ್ಕೆ ಸ್ವಲ್ಪಮಟ್ಟಿನ ಆರ್ಥಿಕ ಬೆಂಬಲವನ್ನು ನೀಡುತ್ತಿತ್ತು. ಆಗಲೂ ಮಹಿಳೆಯು ನೇಯ್ಗೆಯಲ್ಲದೆ ಹತ್ತಾರು ಮನೆಗೆಲಸಗಳನ್ನು ಮಾಡಬೇಕಾಗುತ್ತಿತ್ತು! ಒಂದು ಹಂತದಲ್ಲಿ ನೇಯ್ಗೆಯಂತಹ ಗೃಹ ಕೈಗಾರಿಕೆಗಳು ಸಮಾಜೀಕರಣಕ್ಕೆ ಒಳಗಾದವು. ಹಾಗಾಗಬಾರದಿತ್ತೆಂದು ಹಲುಬುವವರು ಈಗಲೂ ಇದ್ದಾರೆ. ಅದು ಬೇರೆಯೇ ಕತೆ. ಹಾಗೆ ಹಲುಬುವವರ ರಮ್ಯ ಕಲ್ಪನೆಗಳನ್ನು ವಿಸ್ತಾರವಾಗಿ ವಿಶ್ಲೇಷಣೆ ಮಾಡಿಕೊಳ್ಳಬೇಕು, ಏಕೆಂದರೆ ಅಂಥವರು ಬಹುತೇಕ ಸ್ವತಃ ಗೃಹ ಕೈಗಾರಿಕೆಗಳಲ್ಲಿದ್ದುಕೊಂಡು ಉತ್ಪಾದನೆ ಮಾಡುತ್ತಿರುವುದಿಲ್ಲ ಮತ್ತು ಬಹುಶಃ ಮನೆಗೆಲಸಗಳನ್ನೂ ಮಾಡುತ್ತಿರುವುದಿಲ್ಲ. ಗೃಹ ಕೈಗಾರಿಕೆಗಳಿಗೆ ಕೂಲಿಗಳನ್ನು ನೇಮಕ ಮಾಡಿಕೊಂಡು ದುಡಿಸಿಕೊಳ್ಳುವ ಪ್ರಕ್ರಿಯೆಯು ಸಂಪೂರ್ಣವಾಗಿ ಬೇರೆ ತೆರನಾದ್ದು ಎಂಬುದನ್ನು ಮರೆಯದಿರೋಣ. ಒಟ್ಟಿನಲ್ಲಿ ಮನೆಗಳಲ್ಲಿ "ಬಳಕೆ ಮೌಲ್ಯ"ದ ಉತ್ಪಾದನೆಯು ಬಹುಮಟ್ಟಿಗೆ ಯಥಾಸ್ಥಿತಿಯಲ್ಲಿಯೇ ಇದೆ. ಕೆಲವು ಅನುಕೂಲಸ್ಥರು ಹೊಸ ಉಪಕರಣಗಳನ್ನು ಹೊಂದಿರುತ್ತಾರೆ : ಮಿಕ್ಸಿ, ವಾಷಿಂಗ್ ಮಶೀನ್, ವ್ಯಾಕ್ಯೂಂ ಕ್ಲೀನರ್, ಇತ್ಯಾದಿ; ಇಲ್ಲವಾದರೆ, ಮನೆಗೆಲಸದವರನ್ನು ನೇಮಿಸಿಕೊಳ್ಳುತ್ತಾರೆ. ಮನೆಗೆಲಸದವರು ಸಿಕ್ಕುವ ಸಾಧ್ಯತೆ ಇಲ್ಲದಂತಾದಾಗಿನ ಪರಿಸ್ಥಿತಿಯೇ ಬೇರೆ.

ಈ ವಿಚಾರದಲ್ಲಿ ಮುಂದಿನ ಇನ್ನೊಂದು ಸನ್ನಿವೇಶವನ್ನು ಸಹ ಗಮನಿಸಬೇಕು. ಬಂಡವಾಳಶಾಹಿಯಡಿ ಗೃಹಕೃತ್ಯಗಳ ಸಮಾಜೀಕರಣವಾದರೆ ಅದು ವ್ಯವಸ್ಥೆಯಲ್ಲಿ ಗುಣಾತ್ಮಕ ಬದಲಾವಣೆಯಾಗುವುದಿಲ್ಲ. ಏಕೆಂದರೆ, ಮಾನವ ಕಲ್ಯಾಣವಾಗಲಿ, ಮಹಿಳಾ ವಿಮುಕ್ತಿಯಾಗಲಿ, ಅದರ ಉದ್ದೇಶವಲ್ಲ. ಅದು ಖಾಸಗಿ ಲಾಭದ ಇನ್ನೊಂದು ವಿಸ್ತೃತ ರೂಪವಾಗಿರುತ್ತದೆ, ಅಷ್ಟೆ. ಎಲ್ಲ ಉತ್ಪಾದನೆಯೂ ಇಡೀ ಸಮಾಜದ ಪರಿಧಿಗೆ ಸೇರುವ ಸಮಾಜೀಕರಣಗೊಂಡ ಉತ್ಪಾದನೆಯಾಗುವುದು ಮಹಿಳಾ ವಿಮುಕ್ತಿಗೆ ಒಂದು ದೊಡ್ಡ ಹೆಜ್ಜೆಯಾಗುತ್ತದೆ. ಒಬ್ಬ ಅರ್ಥಶಾಸ್ತ್ರಜ್ಞನು ಒಂದು ವಿರೋಧಾಭಾಸದ ಸಂಗತಿ ಪ್ರತಿಪಾದಿಸಿದ್ದಾನೆ : ಯಾರದೋ ಮನೆಯಲ್ಲಿ

ಬಲ

ಮೌನ ನನ್ನ ಬಲಹೀನತೆಯಾದರೆ
ಮಾಫಿಗಾಗಿ ಕಾಯುತ್ತೇನೆ;
ಪ್ರೀತಿ ನನ್ನ ಬಲಹೀನತೆಯಾದರೆ
ಬಲಹೀನನಾಗಿಯೇ ಬದುಕುತ್ತೇನೆ;
ಕ್ಷಮೆ ನನ್ನ ಬಲಹೀನತೆಯಾದರೆ
ವೈರಿಗಳ ಕ್ಷಮಿಸಿ ಸಾಯುತ್ತೇನೆ!

• ಗೋಪಿ •

ಮನೆಗೆಲಸ ಮಾಡುವ ಮಹಿಳೆಯ ಸೇವೆಯು ಆಕೆಯ ದೃಷ್ಟಿಯಲ್ಲಿ ಮತ್ತು ಮನೆಗೆಲಸಕ್ಕೆ ಅವಳನ್ನು ಇರಿಸಿಕೊಂಡಿರುವವರ ದೃಷ್ಟಿಯಲ್ಲಿ 'ಬಳಕೆ ಮೌಲ್ಯ'ದ ಉತ್ಪಾದನೆಯಲ್ಲ; ತನ್ನ ದುಡಿಮೆಯ ಶಕ್ತಿಯೆಂಬ ಸರಕನ್ನು ಮಾರಿ ವಿನಿಮಯ ಮೌಲ್ಯವನ್ನು ಆಕೆ ಪಡೆದುಕೊಂಡಿದ್ದಾಳೆ. ಅವಳ ಕೂಲಿಯು ರಾಷ್ಟ್ರೀಯ ವರಮಾನದಲ್ಲಿ ಸೇರ್ಪಡೆಗೊಳ್ಳುತ್ತದೆ. ಆದರೆ ಮನೆಯೊಡೆಯನು ಅವಳನ್ನು ಪ್ರೀತಿಸಿ ಮದುವೆಯಾಗಿಬಿಟ್ಟರೆ ಅವಳ ದುಡಿಮೆಯು ರಾಷ್ಟ್ರೀಯ ಉತ್ಪಾದನೆಗೆ ಯಾವ ಕೊಡುಗೆಯನ್ನೂ ನೀಡುವುದಿಲ್ಲ! ಏಕೆಂದರೆ, ಆಗ ಅವನು ಆಕೆಗೆ ಹಣ ನೀಡಿದರೆ ಅದು ದುಡಿಮೆಗೆ ನೀಡಲಾದ ಕೂಲಿ ಅಥವಾ ವೇತನವಾಗುವುದಿಲ್ಲ; ಆಕೆಯು ತನ್ನ ದುಡಿಮೆಯ ಶಕ್ತಿಯನ್ನು ಒಂದು ಸರಕನ್ನಾಗಿಸಿ ವಿನಿಮಯ ಮಾಡಿಕೊಂಡಿರುವುದಿಲ್ಲ. ಒಬ್ಬ ಮಹಿಳೆಯು, ತಾನು ಸಾಮಾಜಿಕ ಉತ್ಪಾದನೆಯನ್ನು ಮಾಡುತ್ತಿಲ್ಲವೆಂಬ ಕೊರಗನ್ನು ಅನುಭವಿಸಿದರೆ ಅದು ಕ್ರಮೇಣ ಕೀಳರಿಮೆಗೂ ಕಾರಣವಾದೀತು. ನಮ್ಮ ದೇಶದಲ್ಲಿ ಹಾಗೆ ಆಗಿರುವ ಸಂದರ್ಭಗಳು ಹಲವು ವಿಧಗಳಲ್ಲಿ ಪ್ರಕಟಗೊಂಡಿವೆ.

ಇದಕ್ಕೆ ಪರ್ಯಾಯವಾದ ಮುಖವನ್ನು ನೋಡೋಣ : ಸಮಾಜದಲ್ಲಿ ದುಡಿಯುವವರ ಒಂದು ಸೈನ್ಯವಿದೆ; ಸೈನ್ಯಕ್ಕೆ ಇನ್ನೂ ಸೇರ್ಪಡೆಗೊಳ್ಳದವರು ಹೊರಗೆ ಕಾಯ್ದಿರಿಸಲಾದ ಕಾಲಾಳುಗಳಂತೆ ನಿಂತಿದ್ದಾರೆ. ಕೈಗಾರಿಕಾ ಉತ್ಪಾದನೆ, ಸೇವಾ ವಿಭಾಗ, ಹೀಗೆ ವಿನಿಮಯ ಮೌಲ್ಯವನ್ನು ಉತ್ಪಾದಿಸುವ ಕ್ಷೇತ್ರವು ಹಿಗ್ಗಿದಾಗ ಉದ್ಯೋಗದ ಹೆಚ್ಚಳವಾಗುತ್ತದೆಯಾದ್ದರಿಂದ ಕಾಯ್ದಿರಿಸಲಾಗಿದ್ದ ಕಾಲಾಳುಗಳಿಗೆ ಉದ್ಯೋಗ ದೊರಕುತ್ತದೆ; ಅಂದರೆ, ಸಾಮಾಜಿಕ ಉತ್ಪಾದನೆಯ ದುಡಿಮೆ ಅವರದಾಗುತ್ತದೆ. ಅಥವಾ ಒಂದು ಯುದ್ಧದ ಪರಿಸ್ಥಿತಿ ಉದ್ಭವಿಸಿತೆನ್ನಿ. ಮಹಿಳೆಗೆ ಸಾಮಾಜಿಕ ದುಡಿಮೆಗೆ ಅವಕಾಶದ ಸಾಧ್ಯತೆ ಹೆಚ್ಚುತ್ತದೆ. ಯುದ್ಧ ಮುಗಿದ ನಂತರ ಮತ್ತೆ ಕೇವಲ ಬಳಕೆ ಮೌಲ್ಯದ ಉತ್ಪಾದನೆಯಷ್ಟೇ ಅವಳ ಪಾಲಿಗೆ ಉಳಿಯಬಹುದು, ಏಕೆಂದರೆ ಅವಳು ಉದ್ಯೋಗ ಕಳೆದುಕೊಳ್ಳುವವರಲ್ಲಿ ಮೊದಲಿಗಳಾಗಿರುತ್ತಾಳೆ.

ಯಾವುದೇ ಸಂದರ್ಭವಿರಲಿ, ಮನೆಗೆಲಸವೆಲ್ಲಾ ಖಾಸಗಿ ಉತ್ಪಾದನೆಯೇ ಆಗಿ ಉಳಿದರೆ ಅದು ಮಹಿಳೆಯ ಪಾಲಿಗೇ ಬರುತ್ತದೆ; ಏಕೆಂದರೆ, ಪುರುಷ ಪೌರುಷದ ಪ್ರಾಧಾನ್ಯವು ಪುರುಷನು ಆ ಮನೆಗೆಲಸ ಮಾಡಲು ಅಡ್ಡಿಯುಂಟುಮಾಡುತ್ತದೆ. ಪುರುಷನು ಮಾನಸಿಕವಾಗಿ ಮತ್ತು ದೈಹಿಕವಾಗಿ ಎಂದು ಕುಟುಂಬದಲ್ಲಿ 'ಬಳಕೆಯ ಮೌಲ್ಯ'ದ ಉತ್ಪಾದನೆಗೆ ಸಿದ್ಧನಾಗುತ್ತಾನೆಂದು ಹೇಳಲಾಗುವುದಿಲ್ಲ. ಅವನನ್ನು ಅದಕ್ಕೆ ಬದ್ಧನಾಗುವಂತೆ ಮಾಡಲು ಪ್ರಯತ್ನಗಳೂ ನಡೆದಿಲ್ಲ; ಅದೇನಾದರೂ ನಡೆದರೆ ಅದು ಎಷ್ಟರಮಟ್ಟಿಗೆ ಸಫಲವಾಗಬಲ್ಲದು ಎಂಬುದನ್ನು ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತರದೆ ಊಹಿಸಲಾಗುವುದಿಲ್ಲ. ಇದನ್ನೇ ನಾವು 'ಸಾಂಸ್ಕೃತಿಕ' ಸನ್ನಿವೇಶ ಅಥವಾ ಪ್ರಶ್ನೆ ಎನ್ನುತ್ತೇವೆ. ಸಮಾಜವು ಮಕ್ಕಳ ಪಾಲನೆ ಮಾಡಿದಾಗ, ಸಾಮೂಹಿಕ ಭೋಜನಾಲಯಗಳಲ್ಲಿ ನಾವು ತಿನ್ನಬೇಕಾಗಿ ಬಂದಾಗ, ಬಟ್ಟೆ ತೊಳೆಯಲು ಸಾಮೂಹಿಕ ಲಾಂಡ್ರಿಗೇ ಹೋಗಬೇಕಾದಾಗ, ಮಹಿಳೆಯೂ ಸೇರಿದಂತೆ ಎಲ್ಲರ ಭೌತಿಕ ಸನ್ನಿವೇಶವೂ ಸ್ವಲ್ಪ ಬದಲಾಗುತ್ತದೆ. ಅಯ್ಯೋ, ನಮ್ಮ ಪವಿತ್ರ ಕುಟುಂಬದ ಸ್ವಾಯತ್ತ ಅಸ್ತಿತ್ವವು ಲುಪ್ತವಾಗುತ್ತದಲ್ಲಾ ಎಂಬ ಕಳವಳ ಅಸಹಜವಲ್ಲ. ಹಾಗೆಂದು ಮಹಿಳೆಯ ಮೇಲಿನ ಹೊರೆಯನ್ನು ಈಗಿರುವಂತೆಯೇ ಉಳಿಸಿಕೊಳ್ಳುವುದೂ ಯೋಗ್ಯವಲ್ಲ. ಕಳೆದ ಹಲವು ಶತಮಾನಗಳಲ್ಲಿ ಈ 'ಸ್ವಾಯತ್ತ ಅಸ್ತಿತ್ವ'ವು ಎಷ್ಟೋ ಬಗೆಗಳಲ್ಲಿ ಬದಲಾಗಿದೆಯಲ್ಲವೇ? ಇದು ಕೇವಲ ಇಂದಿನ ವಿದ್ಯಮಾನವಲ್ಲ, ಅನೇಕ ಶತಮಾನಗಳಿಂದಲೂ ಇಂತಹ ಪ್ರಸಂಗಗಳು ನಡೆಯುತ್ತಲೇ ಬಂದಿವೆ. ಹಿಂದಿನ ಕಾಲದಲ್ಲಿ ಜಮೀನ್ದಾರರ ಮನೆಗಳಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಯಾವಾಗಲೂ ಅಮ್ಮಂದಿರೇ ಇರುತ್ತಿದ್ದರೇನು? ಈಗಲೂ ಉಳ್ಳವರು ಮಕ್ಕಳ ಪಾಲನೆಗೆ ಮನೆಯಲ್ಲಿ ಆಯಾಗಳನ್ನು ಇರಿಸಿಕೊಳ್ಳುತ್ತಾರಲ್ಲಾ ಅದು ಬದಲಾವಣೆಯಲ್ಲವೇ? ಮಗುವಿಗೆ ಮನೆಯಲ್ಲೇ ಪಾಠ ಹೇಳುವುದನ್ನು ಬಿಟ್ಟು ಅದನ್ನು ಶಾಲೆಗೆ ಕಳಿಸಲಾರಂಭಿಸಿದೆವಲ್ಲಾ, ಆಗಲೂ ಈ ಕಳವಳ ಇದ್ದಿರಬೇಕು. ಅಮೆರಿಕಾದಲ್ಲಿರುವ ಮಕ್ಕಳು ಇಲ್ಲಿರುವ ತಮ್ಮ ತಂದೆ–ತಾಯಿಯರನ್ನು 'ವೃದ್ಧಾಶ್ರಮ'ಕ್ಕೆ ಸೇರಿಸಿದರೆ ಅದು 'ಕುಟುಂಬದ ಸ್ವಾಯತ್ತ ಅಸ್ತಿತ್ವ'ದ ಬದಲಾವಣೆಯಲ್ಲವೇ? ಈಗ ಅದು ಕಳವಳ ಉಂಟುಮಾಡುವುದಿಲ್ಲ, ಬದಲಾಗಿ ಮಗು ಶಾಲೆಗೆ ಹೋಗಲಾಗದಿದ್ದರೆ ಅದು ಕಳವಳದ ವಿಷಯ; ತಂದೆ–ತಾಯಂದಿರಿಗೆ ವೃದ್ಧಾಶ್ರಮ ದೊರಕದಿದ್ದರೆ ಅದು ಕಳವಳ ಆಗುತ್ತದೆ! ಅನೇಕ ಕುಟುಂಬಗಳಿಗೆ ಬೇರೆ ಕಾರಣಗಳಿಂದಾಗಿ ಮಕ್ಕಳನ್ನು ಶಾಲೆಗಳಿಗೆ ಕಳಿಸಲಾಗುತ್ತಿಲ್ಲವಲ್ಲಾ ಅದೇಕೆ ಕಳವಳಕ್ಕೆ ವಸ್ತುವಾಗಿಲ್ಲವೆಂಬುದನ್ನೂ ಯೋಚಿಸುವ ಅಗತ್ಯವಿದೆ.

ಮಹಿಳೆಯ 'ಮನೆ ದುಡಿಮೆ'ಗೆ ಕೂಲಿ ಇಲ್ಲ ಎಂದಾಗ ಉಂಟಾಗುವ ಸನ್ನಿವೇಶ ಎಂಥದು? ಒಬ್ಬನ ದುಡಿಮೆಯ ಕೂಲಿಯಿಂದ ಇಬ್ಬರು ಜೀವನ ಸಾಗಿಸುತ್ತಿದ್ದಾರೆ ಎಂದರ್ಥ. ಹೇಗೆ? ಅವನು ಮಹಿಳೆಯ ದುಡಿಮೆಯನ್ನು ಕೂಲಿ ಕೊಡದೆಯೇ ಪಡೆಯುತ್ತಿದ್ದಾನೆ ಎಂಬ ಕಾರಣಕ್ಕೆ. ಅವನ ದುಡಿಮೆಗೆ ಹೊರಗೆ ವಿನಿಮಯ ಮೌಲ್ಯ ಎಷ್ಟು ದೊರೆಯಿತೋ ಅಷ್ಟರಲ್ಲಿಯೇ ಕುಟುಂಬದ ಜೀವನ ಸಾಗಬೇಕು. ಸಾರ್ವಜನಿಕ ವಲಯದಲ್ಲಿ ದುಡಿಮೆಯ ನೌಕರಿಗಳು ಸೃಷ್ಟಿಯಾಗುತ್ತಿಲ್ಲದಿದ್ದಾಗ ಹೊರಗಣ ದುಡಿಮೆಗೆ ಅವಕಾಶ ಸಿಗದೆ ಹೋಗುವುದು ಮೊದಲು ಮಹಿಳೆಗೆ. ನಮ್ಮ ದೇಶದ ಇತ್ತೀಚಿನ ಆರ್ಥಿಕ ನೀತಿಗಳು ಮಹಿಳೆಯ ಉದ್ಯೋಗದ ಅವಕಾಶಗಳನ್ನು ಕಡಿಮೆಗೊಳಿಸುತ್ತಿವೆ, ಏಕೆಂದರೆ ಹೊಸ ಉತ್ಪಾದನಾ ಕ್ಷೇತ್ರಗಳು ಕುಬ್ಜವಾಗುತ್ತಿವೆ. ಹಳ್ಳಿಗಳಿಂದ ನಗರಗಳಿಗೆ ವಲಸೆ ಬರುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ, ಆದರೆ

# ಸೂಲಂಗಿ

ಕಾವ್ಯಲೋಕ

ಬೆಳಕು ಚೆಲ್ಲುವ ಸೂರ್ಯನೆದುರು
ಪೊರೆವ ತಾಯಿ ಭೂಮಿಯ
ಬೆಳದಿಂಗಳಂತೆ ಬಾಚಿ ತಬ್ಬಿ
ಬೀಜಹಿಡಿದು ಧ್ಯಾನಸ್ಥ ಸಂತನಾದ:

ಸಾಲು ಸಾಲಿಗೆ ಬೀಜ ಚೆಲ್ಲಿ
ಹಸಿರ ಸೀರೆಗೆ ನೊಗಹೊತ್ತು
ಗೊಬ್ಬರದ ಘಮಲಿಗೆ ಮೂಗರಳಿಸಿ
ಫಲವತ್ತು ನೆಲಕೆ ಕಣ್ಣಾದ:

ಮೋಡಕೆ ಕಣ್ಣ ನೆಟ್ಟ ಹನಿಹನಿಗಾಗಿ
ಬೀಜ, ಪೈರು, ಕಾಯಿ, ಹಣ್ಣೆಂದು
ಕನಸಿನ ಆಳವಾದ
ಕೆಸರೊಳು ತನ್ನ ತಾ ಕಂಡು ಖುಷಿಗೊಂಡ:

ಕಬ್ಬು, ಭತ್ತ, ರಾಗಿ ಚೆಲ್ಲಿ
ಸೂಲಂಗಿಗಾಗಿ ಕಾದೂ ಕಾದ
ಸೂಲಂಗಿ ತೂಗುವ ಸುಳಿಗಾಳಿಗೆ
ಗರಿಬಿಚ್ಚಿ ಹಕ್ಕಿಯಾದ:

ತುಂಬು ತೋಳಿನ ಕಸುವಿಗೆ
ತೆನೆ ಬಂದು ಬೆಲೆ ಬಿದ್ದು
ಪಾಲಿಸಿ ಮೇಕರ್ಸ್‌ಗಳ ಹುನ್ನಾರಕೆ ಅನ್ನವಾದ
ಕೆಸರೊಳು ತನ್ನ ತಾ ಕಂಡು ಖಿನ್ನಗೊಂಡ
ದೇಸಿನೆಲದ ಕನ್ನೆತನಕೆ ನಿಬ್ಬೆರಗಾಗಿ
ಕಸುವು ತೀರಿತೆಂದು ಘಾಟು ವಿಷ ತುಂಬಿಕೊಂಡು
ಸೂಲಂಗಿ ತೂಗುಗತ್ತಿಗೆ ಉರುಳಾದ.

**ಡಾ॥ ಎ. ರಘುರಾಂ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಮಹಾರಾಣಿ ಮಹಿಳಾ ಕಲಾ
ವಾಣಿಜ್ಯ ಮತ್ತು ನಿರ್ವಹಣಾ ಕಾಲೇಜು, ಬೆಂಗಳೂರು – ೫೬೦ ೦೦೧

ಹಾಗೆ ಬಂದವರಿಗೆ ಕೆಲಸ ಸಿಗುವ ಸಂದರ್ಭಗಳು ಕಡಿಮೆಯಾಗುತ್ತಿವೆ. ಇದರಿಂದ ಮೊದಲ ಪೆಟ್ಟು ತಿನ್ನುವವರು ಮಹಿಳೆಯರೇ. ಮಹಿಳಾ ಪ್ರಶ್ನೆ ಎಂದಾಗ ಇದನ್ನೂ ಕೇಂದ್ರೀಕರಿಸಿ ಚರ್ಚಿಸುವುದು ಆರೋಗ್ಯಕರ.

ಈ ಇಡೀ ಹಿನ್ನೆಲೆಯಲ್ಲಿ ಮಾರ್ಕ್ಸ್‌ವಾದದ ಕಾರ್ಯಸೂಚಿಯನ್ನು ರೂಪಿಸಬೇಕು. ಆಗ ಎರಡು ಅತ್ಯಂತ ಪ್ರಮುಖ ಆಶಯಗಳು ಮುನ್ನೆಲೆಗೆ ಬರುತ್ತವೆ: ಬಡತನ ನಿರ್ಮೂಲನೆ (ದುಡಿಮೆಗೆ ವಿಪುಲ ಅವಕಾಶಗಳ ಸೃಷ್ಟಿಯಿಂದಾಗಿ) ಮತ್ತು ಮಹಿಳೆಯು ಕೇವಲ 'ಬಳಕೆ ಮೌಲ್ಯ'ದ ಉತ್ಪಾದನೆಯಲ್ಲಿ ತೊಡಗುವ ಸೇವಕಿ ಎಂಬ ಸನ್ನಿವೇಶವನ್ನು ತೊಡೆದುಹಾಕುವುದು. ಇದರ ಜೊತೆಯಲ್ಲಿಯೇ ಮಹಿಳೆಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಇನ್ನೊಂದು ಕಾರ್ಯಸೂಚಿಯನ್ನೂ ರೂಪಿಸಿ ಕಾರ್ಯಗತಗೊಳಿಸಬೇಕು. ಅದು ಮೂಲತಃ ಪುರುಷ ಪ್ರಾಧಾನ್ಯವನ್ನು ತಗ್ಗಿಸುವ ಮತ್ತು ಕ್ರಮೇಣ ಇಲ್ಲವಾಗಿಸುವ ಕಾರ್ಯಸೂಚಿ. ಬೇರೊಂದು ಪರಿಭಾಷೆಯಲ್ಲಿ ಹೇಳುವುದಾದರೆ, ಅದು ಮಾರ್ಕ್ಸ್‌ವಾದ ಮತ್ತು ಸ್ತ್ರೀವಾದದ ಸಮನ್ವಯ ಎನ್ನಬಹುದು.

ಅಂತಹ ಸಮನ್ವಯವು ಸಾಧ್ಯವೇ? ಪುರುಷ ಪ್ರಾಧಾನ್ಯದ ಬಗ್ಗೆ ಸ್ತ್ರೀವಾದವು ನೀಡಿರುವ ವಿಶ್ಲೇಷಣೆಯು ಮಾರ್ಕ್ಸ್‌ವಾದಕ್ಕೆ ಹೊರತಲ್ಲ, ಹೊಸದೂ ಅಲ್ಲ. ಏಂಗೆಲ್ಸ್‌ನ "ಕುಟುಂಬ, ಖಾಸಗಿ ಆಸ್ತಿ ಮತ್ತು ಪ್ರಭುತ್ವಗಳ ಉಗಮ" ಎಂಬ ಮೌಲಿಕ ಗ್ರಂಥವು ಮಾರ್ಕ್ಸ್‌ವಾದದ ಅವಿಭಾಜ್ಯ ಅಂಗ. ಅದನ್ನು ಗಮನಿಸಿದರೆ ಸ್ತ್ರೀವಾದದ ಪ್ರಮೇಯಗಳೆಲ್ಲಾ ಅನನ್ಯವೆನಿಸುವುದಿಲ್ಲ; ಅವು ಮಾರ್ಕ್ಸ್‌ವಾದದ ಆಶಯಗಳೂ ಹೌದು. ಆದರೆ ಸ್ತ್ರೀವಾದದ ವ್ಯಾಖ್ಯಾನಗಳು ಹಲವಿವೆ : ಸ್ತ್ರೀವಾದದ ಆಶಯಗಳ ಪೂರೈಕೆಗೂ ಸಾಮಾಜಿಕ ಉತ್ಪಾದನೆಗೂ ಸಂಬಂಧವಿಲ್ಲವೆಂಬ ಹಿನ್ನೆಲೆಯಲ್ಲಿ ಬಂದಿರುವ ಸ್ತ್ರೀವಾದಗಳಿವೆ. ಅದು ಮಾರ್ಕ್ಸ್‌ವಾದಕ್ಕೆ ಸ್ವೀಕಾರಾರ್ಹವಲ್ಲ; ಏಕೆಂದರೆ, ಅವು ಆಶಯಗಳ ಅಭಿವ್ಯಕ್ತಿಯಾಗಿ ಮನ್ನಣೆಗೆ ಅರ್ಹವಾಗಿರುತ್ತವೆ, ಆದರೆ ನಿರೀಕ್ಷಿತ ಫಲ ನೀಡಲಾರವು. ಉದಾಹರಣೆಗೆ, ನಾವು ಸದಾ "ಸರ್ವೇ ಜನಾಃ ಸುಖಿನೋ ಭವಂತು" (ಎಲ್ಲ ಜನರಿಗೂ ಸುಖ ದೊರೆಯಲಿ) ಎಂದು ಹೇಳಿಕೊಂಡುಬಂದಿರುವ ಉದಾತ್ತ ಸಂಸ್ಕೃತಿಯವರು. ಯಾರೋ ಒಬ್ಬ ಮೂರ್ಖ ಕೇಂದ್ರ ಸಚಿವರು ಆ ವಾಕ್ಯವು ಉಪನಿಷತ್ತಿನ ವಾಕ್ಯವೆಂದು ಹೇಳಿ ತಮ್ಮ ಅಜ್ಞಾನವನ್ನು ಪ್ರದರ್ಶಿಸಿದರು. ಆ ವಾಕ್ಯವು ಯಾವ ಉಪನಿಷತ್ತಿನಲ್ಲೂ ಇಲ್ಲ. ಅದು ಬೇರೆ ಮಾತು. ಮುಖ್ಯವಾದ ವಿಷಯವೇನೆಂದರೆ ನಾವು ಆ ಆಶಯವನ್ನು ಪೂರೈಸಲು ಸಮರ್ಥವಾದ ವ್ಯವಸ್ಥೆಯನ್ನು ರೂಪಿಸಿಕೊಳ್ಳಲಿಲ್ಲ, ಎಂಬುದು. ಅಸ್ಪೃಶ್ಯತೆ, ಜೀತದಾಳು, ಗೃಹದಾಸ್ಯದಲ್ಲಿರುವ ಮಹಿಳೆ, ಅನಕ್ಷರತೆ, ನಿರುದ್ಯೋಗ, ಜಾತಿಗಳ ಶ್ರೇಣಿ ಇವನ್ನೆಲ್ಲಾ ತುಂಬಿಕೊಂಡು 'ಎಲ್ಲರೂ ಸುಖವಾಗಿರಲಿ' ಎಂದರೆ ಏನರ್ಥ? ಅವುಗಳ ಅಸಹ್ಯ ಹೊರೆಯನ್ನು ಹೊತ್ತುಕೊಂಡಿದ್ದೂ ಸುಖವಾಗಿರಲು ಸಾಧ್ಯವೆ? ಅಸ್ಪೃಶ್ಯತೆ, ಮೊದಲಾದ ಅಮಾನುಷ ಲಕ್ಷಣಗಳನ್ನು ಇಲ್ಲವಾಗಿಸಲು ಒಂದು ನಿರ್ದಿಷ್ಟ ಚೌಕಟ್ಟು ಬೇಕು. ಅದನ್ನು ರಚಿಸದೆ ಬಾಯಿಮಾತಿನ ಸಾಂತ್ವನದಲ್ಲಿ ತೃಪ್ತಿ ಪಡೆಯಲು ಸಾಧ್ಯವಿಲ್ಲ. ಅಂಬೇಡ್ಕರರು ಅದನ್ನು ಗಮನಿಸಿಯೇ ಸಂವಿಧಾನದಲ್ಲಿ ಯಾವ ಅಂಶಗಳನ್ನು ಅಗತ್ಯವಾಗಿ ಅಡಕಗೊಳಿಸಬೇಕೆಂದು ಆಗ್ರಹಿಸಿದ್ದದ್ದು. ಈವರೆಗೂ ನಾವದಕ್ಕೆ ಪುಷ್ಟಿ ನೀಡಿಲ್ಲ. ಉತ್ಪಾದನಾ ಸಾಧನಗಳ ಸ್ವಾಮ್ಯ ಮತ್ತು ಉತ್ಪಾದನಾ ಸಂಬಂಧಗಳನ್ನು ಕ್ರಾಂತಿಕಾರಕವಾಗಿ, ಗುಣಾತ್ಮಕವಾಗಿ, ಬದಲಾಯಿಸದೆ ಸರ್ವರೂ ಸುಖಿಗಳಾಗಿರುವುದು ಸಾಧ್ಯವಿಲ್ಲ. ಸುಖವು ಎಲ್ಲಿಂದಲೋ ಜಿಗಿದುಬರುವಂತಹ ಸ್ವತಂತ್ರ ಸಾಮಗ್ರಿಯಲ್ಲ. ಪುರಾಣಗಳ ಕಥೆಗಳಲ್ಲಿ ಮಾತ್ರ ಅಂತಹ ದಿಢೀರ್ ಸುಖಗಳನ್ನು ಪಡೆಯಬಹುದು, ಅಷ್ಟೆ.

ನಮ್ಮ ರಾಜ್ಯದಲ್ಲಿ ಹತ್ತು ಮತ್ತು ಹನ್ನೆರಡನೆಯ ಶತಮಾನಗಳಲ್ಲಿ ಸಮಾನತೆಯ ತೀವ್ರ ಅಭಿವ್ಯಕ್ತಿಯು ವಚನ ಚಳುವಳಿಯಲ್ಲಿ ಗಾಢವಾಗಿ ಮೂಡಿಬಂದಿತ್ತು. ರಾಜಪ್ರಭುತ್ವದ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಸಮಾನತೆ ಮತ್ತು ಸ್ವಾತಂತ್ರ್ಯಗಳಿಗೆ ಕಡಿವಾಣಗಳಿದ್ದವು, ಈಗ ಬಂಡವಾಳಶಾಹಿ ಮತ್ತು ಅರೆ – ಊಳಿಗಮಾನ್ಯ ಪ್ರಭುತ್ವದಡಿಯೂ ಇವೆ. ಭಗವಂತನ ನಾಮಸ್ಮರಣೆಯಿಂದಾಗಲಿ, ಮತಧರ್ಮಗಳ ವೈಭವೀಕರಣದಿಂದಾಗಲಿ, ನಿರ್ವಾತದ ಸನ್ನಿವೇಶದಲ್ಲಿ ಸಮಾನತೆಯನ್ನು ಸಾಧಿಸಲು ಆಗದು. ನಮ್ಮ ದೀರ್ಘ ಇತಿಹಾಸವು ಇದನ್ನು ಸಾಬೀತು ಪಡಿಸಿದೆ. ಗಾರ್ಗಿ, ಮೈತ್ರೇಯಿ, ಅಕ್ಕಮಹಾದೇವಿ, ಮುಂತಾದವರ ಹೆಸರುಗಳು ನಗಣ್ಯವಲ್ಲ; ಆದರೆ ಹೆಸರುಗಳ ಜೊತೆ ಬಾಹ್ಯ ಪ್ರಪಂಚದ ಉತ್ಪಾದನಾ ಸಂಬಂಧಗಳ ಗುಣಾತ್ಮಕ ಪರಿವರ್ತನೆಯೂ ಮೂಲಭೂತವಾದ್ದೇ ಆಗಿರುತ್ತದೆ. ಮಾರ್ಕ್ಸ್‌ವಾದದ ಸರಳ ನಿರೂಪಣೆಯಲ್ಲಿ ಅದು ಪ್ರಮುಖವಾದ ಅಂಶ.

೧೯೧೭ರ ಸಮಾಜವಾದಿ ಕ್ರಾಂತಿಯ ನಂತರದ ವರ್ಷಗಳಲ್ಲಿ ರಷ್ಯಾದ ನಾಯಕ ಲೆನಿನ್ ಆಗಾಗ್ಗೆ ಹೇಳುತ್ತಿದ್ದುದುಂಟು : ಮಹಿಳಾ ಸಮಸ್ಯೆಗಳ ಪರಿಹಾರಕ್ಕಾಗಿ ತಥಾಕಥಿತ ಪ್ರಜಾಪ್ರಭುತ್ವವಾದೀ ರಾಷ್ಟ್ರಗಳು ಎರಡು ಶತಮಾನಗಳಲ್ಲಿ ಮಾಡಿದ್ದಕ್ಕಿಂತಲೂ ನೂರುಪಟ್ಟು ಹೆಚ್ಚಾಗಿ ನಾವು ಸಕಾರಾತ್ಮಕ ಕ್ರಮಗಳನ್ನು ಕೈಗೊಂಡಿದ್ದೇವೆ. ನಮ್ಮ ಮೊದಲ ವರ್ಷದ ಸಾಧನೆಗಳಲ್ಲಿ ಇದನ್ನು ಕಾಣಬಹುದು. ಅಸಮಾನತೆಯ ನೆಲೆಯನ್ನು ಆಮೂಲಾಗ್ರವಾಗಿ ಬದಲಿಸುವುದು ನಮ್ಮ ಉದ್ದೇಶವಾಗಿತ್ತು. ದಾಂಪತ್ಯ ವಿಚ್ಛೇದನೆಯನ್ನು ಸರಳಗೊಳಿಸಿದೆವು, ವಿವಾಹೇತರ ಸಂಬಂಧದ ಸಂತಾನಕ್ಕೆ ಮಾನ್ಯತೆ ನೀಡಿದೆವು, ಮನೆಯಾಚೆಯ ದುಡಿಮೆಗೆ ಒತ್ತುಕೊಟ್ಟು ಅವಕಾಶಗಳನ್ನು ಕಲ್ಪಿಸಿದೆವು, ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೆಚ್ಚಿದ ಭಾಗವಹಿಸುವಿಕೆಗೆ ಅನುವು ಮಾಡಿಕೊಂಡೆವು, ಶೈಕ್ಷಣಿಕ ಚಟುವಟಿಕೆಯಲ್ಲಿ ಅಗಾಧ ಪ್ರಗತಿಯನ್ನು ಕಂಡೆವು, ಸಾಮುದಾಯಿಕ ಕೃಷಿಕ್ಷೇತ್ರಗಳಲ್ಲಿ ಉನ್ನತ ಸ್ಥಾನಗಳನ್ನು ಗಳಿಸಿಕೊಂಡೆವು, ಕಾರ್ಖಾನೆಗಳಲ್ಲಿ ಗಣನೀಯ ಪ್ರಮಾಣದಲ್ಲಿ ದುಡಿಮೆಯ ಸವಲತ್ತು ಪಡೆದೆವು. ಆದರೆ ಅವೆಲ್ಲಾ ಕಾನೂನಾತ್ಮಕ ರಕ್ಷಣೆಗಳು, ಅಷ್ಟೇ;




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

**ನವಕರ್ನಾಟಕ ಪ್ರಕಾಶನ**

**ವಿಶೇಷ ಸಂಚಿಕೆ – ೨೦೨೦**

ಜನವರಿ ೨೦೨೦ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿ ಪ್ರಕಟವಾಗುತ್ತದೆ.

ಸಮಕಾಲೀನ ವಿದ್ಯಮಾನಗಳ ಮೇಲೆ ಬೆಳಕು ಬೀರುವ ವಿಚಾರಪೂರ್ಣ ಲೇಖನಗಳು

ಜೀವನದ ಬೇರೆ ಬೇರೆ ಕ್ಷೇತ್ರಗಳಲ್ಲಿ ತಮ್ಮ ಹೆಜ್ಜೆಗುರುತು ಮೂಡಿಸಿರುವ ಮಹನೀಯರೊಂದಿಗೆ ಸಂದರ್ಶನಗಳು

ಜೊತೆಗೆ ಖ್ಯಾತ ಹಿರಿಯ ಹಾಗೂ ಕಿರಿಯ ಲೇಖಕರ ಕಥೆಗಳು, ಕವಿತೆಗಳು, ಪ್ರಬಂಧಗಳು, ಸಚಿತ್ರ ಪ್ರವಾಸ ಲೇಖನಗಳು

ಅಲ್ಲದೆ, ಓದುಗರ ವೇದಿಕೆ (**ವಿಷಯ : 'ಅಭಿವೃದ್ಧಿ' : ಅಭಿವೃದ್ಧಿಯ ಮಾನದಂಡಗಳೇನು? ಪ್ರಸ್ತುತ ಭಾರತ ಅಭಿವೃದ್ಧಿಯ ಪಥದಲ್ಲಿದೆಯೇ?**) ಇವೆಲ್ಲಾ ಸೇರ್ಪಡೆಗೊಳ್ಳುತ್ತವೆ.

ಇನ್ನೂ ಹಲವಾರು ವೈಶಿಷ್ಟ್ಯಗಳೊಂದಿಗೆ ಪ್ರಕಟವಾಗಲಿದೆ.

'ಹೊಸತು' ಚಂದಾದಾರರಿಗೆ ವಾರ್ಷಿಕ ವಿಶೇಷ ಸಂಚಿಕೆ ಉಚಿತ !

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ೫೧೫೫, ಬೆಂಗಳೂರು – ೧

ದೂರವಾಣಿ : ೨೨೧೬೧೯೦೦; ೨೨೧೬೧೯೧೧, ೨೨೧೬೧೯೧೨

e-mail : navakarnataka@gmail.com; hosathu@gmail.com

ಅವಿನ್ನೂ ಸಾಂಸ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸ್ಥಿರಗೊಂಡಿಲ್ಲ.

೧೯೫೦ರಲ್ಲಿ ನಮ್ಮ ದೇಶದ ಸಂವಿಧಾನವು ಅಂಗೀಕಾರದ ಹಂತವನ್ನು ಮುಟ್ಟಿದ್ದಾಗ ಸಂವಿಧಾನ ರಚನಾ ಸಭೆಯಲ್ಲಿ ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಹೇಳಿದ್ದ ಮಾತುಗಳು ನೆನಪಿಗೆ ಬರುತ್ತವೆ: "ಈ ನಮ್ಮ ಸಂವಿಧಾನದಡಿಯಲ್ಲಿ ನಾವು ರಾಜಕೀಯ ಸಮಾನತೆ ಪಡೆಯುತ್ತೇವೆ, ಆದರೆ ಅದು ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆಯ ಅಡಿಪಾಯದ ಮೇಲೆ ನಿಂತಿರುತ್ತದೆ." ೧೯೪೭ಕ್ಕೂ ಮುನ್ನ ಅವರು, ಬರಲಿದ್ದ ಸಂವಿಧಾನದಲ್ಲಿ ಆರ್ಥಿಕ ಮತ್ತು ತನ್ಮೂಲಕ ಸಾಮಾಜಿಕ ಸಮಾನತೆಗೆ ಅಗತ್ಯವಾದ ಸೂಚನೆಗಳನ್ನು ಸೂಚಿಸಿದ್ದರೆಂಬುದನ್ನು ಈಗಾಗಲೇ ನೋಡಿದ್ದೇವೆ. ಅಂಬೇಡ್ಕರರ ಬಗ್ಗೆ ಗೌರವವನ್ನು ಇರಿಸಿಕೊಂಡಿರುವವರು ಮೊದಲು ಅದರತ್ತ ಸೂಕ್ಷ್ಮವಾಗಿ ಗಮನ ಹರಿಸಬೇಕು. ಅಂಬೇಡ್ಕರರ ನಿಜವಾದ ಸಂವಿಧಾನ ಅದು, ಈಗ ನಮ್ಮದಾಗಿರುವುದು ಸಂವಿಧಾನ ರಚನಾ ಸಭೆಯು ಮೊಟಕುಗೊಳಿಸಿದ ಸಂವಿಧಾನ. ಅದರಲ್ಲಿ ಭೂಮಿಯ ಮತ್ತಿತರ ಖಾಸಗಿ ಆಸ್ತಿಯ ಒಡೆತನವನ್ನು ಮೂಲಭೂತ ಹಕ್ಕನ್ನಾಗಿ ಪ್ರತಿಪಾದಿಸಲಾಗಿದೆ; ೧೯೪೭ರ ಮುಂಚಿನ ಅಂಬೇಡ್ಕರ್ ಸೂಚನೆಗಳಲ್ಲಿ ಉತ್ಪಾದನಾ ಸಾಧನಗಳಾದ ಆಸ್ತಿಯು ಸಾರ್ವಜನಿಕ ವಲಯದ್ದೇ ಆಗಿರಬೇಕೆಂಬ ಸೂಚನೆ ಇದೆ. ಸಮಾಜದಲ್ಲಿ ಗುಣಾತ್ಮಕ ಬದಲಾವಣೆಯನ್ನು ಈ ಸೂಚನೆಯನ್ನು ಕಾರ್ಯಗತಗೊಳಿಸುವ ಮೂಲಕ ಪಡೆಯಲಾಗುತ್ತದೆ. ಅದು ಕ್ರಾಂತಿಕಾರಿ ಬೆಳವಣಿಗೆ, ಮಹಿಳಾ ವಿಮುಕ್ತಿಗೂ ಅದು ಹಾದಿ. ಹಾಗೆಂದು ಆವರೆವಿಗೆ ಪರಿಮಾಣಾತ್ಮಕ ಬದಲಾವಣೆಗಳನ್ನು ಉಪೇಕ್ಷಿಸುವಂತಿಲ್ಲ. ಒಬ್ಬೊಬ್ಬ ಮಹಿಳೆಯೂ "ವಿನಿಮಯ ಮೌಲ್ಯ"ದ ಉತ್ಪಾದಕಳಾಗಿ, ಸಮಾಜೀಕರಣಗೊಂಡ ಉತ್ಪಾದನಾ ವ್ಯವಸ್ಥೆಗೆ ತನ್ನದೇ ಕೊಡುಗೆ ನೀಡುತ್ತಾಳೆ. ಅದು ಉನ್ನತ ಕ್ರಾಂತಿಕಾರಿ ಹಂತಕ್ಕೇರುವುದು ವೈಜ್ಞಾನಿಕ ಸಮಾಜವಾದಿ ವ್ಯವಸ್ಥೆಯಲ್ಲಿ. ಈ "ವೈಜ್ಞಾನಿಕ" ಎಂಬುದು ಮಾರ್ಕ್ಸ್‌ವಾದಿ ಸಮಾಜವಾದದ ನಾಮಧೇಯ. ಬೇರೆಷ್ಟೋ ಸಮಾಜವಾದಗಳಿಂದ ಅದು ಗುಣಾತ್ಮಕವಾಗಿ ಭಿನ್ನವಾದ್ದು.

ಇನೆಸ್ಸಾ ಅರ್ಮಾಂಡ್ ಎಂಬಾಕೆ ಲೆನಿನ್ ಜೊತೆ ೧೯೧೭ಕ್ಕೆ ಮುಂಚೆ ಮತ್ತು ಆಮೇಲೆ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಸಂಪೂರ್ಣವಾಗಿ ತೊಡಗಿಕೊಂಡಿದ್ದವಳು. ಆಕೆಯ ಒಂದು ನಿರೂಪಣೆ ಹೀಗಿದೆ : "ಸ್ತ್ರೀ ವಿಮುಕ್ತಿಯು ವೈಜ್ಞಾನಿಕ ಸಮಾಜವಾದ ವಿಲ್ಲದೆ ಸಾಧ್ಯವಿಲ್ಲ ಮತ್ತು ವೈಜ್ಞಾನಿಕ ಸಮಾಜವಾದವು ಸ್ತ್ರೀ ವಿಮುಕ್ತಿ ಇಲ್ಲದ ತನಕ ಅಪೂರ್ಣವಾಗಿರುತ್ತದೆ." ಇದನ್ನು ಮಾರ್ಕ್ಸ್‌ವಾದ ಮತ್ತು ದಲಿತರ ವಿಮೋಚನೆಯ ಸಂದರ್ಭಕ್ಕೂ ಅನ್ವಯಿಸಬೇಕು. ಅನ್ಯೋನ್ಯಾಭಾವಕ್ಕೆ ಇದೊಂದು ಉತ್ತಮ ಉದಾಹರಣೆ : "ಮಾರ್ಕ್ಸ್‌ವಾದದ ಕ್ರಾಂತಿಕಾರಿ ಸಿದ್ಧಾಂತದ ಅನುಷ್ಠಾನವಿಲ್ಲದೆ ದಲಿತರ ವಿಮೋಚನೆಯು ಪೂರ್ಣಪ್ರಮಾಣದ್ದಾಗುವುದಿಲ್ಲ ಮತ್ತು ದಲಿತರು ಮಾರ್ಕ್ಸ್‌ವಾದಿ ಚಳುವಳಿಯ ಅವಿಭಾಜ್ಯ ಅಂಗವಾಗದೆ ಮಾರ್ಕ್ಸ್‌ವಾದಿ ಸಿದ್ಧಾಂತದ ಅನುಷ್ಠಾನವು ಯಶಸ್ವಿಯಾಗುವುದಿಲ್ಲ."

ಸ್ತ್ರೀ ವಿಮುಕ್ತಿಯು ಅಪೇಕ್ಷಿತ ಪರಿಣಾಮ. ಆದರೆ ಮಾರ್ಕ್ಸ್ ಹೇಳಿದಂತೆ "ಮಾನವನು ಮಾನವನ ಮೇಲೆ ಪ್ರಾಬಲ್ಯ ಮೆರೆಯುವುದನ್ನು ರದ್ದುಗೊಳಿಸುವುದರ ಆಧಾರದ ಮೇಲಷ್ಟೇ ಇದನ್ನು ಸಾಧಿಸಲಾಗುತ್ತದೆ; ಅರ್ಥಾತ್ ಬಂಡವಾಳಶಾಹಿ (ಮತ್ತು ಅರೆ – ಊಳಿಗಮಾನ್ಯತೆಯು) ದುಡಿಯುವವರ ಮೇಲೆ ಪ್ರಾಬಲ್ಯವನ್ನು ಮೆರೆಸುವುದನ್ನು ಅಂತ್ಯಗೊಳಿಸಿದಾಗ ಮಾತ್ರ ಅದು ಸಿದ್ಧಿಸುತ್ತದೆ." ಮಾನವ ಸಮಾಜದಲ್ಲಿ ಅಸಮಾನತೆಗೆ ಮತ್ತು ಮಹಿಳಾ ಸಮಸ್ಯೆಗೆ ಸುಮಾರು ಮೂರು ಸಾವಿರ ವರ್ಷಗಳ ಇತಿಹಾಸವಿದೆ; ಹಾಗೆಂದು ಅದರ ನಿವಾರಣೆಗೆ ಮತ್ತೆ ಸಾವಿರ ವರ್ಷ ಕಾಯುವುದು ಬೇಡ. ಈಗಾಗಲೇ ಸಮಾನತೆಯ ಹೊಸ್ತಿಲ ಬಳಿಗೆ ಬಂದಿದ್ದೇವೆ. ಅದನ್ನು ದಾಟಲು ಅನೇಕ ಪ್ರತಿಬಂಧಕಗಳಿವೆ : ಜಾಗತೀಕರಣದ ಭರಾಟೆ, ಮತಧರ್ಮೀಯವಾಗಿ ಒಡಕು ಮತ್ತು ವೈಮನಸ್ಯ ಹುಟ್ಟುಹಾಕುವ ಕುತ್ಸಿತ ರಾಜಕಾರಣ, ಪ್ರಗತಿಪರ ಪಕ್ಷಗಳ ಹಾಗೂ ಸಂಘಟನೆಗಳ ಅನೈಕ್ಯತೆ, ಇತ್ಯಾದಿ. ಅವುಗಳನ್ನೆದುರಿಸಿ ಮುಂದೆ ಸಾಗಲು ಕೆಲವು ಸೈದ್ಧಾಂತಿಕ ಗೊಂದಲಗಳೂ ಇವೆ. ೧೯೧೭ರ ರಷ್ಯಾ ಸಮಾಜವಾದಿ ಕ್ರಾಂತಿಯ ನಂತರ ಲೆನಿನ್ ನೇತೃತ್ವದ ಸರ್ಕಾರವು ಘೋಷಿಸಿದ ಮೊಟ್ಟಮೊದಲ ಶಾಸನವು ಭೂಮಿಯನ್ನು ಉಳುವ ರೈತರಿಗೆ ಹಸ್ತಾಂತರಿಸುವುದಾಗಿತ್ತು. ಕಾನೂನಾತ್ಮಕ ಸಮಾನತೆಯು ಸ್ವಾಗತಾರ್ಹ, ಅದು ಬೇಕು, ಆದರೆ ಅದಷ್ಟೇ ಸಾಲುವುದಿಲ್ಲ ಎಂಬ ಅರಿವು ಲೆನಿನ್‌ಗೆ ಇದ್ದಿತು. ಸುಮಾರು ಮೂರು ದಶಕಗಳ ಹಿಂದೆ ಇರಾನಿನ ದೊರೆಯನ್ನು ಕೆಳಗಿಳಿಸಿ ಖೊಮೇನಿ

## 'ಹೊಸತು' ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೨೦ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು, ಲೇಖನಗಳ ಆಯ್ಕೆ / ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಸಂಚಿಕೆಯನ್ನು ೨೦೨೦ ಜನವರಿ ೧೫ರಂದು ರವಾನಿಸಲಾಗುವುದು. ಓದುಗರು ಸಹಕರಿಸ ಬೇಕಾಗಿ ವಿನಂತಿ.

ನೇತೃತ್ವದಲ್ಲಿ ಒಂದು ಹೊಸ ಸರ್ಕಾರ ಬಂದಿತು. ಅದು ವರ್ಗ ಹೋರಾಟದ ಹಿನ್ನೆಲೆಯಲ್ಲಿ ಉಂಟಾದ ಪಲ್ಲಟವಲ್ಲ. ಆದರೆ ಖೊಮೇನಿ ನಡೆಸಿದ್ದ "ಕ್ರಾಂತಿ"ಯನ್ನು ಫೂಕೋ ಎಂಬ ಫ್ರಾನ್ಸಿನ ಚಿಂತಕ ಸ್ವಾಗತಿಸಿದುದಲ್ಲದೆ "ಇದು ವರ್ಗ ಸಮರಕ್ಕೆ ಪರ್ಯಾಯವಾದ್ದು" ಎಂದು ಪರಾಮರ್ಶಿಸಿದ್ದ. ಫೂಕೋ ಚಿಂತನೆಯು ಅಧಿಕಾರ ಕೇಂದ್ರದ ಆಧಾರದಿಂದ ಸಾಮಾಜಿಕ – ಚಾರಿತ್ರಿಕ ಘಟನೆಗಳನ್ನು ವಿಶ್ಲೇಷಿಸುತ್ತದೆ ಎನ್ನಲಾಗಿದೆ. ಖೊಮೇನಿಯ ಮೊದಲ ಆಜ್ಞೆ ಮಹಿಳೆಯರ ವಿರುದ್ಧದ್ದಾಗಿತ್ತು. ಆವರೆಗೆ ಮಹಿಳೆಯು ಗಳಿಸಿದ್ದ ಅಲ್ಪ ಸ್ವಾತಂತ್ರ್ಯಕ್ಕೂ ಧಕ್ಕೆ ಉಂಟಾಯಿತು. ಮತಧರ್ಮದ ಪಾಶಕ್ಕೆ ಮಹಿಳೆ ಪೂರ್ತಿಯಾಗಿ ಸಿಲುಕಿಕೊಂಡಳು. ಈಗಲೂ ಆ ಬಂಧನದಿಂದ ಹೊರಬರಲಾಗಿಲ್ಲ. ಆದರೆ ಫೂಕೋ, ಖೊಮೇನಿ ಮಾದರಿಯ ಹೋರಾಟವನ್ನು "ವರ್ಗ ಸಮರಕ್ಕೆ ಪರ್ಯಾಯ" ಎಂದು ಭಾವಿಸಿದ್ದ. ಅದು ಸೈದ್ಧಾಂತಿಕವಾಗಿ ತೀರಾ ಅಪ್ರಬುದ್ಧ ಕಾಣ್ಕೆಯಾಗಿತ್ತು. ಅದು ಮತ್ತು ಅಂತಹ ವಿಶ್ಲೇಷಣಾ ವಿಧಾನಗಳು ಸ್ತ್ರೀ ವಿಮುಕ್ತಿಗೆ ಹಾದಿಯಲ್ಲ. ಖೊಮೇನಿ ಸ್ತ್ರೀಗೆ ಮತದಾನದ ಹಕ್ಕನ್ನು ನಿಷೇಧಿಸಿದ ಮತ್ತು ಭೂಸುಧಾರಣೆಯನ್ನು ತಿರಸ್ಕರಿಸಿದ. ಒಟ್ಟಿನಲ್ಲಿ, ಸ್ತ್ರೀಯರ ಸಂಪೂರ್ಣ ದಮನವು ಜಾರಿಗೆ ಬಂದಿತು. ಮಾರ್ಕ್ಸ್‌ವಾದಿ ಚಿಂತನೆ ಮತ್ತು ಕ್ರಿಯೆಯ ಹಾದಿಯ ಸಮರ್ಪಕತೆಯನ್ನು ಇದರಿಂದಲೂ ತಿಳಿಯಬಹುದು. ಸ್ತ್ರೀವಾದಿ ಸಂಕಥನಗಳಲ್ಲಿ ಉಕ್ತವಾಗಿರುವ ವಿಮುಕ್ತಿಯ ಹಾದಿಗಳ ಬಗ್ಗೆ ನಿಷ್ಕೃಷ್ಟ ವಿಮರ್ಶೆಯ ಅಗತ್ಯವನ್ನಿದು ಒತ್ತಿ ಹೇಳುತ್ತದೆ. ನಮ್ಮ ಆಯ್ಕೆಯು ಖಚಿತವಾಗಿ ಯಾವುದೆಂಬುದನ್ನು ತಿಳಿಯಬೇಕು.

ನಮ್ಮ ದೇಶದಲ್ಲಿ ವಸಾಹತುಶಾಹಿಯ ವಿರುದ್ಧದ ಹೋರಾಟದಲ್ಲಿ ಮಹಿಳೆಯರು ಅಪಾರ ಸಂಖ್ಯೆಯಲ್ಲಿ ಭಾಗಿಗಳಾಗಿದ್ದರು. ನಂತರ ನಮ್ಮ ದೇಶದಲ್ಲಿ ಅವೆಷ್ಟೋ 'ಎರಡನೆಯ ಸ್ವಾತಂತ್ರ್ಯ ಹೋರಾಟಗಳು' ನಡೆದುಹೋಗಿವೆ. ಜೊತೆಗೆ ಒಂದು 'ಸಂಪೂರ್ಣ ಕ್ರಾಂತಿ' ಸಹ ನಡೆದುಹೋಯಿತು. ಜನಸಮುದಾಯದ, ಅದರಲ್ಲೂ ವಿಶೇಷವಾಗಿ ಮಹಿಳೆಯರ, ಸ್ಥಿತಿಗತಿಗಳಲ್ಲಿ ಎಷ್ಟು ವ್ಯಾಪಕ ಬದಲಾವಣೆಗಳು ಉಂಟಾಗಿವೆ ಎಂಬುದನ್ನು ವಿಮರ್ಶಾತ್ಮಕವಾಗಿ ತಿಳಿಯುವ ಪ್ರಯತ್ನಗಳು ನಡೆದಿವೆ, ಆದರೆ ಅದರಿಂದ ಹೊಸ ಪರಿಣಾಮಕಾರಿ ಯೋಜನೆಗಳನ್ನು ರೂಪಿಸಿದ್ದು ಕಡಿಮೆ. ಒಂದು ವರ್ಗದ ಮಹಿಳೆಯರ ಸನ್ನಿವೇಶವನ್ನು ಗಮನಿಸಿ ಇಡೀ ಮಹಿಳಾಲೋಕದ ಬಗ್ಗೆ ತೀರ್ಮಾನಗಳನ್ನು ನೀಡುವುದು ಮಹಿಳೆಯರಿಗೆ ವಂಚನೆ ಮಾಡಿದಂತೆಯೇ ಸರಿ. ಅಲ್ಲದೆ, ಮಹಿಳೆಯರು ಕೇವಲ ನಗರಗಳಲ್ಲಿ ಇಲ್ಲ.

ಕ್ರಾಂತಿಕಾರಿ ಬದಲಾವಣೆಗಳು ರಷ್ಯಾದಲ್ಲಿ ಜರುಗಿದವು, ನಿಜ; ಆದರೆ ಅವು ಗಟ್ಟಿಯಾಗಿ ಉಳಿಯಲಿಲ್ಲವೆಂಬುದೂ ಅಷ್ಟೇ ನಿಜ. ೧೯೧೭ರ ತೀವ್ರ ಬದಲಾವಣೆಯು ಮಹಿಳೆಯ ಪರವಾಗಿತ್ತು, ಆದರೆ ೧೯೩೦ರ ದಶಕದಲ್ಲಿ ಹಿನ್ನಡೆಗಳು ಕಂಡುಬಂದವು. ವಿವಾಹೇತರ ಸಂಬಂಧದ ಸಂತಾನದ ಮಾನ್ಯತೆ ಮತ್ತು ವಿವಾಹ ವಿಚ್ಛೇದನದ ಕಾಯಿದೆ ಎರಡನ್ನೂ ಮಹಿಳೆಯ ಸ್ವಾತಂತ್ರ್ಯದ ವಿರೋಧಿ ನೆಲೆಗೆ ಮತ್ತೆ ತರಲಾಯಿತು. ಅದು ಪುರುಷ ಪಾರಮ್ಯದ ಫಲ, ಕಡು ಸಂಪ್ರದಾಯದ ಮರುಹುಟ್ಟು. ಎರಡನೆಯ ಮಹಾಯುದ್ಧದ ಕಾಲದಲ್ಲಿ, ಅಂದರೆ ೧೯೪೦ರ ದಶಕದಲ್ಲಿ, ಪುನಃ ಪ್ರಗತಿಪರ ಕಾಯಿದೆಗಳು ಬಂದು ಪರಿಸ್ಥಿತಿ ಸುಧಾರಿಸಿತು. ಆದರೆ ೧೯೯೦ರ ದಶಕದಲ್ಲಿ ಕ್ರಾಂತಿಯ ಆಶಯಗಳನ್ನು ತಿರುಗುಮುರುಗು ಮಾಡಲಾಯಿತು. ಮಹಿಳೆಯ ಸ್ಥಾನಮಾನಗಳು ಅಧೋಗತಿಗಿಳಿದವು. ಕ್ರಾಂತಿ ಮತ್ತು ಅದರ

ಹಿನ್ನಡೆಗೂ ಮಹಿಳಾ ವಿಮೋಚನೆಗೂ ಅವಿನಾಭಾವ ಸಂಬಂಧವಿರುವುದು ಇದರಿಂದ ಸ್ಪಷ್ಟವಾಗುತ್ತದೆ. ಹಿನ್ನಡೆಗೆ ಕಾರಣಗಳೇನೆಂಬುದನ್ನು ಇಲ್ಲಿ ಚರ್ಚಿಸುವುದು ವಿಷಯಾಂತರವಾಗುತ್ತದೆ.

ಕಡೆಯ ಮಾತೆಂದು ಇನ್ನೊಂದಂಶವನ್ನು ಪ್ರಸ್ತಾಪಿಸಬಹುದು : ಲಿಂಗ ಎಂಬುದು ಒಂದು ವರ್ಗವಲ್ಲ, ಅದು ದೈಹಿಕ ಭಿನ್ನತೆ, ಅಷ್ಟೆ. ಮೂರು ಲಿಂಗಗಳವರೂ ಎರಡು ವರ್ಗಗಳಲ್ಲಿ ಹಂಚಿಹೋಗಿರುವುದು ಬಂಡವಾಳಶಾಹಿ, ಅರೆ – ಊಳಿಗಮಾನ್ಯ ವ್ಯವಸ್ಥೆಯ ಲಕ್ಷಣ. ಬಂಡವಳಿಗ – ದುಡಿಮೆಗಾರ, ಊಳಿಗದವರ ಪ್ರಭು – ಊಳಿಗದವರು, ಎಲ್ಲಾ ಮೂರು ಲಿಂಗಗಳವರನ್ನು ಒಳಗೊಂಡಿರುತ್ತವೆ. ಅಷ್ಟರಮಟ್ಟಿಗೆ ಸ್ತ್ರೀ – ಪುರುಷರಿಗೆ ಸಾಮಾಜಿಕ ಸಂಬಂಧಗಳು ಏಕಪ್ರಕಾರ; ಆದರೆ ಅದರ ಜೊತೆಗೆ ಮಹಿಳೆಗೆ ಇನ್ನೊಂದು ಸರಪಳಿಯ ಕೊಂಡಿ ಸೇರಿಕೊಂಡಿರುತ್ತದೆ. ಅದು ವರ್ಗ ವಿಭಜನೆಯನ್ನು ಮೀರಿದ ರಾಜಕೀಯ – ಸಾಮಾಜಿಕ – ಆರ್ಥಿಕ ದಮನ. ಏಕೆಂದರೆ, ಎರಡೂ ವರ್ಗಗಳಲ್ಲಿ ಪುರುಷ ಪ್ರಾಧಾನ್ಯದ ಹಿಡಿತದಿಂದಾಗಿ ಮಹಿಳೆಗೆ ವಿಶಿಷ್ಟ ಬಾಧೆಗಳಿರುತ್ತವೆ, ಸಮಾನತೆಗೆ ಧಕ್ಕೆಯುಂಟಾಗುತ್ತದೆ, ಸ್ವಾತಂತ್ರ್ಯಕ್ಕೆ ಕಡಿವಾಣ ಹಾಕಲಾಗಿರುತ್ತದೆ. ಲಿಂಗವು ವರ್ಗವಲ್ಲ, ಆದರೆ ಲಿಂಗಸಂಬಂಧೀ ಸಮಾನತೆಗಾಗಿ, ಪುರುಷ ಪ್ರಾಧಾನ್ಯದ ವಿರುದ್ಧ ನಡೆಯುವ ಹೋರಾಟವು ಅನಿವಾರ್ಯವಾಗಿ ರಾಜಕೀಯ ಹೋರಾಟವಾಗಿರುತ್ತದೆ. ಆ ಮಟ್ಟಿಗೆ ಅದು ವರ್ಗ ಹೋರಾಟದ ಅವಿಭಾಜ್ಯ ಅಂಗವಾಗಿರುತ್ತದೆ. ಮಾರ್ಕ್ಸ್‌ವಾದವು ಅದನ್ನು ಎತ್ತಿಹಿಡಿಯುತ್ತದೆ.

ಕ್ರಮಿಸಬೇಕಾದ ಹಾದಿ ಅಸಾಧ್ಯ ಮುಗ್ಗಟ್ಟುಗಳಿಂದ ಕೂಡಿದೆ. ಸ್ತ್ರೀ – ಪುರುಷರು ಜೊತೆಯಾಗಿ ಹೆಜ್ಜೆ ಹಾಕಿ ತಮ್ಮ ಸ್ವಾತಂತ್ರ್ಯ ಮತ್ತು ಸಮಾನತೆಗಳನ್ನು ಗಳಿಸಿಕೊಳ್ಳಬೇಕಾಗಿದೆ, ವಿಕಸಿಸಿಕೊಳ್ಳಬೇಕಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತವು ಆ ಹಾದಿಯಲ್ಲಿ ದಾರಿದೀಪವಾಗಬಲ್ಲದು. ವರ್ಗದೃಷ್ಟಿಯನ್ನು ಹೊರತುಪಡಿಸಿ ಸಮಾನತೆಗಾಗಿ ಹಾತೊರೆಯುವುದು ಮಾರ್ಕ್ಸ್‌ವಾದದ ಹಾದಿಯಲ್ಲ. ಈ ದೃಷ್ಟಿಯ ಆಧಾರದಲ್ಲಿ ನಡೆಯುವ ಹೋರಾಟವು ಮಹಿಳೆಯರ ಮತ್ತು ಪುರುಷರ ಸಮವಾದ ಸಹಭಾಗಿತ್ವದಲ್ಲೇ ನಡೆಯಬೇಕಾಗುತ್ತದೆ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫




## ಹೀಗೊಂದು ತಹತಹಿಕೆ

### ಹೌದು?

ಮನೆಯ ಪಡಸಾಲೆಯ
ಕಂಬಕ್ಕೊರಗಿ
ಒಬ್ಬಂಟಿ ಕೂತ ನನ್ನ
ಮೈ ಮನದ ತುಂಬೆಲ್ಲ
ನೀನೇ ಭೂತದಂತೆ ಆವರಿಸಿಕೊಂಡಂತೆಲ್ಲ
ಅನಿರ್ವಚನೀಯ ಆನಂದ !
ಕಾಡುವ ನಿನ್ನ ಸುತ್ತಲೇ
ಗಿರಕಿ ಹೊಡೆಯುವ ಮನಸ್ಸು
ತಹಬಂದಿಗೆ ಬರುವುದೇ ಇಲ್ಲ !!
ನೆಗೆಯುತ್ತದೆ ಪುಂಡು ಹೋರಿಯಂತೆ
ನಾಚಿಕೆಯೇ ಇಲ್ಲ !

ಗವ್ ಎನ್ನುವ ಕತ್ತಲೆ ಮುಸುಕಿದಂತೆಲ್ಲ
ನಿನ್ನನೇ ಧೇನಿಸುತ
ಗಂಡನ ರೋಮದೆದೆಯ ಮೇಲೆ
ಕೈಯಾಡಿಸುವಾಗ
ಆಷಾಢಭೂತಿತನ ನನ್ನ ಅಣಕಿಸಿದರೂ
ಕಾಡುವ ನಿನ್ನ ನೆನಪಿಗೊಂದು ಹೆಸರಿಟ್ಟು
ಇನ್ನೊಂದಿಷ್ಟು ಆಳಕ್ಕಿಳಿಯುತ್ತೇನೆ
ಗಂಡನೊಳಗಲ್ಲ !
ನಿನ್ನ ನೆನಪಿನಾಳಕ್ಕೆ !!
ಇವನ ಸಾಮೀಪ್ಯಕ್ಕಿಂತ ನಿನ್ನ
ನೆನಪೇ
ಹೆಚ್ಚೆಚ್ಚು ಖುಷಿ ಕೊಟ್ಟಿತಾ ಒಳಗೊಳಗೆ !
ಅರಿವಿಲ್ಲ? ಒಂದು ರೀತಿಯ ಗೊಂದಲ
ಎನ್ನೊಳಗೆ!!

ಗಂಡನೊಡನೆ ಬೆರೆತು ರಾತ್ರಿಯ ಉದ್ದಗಲದಲ್ಲಿ
ಮಗ್ಗಲು ಬದಲಿಸಿದ –
ನಟನಾ ಭಾವಗಳನ್ನೆಲ್ಲ ಕೊಡವಿ–
ಬೆಳ್ಳಂ ಬೆಳಗ್ಗೆ ಸೀರೆ ನೆರಿಗೆಗಳ ಮೇಲೆ
ಕೈಯಾಡಿಸುವಾಗ
ಮತ್ತೆ ನೀನು ನೆನಪಾಗುತ್ತೀಯೆ !
ಹಿತ್ತಲ ಗಿಡದ ಬೇರುಗಳಾಳದಲ್ಲೂ
ರೋಮಾಂಚನವೆದ್ದದ್ದನ್ನು ನೋಡಿ
ಸಂಭ್ರಮಿಸುತ್ತೇನೆ !!

ಮಟಮಟ ಮಧ್ಯಾಹ್ನದ
ಉರಿಬಿಸಿಲಲ್ಲೂ ವಿಜೃಂಭಿಸುತ್ತೇನೆ ನೀ
ಕಾಡುವ ಪರಿಗೆ !!
ಬರ್ರನೆ ಉಕ್ಕಿ ಬಂದ ಗಮಗಮ
ಕಾಫಿಯ ನೊರೆಯಲ್ಲೂ ನಿನ್ನ
ನೆನಪು ಮಸುಕಾಗುತ್ತಲೇ ಇಲ್ಲ !
ಗಾಬರಿಯೆನಗೆ !

ಈ ಮುಸ್ಸಂಜೆಗೆ ಮತ್ತದೇ ಬೇಸರ ;
ಚಡಪಡಿಕೆ ಅಡಿಗಡಿಗೆ!
ಹೆಸರೇನಿಡಲಿ ಹೇಳು–
"ಒತ್ತಾಯದ, ಸಲ್ಲದ, ಸಲ್ಲಲಿತವಲ್ಲದ"
ಈ ಬಂಧದ ಕೊಂಡಿಗೆ?!

ಈ ರಾತ್ರಿಯಾದರೂ ನನ್ನ ಇಬ್ಬಂದಿತನ
ಅರ್ಥವಾದೀತೆ ಇವನಿಗೆ ?!
ಇವನೆದೆಯಲ್ಲಿ ಮೂಡದ
ನನ್ನ್ಹೆಜ್ಜೆ ಗುರುತಿಗಾಗಿ ತಡಕಾಡದೇ
ಜೊನ್ನ ಸುರಿವ ರಾತ್ರಿಯಲ್ಲಿ
ಅನಾಮತ್ತಾಗಿ ನನ್ನನ್ನು
ನಿನ್ನ ಕೈಯಲ್ಲಿರಿಸಿ ಬಿಡುವನೇ ಇವನು ?

ಯಾಕೆ ನಗು...?
ಇದೆಂಥ ಹಳಹಳಿಕೆಯೆಂದೇ ?
ಮಡಿವಂತಿಕೆಯ ಮನಸುಗಳೆಲ್ಲ
ಮೂಗು ಮುರಿಯುವಾಗ –
ಅದೋ ನೋಡು,
ಆಳಕ್ಕಿಳಿದೇ ಬಿಟ್ಟಿತು ದುಂಬಿ
ಪಕಳೆ ಪಕಳೆಗಳ ಮಧ್ಯೆ ಮೈ ತುಂಬಿ !!
ಕಾಡುವ ಹಳವಂಡಗಳಗೊಂದಿಷ್ಟು
ಷರಾ ಗೀಚಿ
ಇಂದಾದರೂ ಇವನಿಗೆ ಬೆನ್ನು ತಿರುವಿ
ಬಂದು ಬಿಡಲೇ?
ಹೇಳು ? ನಿನ್ನೆದೆ ಕದವು ನನಗಾಗಿ ಸದಾ
ತೆರೆದಿದೆ ತಾನೆ ?!!

**ಸುಜಾತಾ ಲಕ್ಮನೆ**
ಎಎಲ್‌ಎಫ್ ೭/೬, ೧ನೇ ಮಹಡಿ, ಎಸ್‌ಎಫ್‌ಹೆಚ್‌ಎಸ್,
ನಂದಿನಿ ಲೇಔಟ್, ಬೆಂಗಳೂರು – ೫೬೦ ೦೯೬
email : sujlakmane@gmail.com

ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ವಲಯದ ಭಾಗವಹಿಸುವಿಕೆ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಹಾಗೂ ದಿನದಿಂದ ದಿನಕ್ಕೆ ಸರ್ಕಾರದ ಪಾತ್ರ ಕ್ಷೀಣಿಸುತ್ತಿರುವ ಸಂದರ್ಭದಲ್ಲಿ, ಶಿಕ್ಷಣದ ಹಕ್ಕಿನ ಅನುಷ್ಠಾನ ಮತ್ತು ಸುಸ್ಥಿರ ಅಭಿವೃದ್ಧಿ ಗುರಿಗಳ ಜಾರಿಯಲ್ಲಿ ಸರ್ಕಾರದ ಪಾತ್ರ ಏನೆಂಬುದನ್ನು ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿ ಪರಾಮರ್ಶಿಸಿತು.

ಶಿಕ್ಷಣದ ಹಕ್ಕಿನ ವಿಶೇಷ ವರದಿಗಾರರು ಮಂಡಿಸಿದ ವರದಿಯ ಆಧಾರದ ಮೇಲೆ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿಯು ಅತ್ಯಂತ ಕಳವಳ ವ್ಯಕ್ತಪಡಿಸಿದೆ. ಜೂನ್, ೨೦೧೯ರಂದು ಜರುಗಿದ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿ ಸಭೆಯ ೪೧ನೇ ಅಧಿವೇಶನದಲ್ಲಿ ವಿಶ್ವಸಂಸ್ಥೆಯ ಶಿಕ್ಷಣದ ಹಕ್ಕಿನ ವಿಶೇಷ ವರದಿಗಾರರು ಮಂಡಿಸಿದ ವರದಿಯನ್ನು ಪರಿಶೀಲಿಸಿತು. ಈ ವರದಿಯು ಶಿಕ್ಷಣದ ಹಕ್ಕು ಮತ್ತು ವಿಶ್ವಸಂಸ್ಥೆಯ ಸುಸ್ಥಿರ ಅಭಿವೃದ್ಧಿ ಗುರಿ ನಾಲ್ಕರ ಭಾಗವಾಗಿ ಎಲ್ಲಾ ಮಕ್ಕಳಿಗೆ ಪೂರ್ವ–ಪ್ರಾಥಮಿಕ ಶಿಕ್ಷಣದಿಂದ ಉನ್ನತ ಪ್ರೌಢ (೧೨ನೇ ತರಗತಿ) ಶಿಕ್ಷಣದವರೆಗೆ ಗುಣಾತ್ಮಕ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚುತ್ತಿರುವ ಖಾಸಗೀಕರಣ ಪ್ರಕ್ರಿಯೆ ಹೇಗೆ ಪ್ರತಿಕೂಲ ಪರಿಣಾಮವನ್ನು ಬೀರುತ್ತಿದೆ ಎಂಬ ವಿಷಯದ ಬಗ್ಗೆ ಪರಿಶೀಲಿಸಿತು.

ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿಯ ಈ ನಿರ್ಣಯ ಶಿಕ್ಷಣದ ಮೂಲಭೂತ ಹಕ್ಕನ್ನು ಗೌರವಿಸುವ ನಿಟ್ಟಿನಲ್ಲಿ ಅತ್ಯಂತ ಮಹತ್ವದ ಹೆಜ್ಜೆಯೆಂದು ಪರಿಗಣಿಸಲಾಗಿದೆ. ಈ ತತ್ವಗಳನ್ನು ಸರ್ಕಾರಗಳು ಗೌರವಿಸಿ ತಮ್ಮ ನೀತಿ – ಕಾರ್ಯಕ್ರಮಗಳಲ್ಲಿ ಅಳವಡಿಸಿಕೊಳ್ಳುವುದು ತುರ್ತು ಅಗತ್ಯವಾಗಿದೆ.

# ಶಿಕ್ಷಣ ಖಾಸಗೀಕರಣಕ್ಕೆ ಕಡಿವಾಣ

## ವಿಶ್ವಸಂಸ್ಥೆ ಅನುಮೋದಿಸಿದ ಅಬಿದ್‌ಜನ್ ತತ್ವಗಳು



ಎಲ್ಲಾ ಮಕ್ಕಳಿಗೆ ಕನಿಷ್ಠ ಒಂದು ಹಂತದವರೆಗಾದರೂ ಉಚಿತ ಮತ್ತು ಗುಣಾತ್ಮಕ ಶಿಕ್ಷಣ ಸಾರ್ವತ್ರಿಕ ಹಾಗೂ ಸಮಾನ ಅವಕಾಶದ ನೆಲೆಯಲ್ಲಿ ಸಿಗಬೇಕೆಂಬ ಕೂಗು ಜಾಗತಿಕ ಮಟ್ಟದಲ್ಲಿ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆ (೧೯೪೮) ಹಾಗೂ ಮಕ್ಕಳ ಹಕ್ಕುಗಳ ಒಡಂಬಡಿಕೆ (೧೯೮೯) ಶಿಕ್ಷಣ ಮಕ್ಕಳ ಮೂಲಭೂತ ಹಕ್ಕು ಎಂದು ಗುರುತಿಸಿ ಕ್ರಮವಾಗಿ ಏಳು ಹಾಗೂ ಮೂರು ದಶಕಗಳು ಕಳೆದಿವೆ. ೨೦೧೫ರಲ್ಲಿ ವಿಶ್ವಸಂಸ್ಥೆ ರೂಪಿಸಿದ ಸುಸ್ಥಿರ ಅಭಿವೃದ್ಧಿ ಗುರಿಗಳು ನಾಲ್ಕನೇ ಗುರಿ ಅನ್ವಯ ಎಲ್ಲಾ ಮಕ್ಕಳಿಗೆ ಪೂರ್ವ–ಪ್ರಾಥಮಿಕ ಶಿಕ್ಷಣದಿಂದ ಉನ್ನತ ಪ್ರೌಢ ಶಿಕ್ಷಣದವರೆಗೆ ಎಲ್ಲರನ್ನೂ ಒಳಗೊಳ್ಳುವ ಗುಣಾತ್ಮಕ ಶಿಕ್ಷಣವನ್ನು ಖಾತರಿಗೊಳಿಸುವುದಾಗಿದೆ.

ನಮ್ಮ ದೇಶದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒಂದು ಮೂಲಭೂತ ಹಕ್ಕೆಂದು ಘೋಷಿಸಿದ ಸರ್ವೋಚ್ಚ ನ್ಯಾಯಾಲಯದ ೧೯೯೩ರ ತೀರ್ಪನ್ನು ಆಧರಿಸಿ ಭಾರತದ ಸಂವಿಧಾನಕ್ಕೆ ತಿದ್ದುಪಡಿಯಾಗಿ ಪರಿಚ್ಛೇದ ೨೧ಎ ಸೇರ್ಪಡೆಯಾಗಿದೆ. ಸಂವಿಧಾನಬದ್ಧವಾದ ಈ ಹಕ್ಕನ್ನು ಸಾಕಾರಗೊಳಿಸಲು ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಕಾಯಿದೆ ೨೦೦೯ ಜಾರಿಯಾಗಿ ಒಂದು ದಶಕ ಕಳೆದಿದೆ.

ಅಂತರರಾಷ್ಟ್ರೀಯ ಹಾಗೂ ರಾಷ್ಟ್ರೀಯ ಕಾನೂನು, ನೀತಿ ಮತ್ತು ಕಾರ್ಯಕ್ರಮಗಳ ಆಶಯದಂತೆ ಶಿಕ್ಷಣ ಒಂದು ಸಾಮಾಜಿಕ ಒಳಿತಾಗಿದ್ದು, ಸರ್ಕಾರಗಳು ಎಲ್ಲಾ ಮಕ್ಕಳಿಗೆ ಅತ್ಯುತ್ತಮ ಗುಣಮಟ್ಟದ ಶಿಕ್ಷಣ ಒದಗಿಸಲು ಕ್ರಮ ಕೈಗೊಳ್ಳಬೇಕೆಂದು ನಿರಂತರವಾಗಿ ಪ್ರತಿಪಾದಿಸುತ್ತಿದ್ದರೂ, ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಶಿಕ್ಷಣದ ಖಾಸಗೀಕರಣ ಮತ್ತು ವ್ಯಾಪಾರೀಕರಣದ ಹಿನ್ನೆಲೆಯಲ್ಲಿ ಶಿಕ್ಷಣದ ಹಕ್ಕಿನ ಅನುಷ್ಠಾನ ಮತ್ತು ವಿಶ್ವಸಂಸ್ಥೆಯ ಸುಸ್ಥಿರ ಅಭಿವೃದ್ಧಿ ಗುರಿ ನಾಲ್ಕರ ಭಾಗವಾಗಿ ಎಲ್ಲಾ ಮಕ್ಕಳಿಗೆ ಪೂರ್ವ–ಪ್ರಾಥಮಿಕ ಶಿಕ್ಷಣದಿಂದ ಉನ್ನತ ಪ್ರೌಢ (೧೨ನೇ ತರಗತಿ) ಶಿಕ್ಷಣದವರೆಗೆ ಉಚಿತ, ಕಡ್ಡಾಯ ಮತ್ತು ಸಮಾನ ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ವಿಷಯದಲ್ಲಿ ಜಗತ್ತಿನಾದ್ಯಂತ ಅನೇಕ ಬಗೆಯ ಹೊಸ ಸವಾಲುಗಳು ಎದುರಾಗುತ್ತಿವೆ.

ಈ ಕುರಿತಂತೆ ಶಿಕ್ಷಣದ ಹಕ್ಕಿನ ವಿಶೇಷ ವರದಿಗಾರರು ಮಂಡಿಸಿದ ವರದಿಯ ಆಧಾರದ ಮೇಲೆ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿಯು ಅತ್ಯಂತ ಕಳವಳ ವ್ಯಕ್ತಪಡಿಸಿದೆ. ಜೂನ್, ೨೦೧೯ರಂದು ಜರುಗಿದ ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿ ಸಭೆಯ ೪೧ನೇ ಅಧಿವೇಶನದಲ್ಲಿ ವಿಶ್ವಸಂಸ್ಥೆಯ ಶಿಕ್ಷಣದ ಹಕ್ಕಿನ ವಿಶೇಷ ವರದಿಗಾರರು ಮಂಡಿಸಿದ ವರದಿಯನ್ನು ಪರಿಶೀಲಿಸಿತು. ಈ ವರದಿಯು ಶಿಕ್ಷಣದ ಹಕ್ಕು ಮತ್ತು ವಿಶ್ವಸಂಸ್ಥೆಯ ಸುಸ್ಥಿರ ಅಭಿವೃದ್ಧಿ ಗುರಿ ನಾಲ್ಕರ ಭಾಗವಾಗಿ ಎಲ್ಲಾ ಮಕ್ಕಳಿಗೆ ಪೂರ್ವ–ಪ್ರಾಥಮಿಕ ಶಿಕ್ಷಣದಿಂದ ಉನ್ನತ ಪ್ರೌಢ (೧೨ನೇ ತರಗತಿ) ಶಿಕ್ಷಣದವರೆಗೆ ಗುಣಾತ್ಮಕ ಶಿಕ್ಷಣ ಒದಗಿಸುವ ನಿಟ್ಟಿನಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚುತ್ತಿರುವ ಖಾಸಗೀಕರಣ ಪ್ರಕ್ರಿಯೆ ಹೇಗೆ ಪ್ರತಿಕೂಲ ಪರಿಣಾಮವನ್ನು ಬೀರುತ್ತಿದೆ ಎಂಬ ವಿಷಯದ ಬಗ್ಗೆ ಪರಿಶೀಲಿಸಿತು.

**ಡಾ॥ ನಿರಂಜನಾರಾಧ್ಯ ವಿ. ಪಿ.**

ಕಳೆದ ಎರಡು ದಶಕಗಳಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಕ್ಷೇತ್ರದಲ್ಲಿ ಗಾತ್ರ ಮತ್ತು ವ್ಯಾಪ್ತಿಯ ದೃಷ್ಟಿಯಿಂದ ಖಾಸಗಿ ವಲಯದ ಭಾಗೀದಾರರ ಭಾಗವಹಿಸುವಿಕೆ ಗಣನೀಯವಾಗಿ ಹೆಚ್ಚಿದೆ. ಇದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಸೂಕ್ಷ್ಮ ರಚನೆಯ ಶಿಕ್ಷಣ ವ್ಯವಸ್ಥೆಯನ್ನು ಒಳಗೊಂಡಂತೆ ಜಗತ್ತಿನ ಕಡಿಮೆ ಹಾಗೂ ಮಧ್ಯಮ ಆದಾಯದ ಮತ್ತು ಶ್ರೀಮಂತ ರಾಷ್ಟ್ರಗಳ ಶೈಕ್ಷಣಿಕ ವ್ಯವಸ್ಥೆಗಳನ್ನು ತೀವ್ರತರದ ಬದಲಾವಣೆಗೆ ಒಳಪಡಿಸಿವೆ. ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಸಂಸ್ಥೆಗಳ ಪಾಲು ದಿನದಿಂದ ದಿನಕ್ಕೆ ಹೆಚ್ಚುತ್ತಿದೆ. ನಮ್ಮ ರಾಜ್ಯವನ್ನೇ ಉದಾಹರಣೆಗೆ ತೆಗೆದುಕೊಂಡರೆ, ೨೦೧೦–೧೧ರಲ್ಲಿ ೧ರಿಂದ ೧೦ನೇ ತರಗತಿಯವರೆಗಿದ್ದ ಖಾಸಗಿ ಶಾಲೆಗಳ ಸಂಖ್ಯೆ ೧೫,೫೧೧ರಿಂದ ೨೦೧೮–೧೯ರಲ್ಲಿ ೨೧,೧೭೪ಕ್ಕೆ ಏರಿದೆ. ಕಳೆದ ಒಂದು ದಶಕಕ್ಕಿಂತ ಕಡಿಮೆ ಅವಧಿಯಲ್ಲಿ ಖಾಸಗೀಕರಣದ ಬೆಳವಣಿಗೆ ಶೇಕಡ ೨೬.೭. ಇದೇ ಅವಧಿಯಲ್ಲಿ ೧ರಿಂದ ೧೦ನೇ ತರಗತಿಯವರೆಗಿದ್ದ ಸರ್ಕಾರಿ ಶಾಲೆಗಳ ಸಂಖ್ಯೆ ೪೯,೯೫೫ ರಿಂದ ೪೮,೧೮೮ ಇಳಿದಿದೆ. ಅಂದರೆ, ೧೭೬೭ ಸರ್ಕಾರಿ ಶಾಲೆಗಳು ಮುಚ್ಚಿವೆ. ಇದೆಲ್ಲದರ ಒಟ್ಟು ಗಾಢ ಪರಿಣಾಮವೆಂದರೆ, ಶಿಕ್ಷಣದ ಒಳಗೆ ಮತ್ತು ಹೊರಗೆ ತೀವ್ರತರದ ಶಿಕ್ಷಣದ ಖಾಸಗೀಕರಣ. ಶಿಕ್ಷಣದಲ್ಲಿ ಖಾಸಗಿವಲಯದ ಭಾಗವಹಿಸುವಿಕೆ ಸಂಬಂಧಿಸಿದಂತೆ ಉದ್ದೇಶ, ವ್ಯಾಪ್ತಿ, ಖಾಸಗಿ ಪಾಲುದಾರರ ಬಗೆ, ಪಾಲ್ಗೊಳ್ಳುವಿಕೆಯ ವಿಧಾನ ಮತ್ತು ಅದರಿಂದಾಗ ಬಹುದಾದ ಪರಿಣಾಮ ಕುರಿತಂತೆ ಚರ್ಚಿಸಬೇಕಾದ ಅನಿವಾರ್ಯತೆ ಎದುರಾಗಿದೆ.

ಈ ಎಲ್ಲ ಬದಲಾವಣೆಗಳಿಗೆ ಪ್ರತಿಕ್ರಿಯಿಸುವ ಭಾಗವಾಗಿ, ಅದರಲ್ಲೂ ವಿಶೇಷವಾಗಿ ಖಾಸಗಿ ವಲಯದ ಭಾಗವಹಿಸುವಿಕೆ ಹೆಚ್ಚುತ್ತಿರುವ ಹಿನ್ನೆಲೆಯಲ್ಲಿ ಹಾಗೂ ದಿನದಿಂದ ದಿನಕ್ಕೆ ಸರ್ಕಾರದ ಪಾತ್ರ ಕ್ಷೀಣಿಸುತ್ತಿರುವ ಸಂದರ್ಭದಲ್ಲಿ, ಶಿಕ್ಷಣದ ಹಕ್ಕಿನ ಅನುಷ್ಠಾನ ಮತ್ತು ಸುಸ್ಥಿರ ಅಭಿವೃದ್ಧಿ ಗುರಿಗಳ ಜಾರಿಯಲ್ಲಿ ಸರ್ಕಾರದ ಪಾತ್ರ ಏನೆಂಬುದನ್ನು ಪರಾಮರ್ಶಿಸಿ ಸೂಕ್ತ ನಿರ್ದೇಶನ ನೀಡುವ ಅವಶ್ಯಕತೆ ಎದುರಾಗಿದೆ.

ಈ ಹಿನ್ನೆಲೆಯಲ್ಲಿ, ವಿಶ್ವಸಂಸ್ಥೆಯಲ್ಲಿ ಶಿಕ್ಷಣ ಹಕ್ಕಿನ ವಿಶೇಷ ವರದಿಗಾರರು ಶಿಕ್ಷಣದ ಹಕ್ಕನ್ನು ಒಂದು ಮಾನವ ಹಕ್ಕನ್ನಾಗಿ ಜಾರಿಗೊಳಿಸುವ ಸಂದರ್ಭದಲ್ಲಿ ಸರ್ಕಾರ ಶಿಕ್ಷಣ ನೀಡುವ ಜವಾಬ್ದಾರಿಯನ್ನು ಒಂದು ಆದ್ಯ ಕರ್ತವ್ಯವಾಗಿ ನಿರ್ವಹಿಸಬೇಕಲ್ಲದೆ ಖಾಸಗಿ ವಲಯವನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಅವಶ್ಯಕ ಕ್ರಮಗಳನ್ನು ಕೈಗೊಳ್ಳಬೇಕಿದೆ. ಈ ನಿಟ್ಟಿನಲ್ಲಿ ಶಿಕ್ಷಣವನ್ನು ಒಂದು ಮಾನವ ಹಕ್ಕನ್ನಾಗಿ ಗುರುತಿಸಿ ಅದನ್ನು ಸಾಕಾರಗೊಳಿಸಲು ರಾಜ್ಯ ಕೈಗೊಳ್ಳಬೇಕಾದ ಕ್ರಮಗಳು ಮತ್ತು ಖಾಸಗಿವಲಯವನ್ನು ನಿಯಂತ್ರಿಸುವ ನಿಟ್ಟಿನಲ್ಲಿ ಕಳೆದ ೩ ವರ್ಷ ಗಳಿಂದ ನಡೆದ ಭಾಗವಹಿಸುವಾತ್ಮಕ ಚರ್ಚೆಯ ವಿಧಾನದಲ್ಲಿ ಅಬಿದ್‌ಜನ್ ಮೂಲತತ್ವಗಳನ್ನು ರೂಪಿಸಿದ್ದು, ಈ ಮೂಲ ತತ್ವಗಳನ್ನು ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿಯು ಜುಲೈ ೯, ೨೦೧೯ರ ಸಭೆಯಲ್ಲಿ ಸರ್ವಾನುಮತದಿಂದ ಅಂಗೀಕರಿಸಿದೆ. ಈ ಮಹತ್ವದ ಬೆಳವಣಿಗೆಯ ಹಿನ್ನೆಲೆಯಲ್ಲಿ, ಸರ್ಕಾರಗಳು ಮೂಲಭೂತ ಮಾನವ ಹಕ್ಕಿನ ಭಾಗವಾಗಿ ಶಿಕ್ಷಣದ ಹಕ್ಕನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಬೇಕಿದೆ. ಭಾರತ ಇದಕ್ಕೆ ಹೊರತಲ್ಲ. ಈ ಎಲ್ಲಾ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಈ ಅಬಿದ್‌ಜನ್ ಮೂಲತತ್ವಗಳನ್ನು ಅರಿತುಕೊಳ್ಳಬೇಕಿದೆ.

ಅಬಿದ್‌ಜನ್ ಮೂಲತತ್ವಗಳ ಮೂಲ ಉದ್ದೇಶ ಶಿಕ್ಷಣದಲ್ಲಿ ಖಾಸಗಿ ಭಾಗೀದಾರರ ಪಾಲ್ಗೊಳ್ಳುವಿಕೆಯನ್ನು ಶಿಕ್ಷಣದ ಮೂಲಭೂತ ಹಕ್ಕಿಗೆ ಧಕ್ಕೆಯಾಗದ ರೀತಿಯಲ್ಲಿ ನಿಯಂತ್ರಿಸಲು ಕಟ್ಟುನಿಟ್ಟಿನ ಕ್ರಮಕೈಗೊಳ್ಳುವುದಾಗಿದೆ. ಇದರಲ್ಲಿ ೯೭ ಮಾರ್ಗಸೂಚಿ ತತ್ವಗಳಿದ್ದು ಅವುಗಳನ್ನು ಹತ್ತು ಪ್ರಧಾನ ಅಂಶಗಳ ಆಧಾರದಲ್ಲಿ ರೂಪಿಸಲಾಗಿದೆ.

ಮೊದಲನೆಯದಾಗಿ, ರಾಜ್ಯವು ಪ್ರತಿಯೊಬ್ಬರ ಶಿಕ್ಷಣದ ಹಕ್ಕನ್ನು ಗುರುತಿಸಿ – ಗೌರವಿಸಿ ತನ್ನ ವ್ಯಾಪ್ತಿಯಲ್ಲಿ ಸಮಾನ ಅವಕಾಶ ಹಾಗೂ ತಾರತಮ್ಯವಿಲ್ಲದಂತೆ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಮೂಲಕ ಸಾಕಾರಗೊಳಿಸಲು ಕ್ರಮಕೈಗೊಳ್ಳುವುದು.

ಎರಡನೆಯದಾಗಿ, ರಾಜ್ಯವು ತನ್ನ ಭೌಗೋಳಿಕ ವ್ಯಾಪ್ತಿಯಲ್ಲಿ ಅತ್ಯುತ್ತಮ ಗುಣಮಟ್ಟದ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಸಾರ್ವಜನಿಕ ವ್ಯವಸ್ಥೆಯ ಮೂಲಕ ತ್ವರಿತವಾಗಿ ಮತ್ತು ಪರಿಣಾಮಕಾರಿಯಾಗಿ ಒದಗಿಸುವುದು. ಇದಕ್ಕೆ ತನ್ನಲ್ಲಿರುವ ಗರಿಷ್ಠ ಸಂಪನ್ಮೂಲಗಳನ್ನು ಒದಗಿಸುವುದು.

ಮೂರನೆಯದಾಗಿ, ರಾಜ್ಯವು ತಂದೆ–ತಾಯಿ ಅಥವಾ ಇತರೆ ಕಾನೂನುಬದ್ಧ ವಾರಸುದಾರರು ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಸರ್ಕಾರಿ ಶಿಕ್ಷಣ ಸಂಸ್ಥೆಗಳು ಇದ್ದಾಗಲೂ ಇತರೆ ಖಾಸಗಿ ಸಂಸ್ಥೆಗಳನ್ನು ಆಯ್ಕೆಮಾಡಿಕೊಳ್ಳಲು ಬಯಸಿದಲ್ಲಿ ಅವರ ಸ್ವಾತಂತ್ರ್ಯವನ್ನು ಗೌರವಿಸಬೇಕು. ಆದರೆ, ಅಂತಹ ಶಿಕ್ಷಣ ಸಂಸ್ಥೆಗಳು ಕಡ್ಡಾಯವಾಗಿ ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಚೌಕಟ್ಟಿನ ಭಾಗವಾಗಿ ರೂಪಿಸಿರುವ ನಿಯಮ ಮತ್ತು ಪ್ರಮಾಣಕಗಳಿಗೆ ಅನುಗುಣವಾಗಿ ಶಿಕ್ಷಣ ಸಂಸ್ಥೆಗಳನ್ನು ನಡೆಸಬೇಕು.

ನಾಲ್ಕನೆಯದಾಗಿ, ಎಲ್ಲೆಲ್ಲಿ ಶಿಕ್ಷಣವನ್ನು ಒದಗಿಸಲು ಖಾಸಗಿ ವಲಯವು ತೊಡಗಿಸಿಕೊಂಡಿದೆಯೋ ಅಂತಹ ಕಡೆಗಳಲ್ಲಿ ರಾಜ್ಯವು ಶಿಕ್ಷಣದ ಹಕ್ಕನ್ನು ಸಾಕಾರಗೊಳಿಸಲು ಪರಿಣಾಮಕಾರಿ ಹಾಗೂ ಕಠಿಣ ಕ್ರಮಗಳನ್ನು ಕೈಗೊಳ್ಳುವುದು ಮತ್ತು ಅಗತ್ಯ ನಿಯಂತ್ರಣ ಕ್ರಮಗಳನ್ನು ರೂಪಿಸಿ ಜಾರಿಗೊಳಿಸುವುದು.

ಐದನೆಯದಾಗಿ, ರಾಜ್ಯವು ಉಚಿತ, ಕಡ್ಡಾಯ ಹಾಗೂ ಗುಣಾತ್ಮಕ ಶಿಕ್ಷಣವನ್ನು ಸಾರ್ವಜನಿಕ ವ್ಯವಸ್ಥೆಯ ಮೂಲಕ ಒದಗಿಸಲು ಆದ್ಯತೆಯ ಮೇಲೆ ಕಾರ್ಯಕ್ರಮ ರೂಪಿಸುವುದು. ಅಗತ್ಯವಿದ್ದಲ್ಲಿ ಮಾತ್ರ ಅರ್ಹ ಖಾಸಗಿ ಸಂಸ್ಥೆಗಳಿಗೆ ತೆರಿಗೆ ವಿನಾಯಿತಿ, ರಿಯಾಯಿತಿ ದರದಲ್ಲಿ ಭೂಮಿ, ಅಂತರರಾಷ್ಟ್ರೀಯ ಸಹಾಯ ಮತ್ತು ನೆರವು ಅಥವಾ ಇತರೆ ಪರೋಕ್ಷ ಬೆಂಬಲದ ಮೂಲಕ ಆರ್ಥಿಕ ಸಹಾಯ ಒದಗಿಸುವುದು. ಈ ಸಂಸ್ಥೆಗಳು ಕಡ್ಡಾಯವಾಗಿ ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಕಾನೂನು ಮತ್ತು ಪ್ರಮಾಣಕಗಳನ್ನು ಕಡ್ಡಾಯವಾಗಿ ಪಾಲಿಸಬೇಕು.

ಆರನೆಯದಾಗಿ, ಎಲ್ಲೆಲ್ಲಿ ಅಂತರರಾಷ್ಟ್ರೀಯ ಸಹಾಯ ಮತ್ತು ಸಹಕಾರವನ್ನು ನೀಡಲಾಗಿದೆಯೋ ಅಲ್ಲಿ ಉಚಿತ, ಕಡ್ಡಾಯ, ಗುಣಾತ್ಮಕ ಶಿಕ್ಷಣವನ್ನು ಒದಗಿಸಬಲ್ಲ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಕಟ್ಟುವ ಕ್ರಮಗಳನ್ನು ಪುನರುಚ್ಚರಿಸಬೇಕು. ಅಂತರರಾಷ್ಟ್ರೀಯ ಮಾನವ ಹಕ್ಕುಗಳ ಮೂಲತತ್ವದೊಂದಿಗೆ ಸಾಮರಸ್ಯವಿಲ್ಲದ ಸಂದರ್ಭಗಳಲ್ಲಿ ಖಾಸಗಿ ವಲಯಗಳಿಗೆ ಪ್ರತ್ಯಕ್ಷವಾಗಲಿ ಅಥವಾ ಪರೋಕ್ಷವಾಗಲಿ ಯಾವುದೇ ನೆರವನ್ನು ಒದಗಿಸಬಾರದು.

ಏಳನೆಯದಾಗಿ, ರಾಜ್ಯವು ಶಿಕ್ಷಣದಲ್ಲಿ ಖಾಸಗಿ ವಲಯದ ಸಹ – ಭಾಗೀದಾರರು ತೊಡಗಿಸಿಕೊಂಡಿರುವ ಜಾಗಗಳಲ್ಲಿ ಖಾಸಗಿಯವರ ಉತ್ತರದಾಯಿತ್ವ ಹಾಗೂ ಪಾರದರ್ಶಕತೆಯನ್ನು ಖಾತರಿಗೊಳಿಸುವ ಸಮರ್ಪಕ ಆಡಳಿತ ಯಂತ್ರವನ್ನು ರೂಪಿಸಬೇಕು. ಈ ಆಡಳಿತ ಯಂತ್ರ ಖಾಸಗಿ ಭಾಗೀದಾರರು ಶಿಕ್ಷಣದ ಹಕ್ಕನ್ನು ಗೌರವಿಸಿ, ರಕ್ಷಿಸಿ ಮತ್ತು ಸಾಕಾರಗೊಳಿಸುವ ರೀತಿಯಲ್ಲಿ ಮೇಲುಸ್ತುವಾರಿ ಹಾಗೂ ನಿಗಾ ವಹಿಸುವ ಕರ್ತವ್ಯವನ್ನು ಹೊಂದಿರುತ್ತಾರೆ.

ಎಂಟನೆಯದಾಗಿ, ಶಿಕ್ಷಣದ ಹಕ್ಕನ್ನು ಸಾಕಾರಗೊಳಿಸಲು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ಕಾಲಕಾಲಕ್ಕೆ ಸಂಬಂಧಿಸಿದ ಸಾರ್ವಜನಿಕ ನೀತಿ – ನಿಯಮ ಗಳನ್ನು ಕಡ್ಡಾಯವಾಗಿ ಅನುಸರಿಸುವಂತೆ ರಾಜ್ಯವು ನಿರಂತರವಾಗಿ ಮೇಲುಸ್ತುವಾರಿ ಕ್ರಮಗಳನ್ನು ಕೈಗೊಳ್ಳುವುದು.

ಒಂಭತ್ತನೆಯದಾಗಿ, ಶಿಕ್ಷಣದ ಹಕ್ಕನ್ನು ಸಾಕಾರಗೊಳಿಸಲು ತೊಡಗಿಸಿ ಕೊಂಡಿರುವ ಖಾಸಗಿ ವಲಯದ ಭಾಗೀದಾರರು ಶಿಕ್ಷಣದ ಹಕ್ಕನ್ನು ಉಲ್ಲಂಘಿಸಿ ಮಾನವ ಹಕ್ಕುಗಳನ್ನು ದುರುಪಯೋಗಪಡಿಸಿಕೊಂಡರೆ ಅವುಗಳ ನಿವಾಹರಣೆಗಾಗಿ ಸೂಕ್ತ ಪರಿಣಾಮಕಾರಿಯಾದ ಕುಂದುಕೊರತೆ ನಿವಾರಣಾ ವ್ಯವಸ್ಥೆಯನ್ನು ಖಾತರಿಗೊಳಿಸಬೇಕು.

ಕೊನೆಯದಾಗಿ, ಮೇಲಿನ ಈ ಎಲ್ಲಾ ಮಾರ್ಗಸೂಚಿ ತತ್ವಗಳನ್ನು ಪರಿಣಾಮಕಾರಿ ಯಾಗಿ ಜಾರಿಗೊಳಿಸಲು ಎಲ್ಲಾ ಸರ್ಕಾರಗಳು ಸೂಕ್ತವಾದ ಕಾನೂನು ಮತ್ತು ಆರ್ಥಿಕ ಸುಧಾರಣೆಗಳನ್ನು ಅಳವಡಿಸಿಕೊಂಡು ಮಾನವ ಹಕ್ಕುಗಳ ಭಾಗ ವಾಗಿರುವ ಶಿಕ್ಷಣದ ಹಕ್ಕನ್ನು ಜಾರಿಗೊಳಿಸುವ ತನ್ನ ಕರ್ತವ್ಯವನ್ನು ನಿಭಾಯಿಸಬೇಕು.

ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಮಂಡಳಿಯ ಈ ನಿರ್ಣಯ ಶಿಕ್ಷಣದ ಮೂಲಭೂತ ಹಕ್ಕನ್ನು ಗೌರವಿಸುವ ನಿಟ್ಟಿನಲ್ಲಿ ಅತ್ಯಂತ ಮಹತ್ವದ ಹೆಜ್ಜೆಯೆಂದು ಪರಿಗಣಿಸಲಾಗಿದೆ. ಈ ತತ್ವಗಳನ್ನು ಸರ್ಕಾರಗಳು ಗೌರವಿಸಿ ತಮ್ಮ ಕಾನೂನು, ನೀತಿ – ಕಾರ್ಯಕ್ರಮಗಳಲ್ಲಿ ಅಳವಡಿಸಿಕೊಳ್ಳುವುದು ತುರ್ತು ಅಗತ್ಯವಾಗಿದೆ.

**ಡಾ॥ ನಿರಂಜನಾರಾಧ್ಯ ವಿ. ಪಿ.**
ಸೀನಿಯರ್ ಫೆಲೋ ಹಾಗೂ ಮುಖ್ಯಸ್ಥರು, ಸಮಾನ ಗುಣಮಟ್ಟದ ಶಾಲಾ ಶಿಕ್ಷಣದ ಸಾರ್ವತ್ರೀಕರಣ ಕಾರ್ಯಕ್ರಮ, ಮಗು ಮತ್ತು ಕಾನೂನು ಕೇಂದ್ರ, ಭಾರತ ವಿಶ್ವವಿದ್ಯಾಲಯದ ರಾಷ್ಟ್ರೀಯ ಕಾನೂನು ಶಾಲೆ, ಬೆಂಗಳೂರು
email : aradhyaniranjan@hotmail.com

# ಆವರ್ತಕ ಕೋಷ್ಟಕ



**ಮೆಂಡೆಲ್ಯೇವ್‌ನಿಂದ ಪ್ರಣೀತವಾದದ್ದು ಎಂದು ಹೇಳಲಾಗುವ ಮತ್ತು ಈಗಲೂ ಚಾಲ್ತಿಯಲ್ಲಿರುವ 'ಆವರ್ತಕ ಕೋಷ್ಟಕ'ಕ್ಕೆ ಈ ವರ್ಷ ನೂರೈವತ್ತನೇ ಹುಟ್ಟುಹಬ್ಬ. ಈ ನೆಪದಲ್ಲಿ ಈ ಕೋಷ್ಟಕಕ್ಕೆ ಸಂಬಂಧಪಟ್ಟ ಲೇಖನಗಳನ್ನು ಓದುತ್ತಿದ್ದಾಗ ನೆನಪಿಗೆ ಬಂದದ್ದು ಇಟಲಿಯ ಲೇಖಕ ಪ್ರಿಮೋ ಲೆವಿ. ಅವರು 'ಆವರ್ತಕ ಕೋಷ್ಟಕ' (Periodic Table) ಎಂಬ ಪುಸ್ತಕವನ್ನು ಬರೆದಿದ್ದಾರೆ.**



ಆಸ್ವಿಜ್‌ನ ನಾಝೀ ಕಾನ್ಸಂಟ್ರೇಷನ್ ಕ್ಯಾಂಪ್‌ನಲ್ಲಿದ್ದು ಜೀವಂತವಾಗಿ ಹೊರಬಂದು ಆ ಅನುಭವದ ಬಗ್ಗೆ ಅನನ್ಯವಾದ ಮೂರು ಪುಸ್ತಕಗಳನ್ನು ಬರೆದಿರುವ ಇಟಲಿಯ ಶ್ರೇಷ್ಠ ಲೇಖಕ ಪ್ರಿಮೋ ಲೆವಿ ವೃತ್ತಿಯಿಂದ ಒಬ್ಬ ರಸಾಯನಶಾಸ್ತ್ರಜ್ಞ. ಪಿಎಚ್‌ಡಿ ಪದವಿ ಪಡೆದು ಪೈಂಟ್ ಕಂಪನಿಯೊಂದರಲ್ಲಿ ತಂತ್ರಜ್ಞನಾಗಿ ಕೆಲಸ ಮಾಡುತ್ತಿದ್ದ ಲೆವಿ ಬರೆದಿರುವ ಪುಸ್ತಕ 'ಆವರ್ತಕ ಕೋಷ್ಟಕ', ವಿಜ್ಞಾನ ಸಂಬಂಧೀ ಪುಸ್ತಕಗಳಲ್ಲೇ ಅದ್ವಿತೀಯವಾದದ್ದೆಂದು ಹೆಸರಾಗಿದೆ. ಈ ಪುಸ್ತಕವನ್ನು ವಿಜ್ಞಾನದ ಪುಸ್ತಕವೆಂದು ಕರೆಯಬೇಕೇ? ಒಬ್ಬ ಸೂಕ್ಷ್ಮ ಮನಸ್ಸಿನ ವಿಜ್ಞಾನಿ, ತನ್ನ ಸುತ್ತಮುತ್ತಲಿನ ಪ್ರಪಂಚವನ್ನು ಕಾಣುತ್ತಿದ್ದ ರೀತಿಯನ್ನು ಹಿಡಿದಿಟ್ಟ ಲಹರಿಯೆಂದು ಕರೆಯಬೇಕೇ? ತತ್ವಶಾಸ್ತ್ರೀಯ ಗುಣಗಳುಳ್ಳ ಪುಸ್ತಕವೆನ್ನಬೇಕೇ ಎಂಬುದರ ಬಗ್ಗೆ ಓದುಗರಲ್ಲಿ ಒಮ್ಮತ ಮೂಡಿಲ್ಲ. ಆದರೆ ಅವರೆಲ್ಲರೂ ಒಪ್ಪುವ ಮಾತೆಂದರೆ ಇದೊಂದು ಒಳ್ಳೆಯ ಪುಸ್ತಕ ಎನ್ನುವುದು. ಅಧಿಕೃತವಲ್ಲದ ಒಂದು ಅಭಿಪ್ರಾಯ ಸಂಗ್ರಹಣೆಯ ಪ್ರಕಾರ ಇದು ಈ ಶತಮಾನದ ಶ್ರೇಷ್ಠ ವಿಜ್ಞಾನದ ಪುಸ್ತಕ. ಆರ್ಗನ್‌ನಿಂದ ಪ್ರಾರಂಭವಾಗಿ, ಹೈಡ್ರೋಜನ್ ಮುಂತಾದ ಹಲವಾರು ಮೂಲಧಾತುಗಳ ಹೆಸರುಗಳನ್ನು ಅಧ್ಯಾಯಗಳ ಶೀರ್ಷಿಕೆಗಳನ್ನಾಗಿ ಹೊಂದಿರುವ ಈ ಪುಸ್ತಕವನ್ನು ಓದುಗರು ಮತ್ತೆ ಮತ್ತೆ ಓದುತ್ತ ತಮ್ಮ ಅರಿವನ್ನು ಹಿಗ್ಗಿಸುತ್ತಿದ್ದಾರೆ.

ಈ ಪುಸ್ತಕದ ಕೆಲವು ಭಾಗ ಲೆವಿ ತನ್ನ ಜೀವನವನ್ನು ದೂರ ನಿಂತು ವಿಶ್ಲೇಷಿಸುವ ರೀತಿ ಇವೆ. ಇನ್ನು ಕೆಲವು ಸೃಜನಶೀಲತೆಯನ್ನು ಪ್ರತಿ ವಾಕ್ಯದಲ್ಲೂ ಹೊಮ್ಮಿಸಿ ಭಾವಗೀತೆಯಂತಹ ಕತೆಯಂತಿದೆ. (ವಿಜ್ಞಾನದ ಬರಹ ಹೀಗಿರಬಾರದೆಂದು ಸರಿಸುಮಾರು ಎಲ್ಲರೂ ಒಪ್ಪುತ್ತಾರೆ.) ಇನ್ನು ಕೆಲವು ಅಧ್ಯಾಯಗಳು ಕೈಗಾರಿಕೆಯಲ್ಲಿ ರಸಾಯನಶಾಸ್ತ್ರವನ್ನು ಉಪಯೋಗಿಸುವ ರೀತಿಯನ್ನು ಮತ್ತು ಒಂದು ಸಂಶೋಧನೆ ತಂತ್ರಜ್ಞಾನವಾಗಿ ಹೊರಹೊಮ್ಮುವುದು ಹೇಗೆ ಎಂಬ 'ಕೈಗಾರಿಕಾ ವಿಜ್ಞಾನ'ದ ಕೈಪಿಡಿಯ ಹಾಗೆಯೂ ತೋರುತ್ತದೆ. ಇನ್ನೂ ಕೆಲವು ಭಾಗಗಳಲ್ಲಿ ಪದಗಳ ವ್ಯುತ್ಪತ್ತಿಯ ಬಗ್ಗೆ ಮತ್ತು ನಾವು ದಿನನಿತ್ಯ ಉಪಯೋಗಿಸುವ ಪದಗಳು ಮೂಲಧಾತುಗಳ ಲಕ್ಷಣಗಳಿಗೆ ಹೇಗೆ ಹೊಂದುತ್ತವೆ ಎಂದು ಹೇಳುವಾಗ ವಿಜ್ಞಾನ, ತತ್ವಶಾಸ್ತ್ರದ ಚರ್ಯೆಯನ್ನು ಪಡೆಯುತ್ತದೆ. ಇಲ್ಲಿ ರಸಾಯನಶಾಸ್ತ್ರ ಮುಖ್ಯ; ಆದರೆ ಹಲವು ಬಾರಿ ಪ್ರಾಸಂಗಿಕ ಮಾತ್ರ. ಇಡೀ ಪುಸ್ತಕ ಇಂಗ್ಲಿಷ್ ಭಾಷೆಯ ಕೆಮಿಸ್ಟ್ರಿ ಮತ್ತು ವಿಜ್ಞಾನದ ಕೆಮಿಸ್ಟ್ರಿಯನ್ನು ಅನನ್ಯವಾಗಿ ದುಡಿಸಿಕೊಂಡಿದೆ. ತುಂಡು ತುಂಡು ವಾಕ್ಯಗಳಿರುವ ಈ ಗದ್ಯ ಓದುಗನನ್ನು ಅನೇಕ ಬಾರಿ ಅಲ್ಲೇ ನಿಂತು ಧೇನಿಸುವ ಹಾಗೆಯೂ ಮಾಡುತ್ತದೆ. ನಾವು ಉಸಿರಾಡಿದಾಗ, ನಾವು ಮುಟ್ಟಿದಾಗ, ನಾವು ಪ್ರತಿಕ್ರಿಯಿಸಿದಾಗ ಮತ್ತು ನಾವು ಇನ್ನೊಬ್ಬರೊಡನೆ ವ್ಯವಹರಿಸುವಾಗ ರಸಾಯನ ಕ್ರಿಯೆ ನಡೆಯುತ್ತದೆ ಎನ್ನುವುದನ್ನು ಪಿಸುಮಾತಿನಲ್ಲಿ ತೋರಿಸುತ್ತದೆ.

ಶುದ್ಧ ಧಾತುವಿನಲ್ಲಿ ಬೆರಕೆಯಾದ ಇನ್ನೊಂದು ಧಾತುವಿನ ಪ್ರಮಾಣ, ಆ ಮಿಶ್ರಣವನ್ನು ಏನೆಲ್ಲ ರೀತಿಯಿಂದ ಪರಿವರ್ತನಗೊಳಿಸುವುದೆಂಬುದನ್ನು ವಿವರಿಸುವಾಗ, ನಮ್ಮೊಳಗಿನ ಅಶುದ್ಧತೆಯನ್ನು ಅವರು ಹೇಳಿ, ಒಂದೊಂದು ಸಲ ಸಣ್ಣ ಪ್ರಮಾಣದ ಅಶುದ್ಧತೆ ದೊಡ್ಡ ಪರಿಣಾಮ ಉಂಟು ಮಾಡುವುದೆಂದು ಹೇಳುತ್ತಾರೆ. ಈ ಪ್ರಮಾಣವನ್ನು ಅರಿಯುವುದೇ ಒಳ್ಳೆಯ ರಸಾಯನಶಾಸ್ತ್ರಜ್ಞನನ್ನು ಮಾಡುತ್ತದೆ ಎಂದು ಹೇಳಿ, 'ಇಂಥದು ವಿಜ್ಞಾನಕ್ಕೆ ಮಾತ್ರ ಸೀಮಿತವಲ್ಲ' ಎಂಬ ಸಣ್ಣ ಸಾಲನ್ನು ಸೇರಿಸಿಬಿಡುತ್ತಾರೆ. ಈ ಸಣ್ಣ ಸಾಲು ಮಾಡುವ ಪರಿಣಾಮ ಮಾತ್ರ ಅಗಾಧ.

**ಹೈಡ್ರೋಜನ್**

ಆಗ ಜನವರಿ. ಊಟವಾದ ತಕ್ಷಣ ಎನ್ರಿಕೋ ಮನೆಗೆ ಬಂದ. ಅವನ ಅಣ್ಣ ಊರಿಗೆ ಹೋಗಿದ್ದರಿಂದ ಪ್ರಯೋಗಾಲಯದ ಬೀಗದ ಕೈಗಳನ್ನು ಎನ್ರಿಕೋ ಹತ್ತಿರ ಕೊಟ್ಟಿದ್ದ. ನಾನೂ ಬಟ್ಟೆ ತೊಟ್ಟು ಅವನ ಜೊತೆ ಹೊರಟೆ.

ಜೊತೆಗೆ ನಡೆಯುತ್ತಿರುವಾಗ ನನಗೆ ತಿಳಿದಿದ್ದೇನೆಂದರೆ, ಎನ್ರಿಕೋ ಅಣ್ಣ ಬೀಗದ ಕೈಗಳನ್ನೇನೂ ಇವನಿಗೆ ಕೊಟ್ಟಿರಲಿಲ್ಲ ಮತ್ತು ಅವನು ಯಾವ ಊರಿಗೂ ಹೋಗಿರಲಿಲ್ಲ ಎನ್ನುವುದು. ಯಾರಾದರೂ ಕೇಳಿದರೆ ನಾವು ತಕ್ಷಣ ಯಾವುದಾದರೂ ಕಾರಣ ಕೊಟ್ಟು ಉತ್ತರಿಸುವುದಿಲ್ಲವೇ? ಅಂತಹ 'ಕಾರಣ'

ಮೂಲ : ಪ್ರಿಮೋ ಲೆವಿ

ಅನುವಾದ : **ಶಶಿಧರ ಡೋಂಗ್ರೆ**

## ಓದುಗರಲ್ಲಿ ಮನವಿ

ಓದುಗರ ಮತ್ತು ಜಾಹೀರಾತುದಾರರ ಪ್ರೋತ್ಸಾಹದಿಂದಾಗಿ ಕಳೆದ ಇಪ್ಪತ್ತು ವರ್ಷಗಳಿಂದ 'ಹೊಸತು' ಪತ್ರಿಕೆ ನಿರಂತರವಾಗಿ ಪ್ರಕಟವಾಗುತ್ತಿದೆ. ಆದರೆ, ಇತ್ತೀಚಿನ ದಿನಗಳಲ್ಲಿ ಕಾಗದ, ಮುದ್ರಣ, ಕಛೇರಿ ನಿರ್ವಹಣೆ ಮುಂತಾದ ಖರ್ಚುಗಳು ವಿಪರೀತ ಹೆಚ್ಚಾಗಿರುವುದರಿಂದ 'ಹೊಸತು' ಬಿಡಿ ಪ್ರತಿಗಳ ಮತ್ತು ಚಂದಾ ದರಗಳನ್ನು ಹೆಚ್ಚಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಉಂಟಾಗಿದೆ.

**೨೦೨೦ ಜನವರಿ ೧ರಿಂದ ಅನ್ವಯಿಸುವಂತೆ ದರಗಳು ಈ ರೀತಿ ಹೆಚ್ಚಾಗಲಿವೆ:**

| | | |
|---|---|---|
| ಬಿಡಿ ಪ್ರತಿ (ವಾರ್ಷಿಕ ವಿಶೇಷಾಂಕ ಹೊರತುಪಡಿಸಿ) | ... | ರೂ. ೩೦/- |
| ಒಂದು ವರ್ಷದ ಚಂದಾ | ... | ರೂ. ೩೫೦/- |
| ಮೂರು ವರ್ಷಗಳ ಚಂದಾ | ... | ರೂ. ೭೦೦/- |

– ಪ್ರಕಾಶಕ

ಅದು. ಕೇಳಿಸಿಕೊಂಡು ನಾನೂ ಹೂಂ ಎಂದಿದ್ದೆನಲ್ಲ? ಬೀಗದ ಕೈಗಳನ್ನು ಯಾವತ್ತೂ ಅಡಗಿಸಿಡುತ್ತಿದ್ದ ಅವನ ಅಣ್ಣ ಅಂದು ಹಾಗೆಯೇ ಬಿಟ್ಟುಹೋಗಿದ್ದ. ಅದೂ ಅಲ್ಲದೆ, ನಿತ್ಯವೂ ಹೇಳುತ್ತಿದ್ದ ಗಿಳಿ ಪಾಠ; ಬೀಗದ ಕೈಗಳನ್ನು ಕದ್ದರೆ ಸಿಗುವ ಶಿಕ್ಷೆ ಮುಂತಾದುವನ್ನು ಕೂಡ ಇಂದು ಹೇಳಿರಲಿಲ್ಲ. ಒಟ್ಟಾರೆಯಾಗಿ ಹೇಳುವುದಾದರೆ, ಇಂತಹ ಅವಕಾಶಕ್ಕೆ ತಿಂಗಳುಗಟ್ಟಲೆ ಕಾದಿದ್ದೆವು ಮತ್ತು ಅಂತಹ ಕ್ಷಣವೊಂದು ಎನ್ರಿಕೋ ಮುಂದಿತ್ತು. ಬೀಗದ ಕೈಗಳು ಬಾ ಎಂದು ಕರೆಯುತ್ತಿದ್ದವು. ನಾನು ಮತ್ತು ಎನ್ರಿಕೋ ಇಂತಹ ಅವಕಾಶವನ್ನು ಉಪಯೋಗಿಸದೇ ಬಿಡುವುದಕ್ಕೆ ತಯಾರಿರಲಿಲ್ಲ.

ನಮಗಿಬ್ಬರಿಗೂ ಆಗ ಹದಿನಾರು ಮತ್ತು ನನಗೆ ಎನ್ರಿಕೋ ಬಗ್ಗೆ ಎಂಥದೋ ಆಕರ್ಷಣೆ. ಅವನೇನೂ ಬುದ್ಧಿವಂತ ಹುಡುಗನಾಗಿರಲಿಲ್ಲ; ಚಟುವಟಿಕೆಯಿಂದ ಕೂಡಿದವನೂ ಆಗಿರಲಿಲ್ಲ. ಆದರೆ ಬೇರೆ ಹುಡುಗರಿಂದ ಮಾಡಲಾಗದಂಥ ಎಷ್ಟೋ ಕೆಲಸಗಳನ್ನು ಅವನು ಮಾಡುತ್ತಿದ್ದ. ತನಗೆ ಬೇಕಾದ್ದನ್ನು ಶಾಂತವಾಗಿ, ಆದರೆ ಹಠ ಹಿಡಿದು ಸಾಧಿಸುವ ಅಪೂರ್ವ ಧೈರ್ಯ ಅವನಲ್ಲಿತ್ತು. ತನ್ನ ಭವಿಷ್ಯವನ್ನು ತಾನೇ ರೂಪಿಸಿಕೊಳ್ಳಬಲ್ಲೆ ಎನ್ನುವ ವಿಶ್ವಾಸ. ನಾವು ಆಗಾಗ ಆಡುತ್ತಿದ್ದ ಆದರ್ಶದ ಮಾತುಗಳಾಗಲೀ, ಡಾರ್ವಿನ್ ತತ್ವದ ಚರ್ಚೆಗಳಲ್ಲಾಗಲೀ, ಬರ್ಗ್‌ಸನ್ ಅವರ ಸಿದ್ಧಾಂತದ ಮಾತುಗಳಲ್ಲಾಗಲೀ ಅವನಿಗೆ ಆಸಕ್ತಿಯೇ ಇರಲಿಲ್ಲ. ತಿರಸ್ಕಾರ ತೋರಿಸದೆಯೇ ಇವೆಲ್ಲವುಗಳಿಂದ ದೂರ ಇರುತ್ತಿದ್ದ. ಹೀಗೆಲ್ಲಾ ಹೇಳಿದರೆ ಅವನು ಅಸಭ್ಯ ಎಂದೆನಿಸಬಹುದು. ಆದರೆ ಅವನು ಅತ್ಯಂತ ಸಂಭಾವಿತನಾಗಿದ್ದ. ತನಗೆ ಆಟದಲ್ಲಿ ಒಳ್ಳೆಯ ಕ್ಷಮತೆ ಇರುವ ಬಗ್ಗೆಯೋ, ತನ್ನ ಪುರುಷತ್ವದ ಬಗ್ಗೆಯೋ ಎಂದಿಗೂ ಕೊಚ್ಚಿಕೊಳ್ಳುತ್ತಿರಲಿಲ್ಲ ಮತ್ತು ಯಾವತ್ತಿಗೂ ಸುಳ್ಳು ಹೇಳಿದವನಲ್ಲ. ಅವನಿಗೆ ತನ್ನ ಮಿತಿಗಳ ಬಗ್ಗೆ ಸಂಪೂರ್ಣ ಅರಿವಿತ್ತು. ನಾವು ಕೆಲವೊಮ್ಮೆ ಹೇಳುತ್ತಿದ್ದುದು ಉಂಟು – 'ಏನು ಗೊತ್ತಾ? ನಾನು ಒಬ್ಬ ಮೂರ್ಖ ಅನ್ನಿಸುತ್ತೆ.' (ಹಲವು ಬಾರಿ ಇದನ್ನು ಸುಮ್ಮನೆ, ಬೇರೆಯವರಿಗೆ ಸಮಾಧಾನ ತರಬಹುದು ಎಂದು ತೋರಿಕೆಗೆ ಹೇಳುತ್ತಿದ್ದೆವು). ಆದರೆ ಅವನು ಇಂಥ ಯಾವುದನ್ನೂ ಎಂದಿಗೂ ಮಾಡದವ.

ಅವನ ಕನಸುಗಳೂ ವಿಚಿತ್ರ. ಭಂಗನೆ ಹಾರುವಂಥವಲ್ಲ. ಮೆಲ್ಲಗೆ ಬಸವನಹುಳುವಿನ ತರಹ ತೆವಳುವಂತಹುದು. ಎಲ್ಲರಂತೆ ಅವನೂ ಕನಸು ಕಾಣುತ್ತಿದ್ದ. ಆದರೆ ಅವನ ಕನಸುಗಳೆಲ್ಲವನ್ನೂ ಸಾಕಾರಗೊಳಿಸಬಹುದಿತ್ತು. ಅವು ಪ್ರಪಂಚವನ್ನು ಬದಲಿಸಲು ಹೊರಟಿರಲಿಲ್ಲ; ಕಾಲ್ಪನಿಕವೋ ಅದ್ಭುತ ರಂಜಕವೋ ಆಗಿರಲಿಲ್ಲ. ಸ್ವಲ್ಪ ಮೊಂಡು ಎನಿಸಿದರೂ ಈ ನೆಲದ ಮೇಲೆ ಗಟ್ಟಿಯಾಗಿ ಊರಿದಂಥವು ಮತ್ತು ಸಾಕಾರಗೊಳಿಸಲು ಆಗುವಂಥವು. ನನ್ನನ್ನು ಸದಾಕಾಲವೂ ಬಾಧಿಸುತ್ತಿದ್ದ ಸ್ವರ್ಗ (ಓದಿನಲ್ಲಿ ಅಥವಾ ಆಟದಲ್ಲಿ ಯಶಸ್ಸು ಗಳಿಸುವುದು, ಹೊಸ ಸ್ನೇಹಿತರ ಸಂಬಂಧ, ಬೇಗ ಮರೆಯಾದರೂ ಮೋಹದ ಪಾಶಕ್ಕೆ ದೂಡುವ ಪ್ರೇಮದಲ್ಲಿ ಬೀಳುವದು) ಮತ್ತು ನರಕ (ಗ್ರೇಡ್ ಕಡಿಮೆ ಬರುವುದು, ನನ್ನ ಜೊತೆ ಸದಾ ಇರುತ್ತಿದ್ದ ಕೀಳರಿಮೆಯ ಭಾವನೆ ಹೆಚ್ಚಾಗುವ ಸಮಯ, ವಿಷಾದದ ಕ್ಷಣಗಳು)ಗಳ ನಡುವೆ ನನ್ನ ಮನಸ್ಸು ಹೊಯ್ದಾಡುತ್ತಿದ್ದರೆ ಅವನು ಮಾತ್ರ ಸ್ಥಿತಪ್ರಜ್ಞ ನಂತಿರುತ್ತಿದ್ದ. ಅವನ ಗುರಿಗಳನ್ನು ಯಾವಾಗಲೂ ತಲುಪಬಹುದಾಗಿತ್ತು. ಅವನಿಗೆ ಅಷ್ಟು ಇಷ್ಟವಿಲ್ಲದ ವಿಷಯಗಳನ್ನೂ ತುಂಬ ತಾಳ್ಮೆಯಿಂದ ಓದುತ್ತಿದ್ದ. ತನಗೆ ಮೈಕ್ರೋಸ್ಕೋಪು ಬೇಕು ಎಂದೆನಿಸಿದಾಗ ತನ್ನ ರೇಸಿಂಗ್ ಬೈಕ್ ಮಾರಿದ. ತಾನು ಪೋಲ್‌ವಾಲ್ಟ್‌ನಲ್ಲಿ ಏನಾದರೂ ಸಾಧಿಸಬೇಕೆಂಬ ಗುರಿ ಇಟ್ಟುಕೊಂಡ. ಇದಕ್ಕೋಸ್ಕರ ಬೇಜಾರಿಲ್ಲದೆ ದಿನವೂ ಜಿಮ್‌ಗೆ ಹೋಗಿ ಮೂಳೆ ಮುರಿಯುವಷ್ಟು ಅಭ್ಯಾಸ ಮಾಡಿದ. ಕೆಲವು ಮೂಳೆಕಟ್ಟುಗಳು ಹರಿದರೂ ಪಟ್ಟುಬಿಡದೆ, ೩.೫ ಮೀಟರ್ ಹಾರಬೇಕೆಂಬ ಗುರಿಯನ್ನು ಸಾಧಿಸಿದ. ಸಾಧಿಸಿದ ತಕ್ಷಣ ಆ ಅಭ್ಯಾಸವನ್ನು ನಿಲ್ಲಿಸಿದ. ನಂತರ ಒಬ್ಬ ಹುಡುಗಿಯನ್ನು ಮದುವೆಯಾಗಲೇಬೇಕೆಂದು ನಿರ್ಧರಿಸಿ ಕೊನೆಗೆ ಅವಳನ್ನು ಪಡೆಯುವಲ್ಲಿ ಯಶಸ್ವಿಯಾದ. ಒಂದು ನಿಶ್ಚಿತ ಬದುಕಿಗೆ ತನಗೆ ಇಷ್ಟು ಹಣ ಬೇಕಾಗಬಹುದು ಎಂಬ ಅಂದಾಜು ಮಾಡಿ, ಅದನ್ನು ಗಳಿಸುವವರೆಗೂ, ಹತ್ತು ವರ್ಷ ನಿಷ್ಠೆಯಿಂದ ಕೆಲಸ (ಮಾಡುವ ಕೆಲಸ ಎಷ್ಟು ನೀರಸವಾಗಿದ್ದರೂ ತಾಳ್ಮೆ ಕಳೆದುಕೊಳ್ಳದೆ ಏಕಾಗ್ರತೆಯಿಂದ) ಮಾಡಿದ.

ನಮಗಿಬ್ಬರಿಗೂ ನಾವು ಕೆಮಿಸ್ಟ್ ಆಗುವುದರ ಬಗ್ಗೆ ಎಳ್ಳಷ್ಟೂ ಅನುಮಾನ ಇರಲಿಲ್ಲ. ಆದರೆ ನಮ್ಮ ಆಶಯ ಮತ್ತು ನಿರೀಕ್ಷೆಗಳು ತುಂಬ ಭಿನ್ನವಾಗಿದ್ದವು. ಎನ್ರಿಕೋಗೆ ಕೆಮಿಸ್ಟ್ರಿ ಎಂದರೆ, ತನ್ನ ಗುರಿಯಾದ ನಿಶ್ಚಿಂತೆಯ ಜೀವನವನ್ನು ಪಡೆಯಲು ಮತ್ತು ಬದುಕಲು ಬೇಕಾದ ಹಣವನ್ನು ಪಡೆಯುವ ಒಂದು ಸಾಧನ. ಆದರೆ ನಾನು ಕೆಮಿಸ್ಟ್ರಿಯಿಂದ ಏನೇನೋ ಪಡೆಯಲು ಬಯಸಿದ್ದೆ. ಅದು ಒಂದೇ ಬಾರಿಗೆ ಎಲ್ಲೆಯಿಲ್ಲದ ಸಾಮರ್ಥ್ಯವನ್ನು ಕೊಡತಕ್ಕದ್ದೂ, ಅಸ್ಪಷ್ಟವೂ ಆಗಿ ತೋರುತ್ತಿತ್ತು. ಮೌಂಟ್ ಸಿನ್ಯೆನಿಂದ ಉಗುಳುತ್ತಿದ್ದ ಬೆಂಕಿಯುಂಡೆಗಳಂತೆ ಅವು ನನಗೆ ಅನೇಕಾನೇಕ ರಹಸ್ಯಗಳನ್ನು ತನ್ನಲ್ಲಿ ಇರಿಸಿಕೊಳ್ಳುವಂತೆಯೂ, ಕಪ್ಪು ಹೊಗೆ ಉಗುಳಿದಾಗ ಅವ್ಯಕ್ತವೂ ಆಗಿ ತೋರುತ್ತಿತ್ತು. ಮೋಸೆಸ್‌ಗೆ ಅರಿವಾದಂತೆ, ನನಗೂ ಆ ಮೋಡಗಳಿಂದ ಒಂದು ಕಟ್ಟಳೆ ಉದುರೀತು; ಉದುರಿ ನನ್ನನ್ನು ಈ ಪ್ರಪಂಚದಲ್ಲಿ ಒಂದು ಬಂಧಕ್ಕೆ ನಿಶ್ಚಿತ ಗುರಿಯತ್ತ ಹೊರಡುವಂತೆ ಮಾಡೀತು ಎಂಬ ಆಸೆ ಇತ್ತು. ನಾನು ಎಲ್ಲ ಪುಸ್ತಕಗಳನ್ನು ರಾಕ್ಷಸ ಓದಿಗೆ ಒಳಪಡಿಸಿದೆನಾದರೂ, ಅವುಗಳ ಮೇಲೆ ಪ್ರೀತಿ ಹುಟ್ಟಲಿಲ್ಲ. ಪ್ರಪಂಚದಲ್ಲಿ ನನ್ನ ಅಸ್ತಿತ್ವವನ್ನು ವಿವರಿಸುವ ಯಾವುದೋ ತತ್ವದ ಕೀಲಿಕೈಗೆ ಹುಡುಕಾಡುತ್ತಿದ್ದೆ. ಆದರೆ ಯಾರೋ ಮಾಡಿದ ದೊಡ್ಡ ಪಿತೂರಿಯಿಂದ ಆ ಕೀಲಿಕೈ ನನಗೆ ಶಾಲೆಯ ಓದಿನ ಮೂಲಕ ಸಿಗದ ಹಾಗೆ ಮಾಡುತ್ತಿದ್ದಾರೆ ಎನಿಸಿತು. ಶಾಲೆಯಲ್ಲಿ ದೊಡ್ಡ ದೊಡ್ಡ ಸಿದ್ಧಾಂತಗಳನ್ನು ನಾವು ತಿಂದು ಅರಗಿಸಿಕೊಳ್ಳುವ ಹಾಗೆ ಮಾಡಿದರೂ, ಅವು ನನ್ನ ನರ ನಾಳಗಳಲ್ಲಿ ಮಿಂಚು ಹರಿಸಲಿಲ್ಲ. ವಸಂತದಲ್ಲಿ ಮೊಗ್ಗೊಂದು ಬಿರಿದಾಗ, ಗ್ರಾನೈಟ್ ಶಿಲೆಯ ಮೈಕಾ ಬಿಸಿಲಲ್ಲಿ ಹೊಳೆದಾಗ, ನನಗೆ ಅನ್ನಿಸಿತ್ತು, 'ಬಹುಶಃ ಎಂದಾದರೊಂದು ದಿನ ಇವೆಲ್ಲವೂ ನನಗೆ ಅರ್ಥವಾಗುತ್ತದೆ. ಎಲ್ಲವೂ. ಆದರೆ ಅವರು ಹೇಳಿದ ಮಾರ್ಗದಲ್ಲಿ ಅಲ್ಲ. ನಾನು ನನ್ನದೇ ಆದ ದಾರಿಯನ್ನು ಕಂಡುಹಿಡಿದೇನು. ಆ ದಾರಿಯಲ್ಲಿ ನಡೆದು ನನ್ನದೇ ಆದ ಕೀಲಿಕೈಯಿಂದ ಬಾಗಿಲನ್ನು ತೆರೆದೇನು.'

ನಮ್ಮ ಸುತ್ತಲೂ ಇರುವ ಪರಿಸರದ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಮುಖ್ಯವಾಗಿರುವಾಗ, ಅಸ್ತಿತ್ವದ ಪ್ರಶ್ನೆ ಮತ್ತು ಜ್ಞಾನ ಸಂಪಾದನೆಯ ಸಮಸ್ಯೆಗಳ ಬಗ್ಗೆ ಪಾಠಗಳನ್ನು ಕೇಳಲು ಬೇಸರವಾಗುತ್ತಿತ್ತು. ಎಷ್ಟೆಂದರೆ ವಾಕರಿಕೆ ಬರುವಷ್ಟು. ನಮ್ಮ ಬೆಂಚುಗಳಲ್ಲಿರುವ ಮರದ ಬಗ್ಗೆ, ಕಿಟಕಿ ಮತ್ತು ಛಾವಣಿಯನ್ನು ತೂರಿ ಬರುವ ಸೂರ್ಯನ ಕಿರಣಗಳ ಬಗ್ಗೆ, ಜೂನ್ ತಿಂಗಳ ಹಿತವಾದ ಗಾಳಿಯ ವಿರುದ್ಧ ಹಾರಾಡಲು ಬಯಸಿಯೂ ಹಾರಲಾರದ ಹಕ್ಕಿಯ ಬಗ್ಗೆ? ಇವನ್ನೆಲ್ಲ ಬಿಟ್ಟು ಅಂಥ ಮೂಢ ವಸ್ತುಗಳ ಬಗ್ಗೆ ಜಿಜ್ಞಾಸೆ ಏತಕ್ಕೆ? ಈ ಭೂಮಿಯ ಇಷ್ಟೂ ತತ್ವಶಾಸ್ತ್ರಜ್ಞರೂ, ಸೈನ್ಯದವರೂ ನನ್ನ ಮುಂದಿರುವ ಸಣ್ಣ ನೊಣವನ್ನು ಸೃಷ್ಟಿಸಬಲ್ಲರೇ? ಇಲ್ಲವಲ್ಲ? ಅವರಿಗೆ ಅದು ಅರ್ಥವಾಗುವುದೂ ಇಲ್ಲ. ಇದನ್ನೆಲ್ಲ ಕುರಿತು ಯೋಚಿಸಿದಾಗ ನನ್ನ ಮೇಲೆ ನನಗೇ ನಾಚಿಕೆಯುಂಟಾಗುತ್ತದೆ. ನಾನು ಇನ್ನೊಂದು ದಾರಿಯನ್ನು ಹುಡುಕಲೇಬೇಕು.

ಹೌದು. ನಾವಿಬ್ಬರೂ – ಎನ್ರಿಕೋ ಮತ್ತು ನಾನು – ಕೆಮಿಸ್ಟ್‌ಗಳಾಗುತ್ತೇವೆ. ನಮ್ಮ ಮುಂದಿರುವ ರಹಸ್ಯಗಳನ್ನೆಲ್ಲ ನಮ್ಮ ಶಕ್ತಿಯಿಂದ ಮತ್ತು ನಮ್ಮ ಬುದ್ಧಿವಂತಿಕೆಯಿಂದ ಅವುಗಳ ಆಳಕ್ಕಿಳಿದು ಬಗೆಯುತ್ತೇವೆ. ಆ ಪ್ರೋಷಿಯಸ್‌ನ ಕತ್ತು ಪಟ್ಟಿ ಹಿಡಿದು, ಅವನು

ಮುಗಿಸದ ರೂಪ ಪರಿವರ್ತನೆಯ ಕೆಲಸಗಳನ್ನೆಲ್ಲ – ಪ್ಲೇಟೋನಿಂದ ಅಗಸ್ಟಿನ್‌ವರೆಗೆ, ಅಗಸ್ಟಿನ್‌ನಿಂದ ಥಾಮಸ್‌ವರೆಗೆ, ಥಾಮಸ್‌ನಿಂದ ಹೆಗೆಲನವರೆಗೆ; ಕೊನೆಗೆ ಹೆಗೆಲ್‌ನಿಂದ ಕ್ರೋಚೆವರೆಗೆ – ಅವನು ಮಾಡದ ಕೆಲಸವನ್ನು ನಾವು ಮಾಡುತ್ತೇವೆ.

ಈ ಮಹಾನ್ ಉದ್ದೇಶ ಇಟ್ಟುಕೊಂಡು ನಾವು ಸುಮ್ಮನೆ ಕೂರಲಾಗುತ್ತದೆಯೇ? ಪೀಚಾಗಿಯೂ ನಿಗೂಢವಾಗಿಯೂ ಕಾಣುತ್ತಿದ್ದ ಎನ್ರಿಕೋನ ಅಣ್ಣನೂ ರಸಾಯನ ಶಾಸ್ತ್ರದ ವಿದ್ಯಾರ್ಥಿಯಾಗಿದ್ದರೂ, ಎನ್ರಿಕೋ ಅವನ ಬಗ್ಗೆ ಹೆಚ್ಚು ಮಾತನಾಡುತ್ತಿರಲಿಲ್ಲ. ಆ ಅಣ್ಣ ತನ್ನ ಮನೆಯ ಹತ್ತಿರವಿದ್ದ ಸಣ್ಣ ಓಣಿಯ ಹಿಂಭಾಗದಲ್ಲಿ ತನ್ನದೇ ಸಣ್ಣ ಪ್ರಯೋಗಾಲಯವನ್ನು ಮಾಡಿಟ್ಟುಕೊಂಡಿದ್ದ. ಆ ಓಣಿಯೋ, ಟ್ಯುರಿನ್ ನಗರವೆಂಬ ಬೃಹತ್ ಪ್ರಾಣಿಯ ಅಂಗಾಂಗಗಳ ಮಧ್ಯೆ ಸಿಕ್ಕಿ ಹಾಕಿಕೊಂಡ ಒಂದು ಅವಯವದಂತೆ ಕಾಣುತ್ತಿತ್ತು. ಆ ಪ್ರಯೋಗಾಲಯವೂ ಅಷ್ಟೆ. ಆರಂಭಿಕ ಹಂತದ್ದು. ಯಾವುದೋ ಹಳೆಯ ಕಾಲದ ಬೃಹತ್ತಾಗಿ ಇದ್ದಿರಬಹುದಾದುದರ ಕುರುಹಾಗಿ ಅಲ್ಲ. ಬಡತನದಿಂದ ಹೆಚ್ಚು ವ್ಯವಸ್ಥೆಗಳಿಲ್ಲದೆ ಬಡವಾದದ್ದು. ಒಂದು ವರ್ಕ್ ಬೆಂಚ್, ಕೆಲವು ಗಾಜಿನ ಭರಣಿಗಳು ಮತ್ತು ಪೈಪ್‌ಗಳು, ರೀಏಜೆಂಟ್ ಇದ್ದ ಒಂದಿಪ್ಪತ್ತು ಫ್ಲಾಸ್ಕ್‌ಗಳು, ಹಲವಾರು ಜೇಡರ ಬಲೆಗಳು, ಕಡಿಮೆ ಬೆಳಕು ಮತ್ತು ಹೆಚ್ಚು ಛಳಿ ಇದ್ದ ಜಾಗ. ಇಲ್ಲಿಗೆ ಬರುತ್ತಿದ್ದಾಗ ನಾವೇನೇನು ಮಾಡಬಹುದು ಎಂಬ ಲೆಕ್ಕಾಚಾರವನ್ನು ಹಲವಾರು ಬಾರಿ ಹಾಕಿದ್ದೆವು. ಆದರೆ ಆ ಪ್ರಯೋಗಾಲಯದ ಒಳಗೆ ಬಂದಮೇಲೆ ನಮ್ಮಲ್ಲಿ ಇದ್ದ ಭರವಸೆ ಕಡಿಮೆಯಾಗಿ ಗೊಂದಲ ಹೆಚ್ಚಾಯಿತು.

ಆಗ ನನಗೆ ಇನ್ನೊಂದು ರೀತಿಯಿಂದಲೂ ನಾಚಿಕೆ ಉಂಟಾಯಿತು. ಇಷ್ಟೆಲ್ಲ ಸವಲತ್ತು ಇದ್ದರೂ ಏನೂ ಮಾಡಲು ಸಾಧ್ಯವಾಗದಿರುವ ಬಗೆಗಿನ ನಾಚಿಕೆ. ನಮ್ಮ ಅಸ್ತಿತ್ವದ ಮೂಲಾಧಾರವಾಗಿರಬೇಕಾದ್ದು ನನ್ನಲ್ಲಿ ಇಲ್ಲವಲ್ಲ ಎನ್ನುವಂಥ ಭಾವನೆ ಮನಸ್ಸಿನಾಳದಲ್ಲಿ ಮೂಡಿ, ಅದರಿಂದಾದ ನಾಚಿಕೆ. ಈ ನಾಚಿಕೆ ನನಗೆ ಮಾತ್ರ ಅನ್ವಯಿಸದೆ, ನನ್ನ ಕುಟುಂಬ, ನನ್ನ ಜಾತಿ ಇವುಗಳಲ್ಲೂ ಕಾಣಬಹುದು ಎನಿಸಿ ಮನಸ್ಸು ದುಗುಡದಿಂದ ತುಂಬಿತು. ನಾವು ನಮ್ಮ ಕೈಗಳಿಂದ ಏನೇನನ್ನು ಮಾಡಲಿಕ್ಕೆ ಸಾಧ್ಯ? ಏನೂ ಇಲ್ಲ. ಬಹುಶಃ ಏನೇನೂ ಇಲ್ಲ. ಆದರೆ, ನಮ್ಮ ಹೆಂಗಸರು? ಹೌದು ನಮ್ಮ ತಾಯಂದಿರು ಮತ್ತು ಅಜ್ಜಿಯರು? ಅವರ ಕೈಗಳನ್ನು ನೋಡಿ! ಅಡಿಗೆ ಮಾಡಿ, ಕಸೂತಿ ಹಾಕಿ ಏನೆಲ್ಲ ಕೆಲಸಗಳನ್ನು ಮಾಡುತ್ತವೆ? ಕೆಲವರು ಪಿಯಾನೋ ಕೂಡ ನುಡಿಸಿದರು, ಕೆಲವರು ಚಿತ್ರ ಬಿಡಿಸಿದರು, ಎಂಬ್ರಾಯ್ಡರಿ ಮಾಡಿದರು; ಹೆರಳನ್ನು ನಾಜೂಕಿನಿಂದ ಹೆಣೆದು ಸುಂದರವಾಗಿ ಕಾಣುವಂತೆ ಮಾಡಬಲ್ಲರು. ಆದರೆ ನಾವು ಮತ್ತು ನಮ್ಮ ತಂದೆ ಮತ್ತು ಅಜ್ಜಂದಿರು?

ನಮ್ಮ ಕೈಗಳು ದಪ್ಪ ಮತ್ತು ಅದೇ ಹೊತ್ತಿಗೆ ಕೃಶ. ಏನೇನೂ ಸೂಕ್ಷ್ಮವಲ್ಲದ್ದು. ನಮ್ಮ ದೇಹದ ಅಂಗಗಳಲ್ಲಿ ಅತಿ ಕಡಿಮೆ ಕೌಶಲ್ಯ ತೋರುವ ಭಾಗ. ತಮ್ಮ ಬಾಲ್ಯದ ಆಟಪಾಟಗಳನ್ನು ಬಿಟ್ಟರೆ, ನಾವು ಕೈಗಳಿಂದ ಕಲಿತಿದ್ದೇನು? ಬರೆಯುವುದು ಮಾತ್ರ. ಬೇರೇನೂ ಇಲ್ಲ. ಒಂದು ಮರವನ್ನು ತಬ್ಬಿದಾಗ ಆಗುವ ಅನುಭೂತಿಯನ್ನು ಅನುಭವಿಸಬೇಕೆಂದಿದ್ದೆವು. ಆದರೆ ಅದಕ್ಕೆ ಬೇಕಾದ ಕೌಶಲವನ್ನು ಕಲಿಯುವುದರಿಂದ ನಮ್ಮನ್ನು ಹೊರಗಿಡಲಾಗಿತ್ತು. ಎನ್ರಿಕೋ ಮತ್ತು ನನಗೆ ಮರವನ್ನು ಹತ್ತಿ ಡಾರ್ವಿನ್‌ನ ಪುಸ್ತಕಕ್ಕೆ ನಮ್ಮದೇ ಆದ ರೀತಿಯಲ್ಲಿ ನಮಸ್ಕಾರಗಳನ್ನು ಸಲ್ಲಿಸಬೇಕೆಂಬ ಆಸೆ. ಆದರೆ ಇದೆಲ್ಲ ಅನುಭವಗಳಿಂದ ನಮ್ಮನ್ನು ರಕ್ಷಿಸಲಾಗಿತ್ತು. ಒಂದು ಸುತ್ತಿಗೆಯ ಭಾರವನ್ನು ಒಂದೇ ಕಡೆ ಹೆಚ್ಚಾಗುವಂತೆ ಹಿಡಿಯುವ ಕೌಶಲ; ಕತ್ತಿಯ ಅಲಗಿನಲ್ಲಿ ಅದರ ಎಲ್ಲ ಶಕ್ತಿ ಕೇಂದ್ರೀಕೃತಗೊಂಡ ಬಗ್ಗೆ ಆಶ್ಚರ್ಯ; ಮರದ ತೊಗಟೆಯನ್ನು ಮುಟ್ಟಿದಾಗ ಆಗುವ ಅನೇಕ ಸ್ಪರ್ಶಗಳ ಅನುಭವ ಮತ್ತು ಕಬ್ಬಿಣ, ಸತು ಮತ್ತು ತಾಮ್ರವನ್ನು ಹೇಗೆ ಬೇಕೆಂದರೆ ಹಾಗೆ ಬಳುಕಿಸುವ ಕೌಶಲ. ಈ ಎಲ್ಲವೂ ನಮ್ಮಲ್ಲಿರಲಿಲ್ಲ. ಮನುಷ್ಯನನ್ನು ಸೃಷ್ಟಿಕರ್ತ ಎನ್ನುತ್ತಾರೆ. ಇದು ಹೌದಾದರೆ ನಾವು ಮನುಷ್ಯರಾಗಿರಲಿಲ್ಲ. ಇದು ನಮಗೆ ಗೊತ್ತಿತ್ತು ಮತ್ತು ಈ ಅರಿವು ಆಳವಾದ ವಿಷಾದ ಮತ್ತು ಕ್ಷೋಭೆ ನಮ್ಮನ್ನಾವರಿಸುವಂತೆ ಮಾಡಿತು.

ನಮ್ಮ ಪ್ರಯೋಗಾಲಯದಲ್ಲಿದ್ದ ಗಾಜು ನಮ್ಮನ್ನು ಆಕರ್ಷಿಸಿತ್ತು ಮತ್ತು ಭಯವನ್ನೂ ಉಂಟುಮಾಡಿತ್ತು. ಒಂದು ರೀತಿಯಲ್ಲಿ ನೋಡಿದರೆ, ಗಾಜು ಎಂದರೆ 'ಒಡೆಯುತ್ತಾದ್ದರಿಂದ ಮುಟ್ಟಬಾರದ್ದು.' ಆದರೆ ಹತ್ತಿರದಿಂದ ನೋಡಿದಾಗ ಅದು ಇತರ ಎಲ್ಲ ವಸ್ತುಗಳಿಗಿಂತ ಭಿನ್ನವೂ ಆಗಿತ್ತು. ಅದನ್ನು ಕಂಡರೆ ವಿಲಕ್ಷಣ ಆಕರ್ಷಣೆ; ಅದರ ಮೈ ತುಂಬ ತುಂಬಿರುವ ನಿಗೂಢತೆ ಮತ್ತು ತಿಕ್ಕಲುತನ. ನೀರಿನ ತರಹವೇ ಇದಕ್ಕೂ ನಾನಾ ವೇಷ. ಆದರೆ ನೀರು ಮನುಷ್ಯನ ಜೀವನಕ್ಕೆ ಎಷ್ಟು ಹತ್ತಿರವೆಂದರೆ, ಅದನ್ನು ಬಿಟ್ಟು ಈ ಪ್ರಪಂಚ ಹೇಗಿರಬಹುದೆಂದು ಊಹಿಸುವುದೂ ಕಷ್ಟ. ಅದರ ವಿಭಿನ್ನ ವೇಷಗಳು ಮನುಷ್ಯನ ಜೀವನದಲ್ಲಿ ಎಷ್ಟು ಹಾಸುಹೊಕ್ಕಾಗಿವೆ ಯೆಂದರೆ, ಅದು ನಮ್ಮ ದೈನಂದಿನ ವ್ಯವಹಾರಗಳಲ್ಲಿ ಇದ್ದೂ ಇಲ್ಲದಂತೆ ಕೆಲಸ ಮಾಡುತ್ತಿರುತ್ತದೆ. ಗಾಜು ಹಾಗಲ್ಲ. ಅದೊಂದು ಮನುಷ್ಯ ಸೃಷ್ಟಿ ಮತ್ತು ಅದರ ಇತಿಹಾಸ ಇತ್ತೀಚಿನದು. ಅದು ನಮ್ಮ ಮೊದಲ ಬಲಿಪಶು ಅಥವಾ ನಮ್ಮ ಮೊದಲ ಶತ್ರು. ನಮ್ಮ ಕೆಮಿಸ್ಟ್ರಿ ಪ್ರಯೋಗಾಲಯದಲ್ಲಿ ಎಲ್ಲ ತರಹದ, ದೊಡ್ಡ, ಸಣ್ಣ ಗಾತ್ರದ, ಧೂಳು ಹಿಡಿದ ಗಾಜುಗಳಿದ್ದವು. ನಾವು ಬುನ್‌ಸೆನ್ ಬರ್ನರ್ ಹಚ್ಚಿ ಕೆಲಸ ಪ್ರಾರಂಭಿಸಿದೆವು.

ಗಾಜಿನ ಟ್ಯೂಬನ್ನು ಬಗ್ಗಿಸುವುದು ಸುಲಭ. ಬೆಂಕಿಯ ಜ್ವಾಲೆಯ ಹತ್ತಿರ ಟ್ಯೂಬಿನ ಒಂದು ತುದಿಯನ್ನು ಸ್ವಲ್ಪ ಹೊತ್ತು ಹಿಡಿದರೆ ಆಯಿತು. ಸ್ವಲ್ಪ ಸಮಯದ ನಂತರ ಜ್ವಾಲೆಯ ಬಣ್ಣ ಹಳದಿಯಾಗಿ ಅದೇ ಹೊತ್ತಿಗೆ ಗಾಜೂ ಕ್ಷೀಣವಾಗಿ ಬೆಳಕು ಸೂಸಲು ಪ್ರಾರಂಭಿಸುತ್ತದೆ. ಈ ಹೊತ್ತಿನಲ್ಲಿ ಟ್ಯೂಬನ್ನು ಬಗ್ಗಿಸಬೇಕು. ನಾವು ಅದನ್ನು ಬಗ್ಗಿಸಿದಾಗ ನಮಗೆ ಎಷ್ಟು ಬೇಕೆನಿಸಿತ್ತೋ ಅಷ್ಟು ನಿಖರವಾದ ಅಳತೆಯ ತ್ರಿಜ್ಯ ಸಿಗಲಿಲ್ಲವಾದರೂ, ಮೊದಲಿದ್ದಿದ್ದಕ್ಕಿಂತ ಬೇರೆಯೇ ಆದ ರಚನೆ ನಮ್ಮೆದುರಿಗಿತ್ತು. ಯಾವುದು ಸಂಭವನೀಯವೋ ಅದು ನಮ್ಮೆದುರಿಗೆ ಮೈದಳೆದಿತ್ತು. ಇದನ್ನೇ ಅಲ್ಲವೇ ಅರಿಸ್ಟಾಟಲ್ ಹೇಳಿದ್ದು?

ಇದೇ ತರಹ, ತಾಮ್ರದ ಅಥವಾ ಸತುವಿನ ಟ್ಯೂಬನ್ನೂ ಬಗ್ಗಿಸಬಹುದು. ಆದರೆ ಕೆಂಪಾಗಿ ಕಾಯುತ್ತಿರುವ ಗಾಜಿನ ಟ್ಯೂಬಿಗೆ ಇನ್ನೂ ಹಲವಾರು ಗುಣಗಳಿರುವುದನ್ನು ಗಮನಿಸಿದೆವು. ಅದು ಮೃದುವಾದಾಗ, ಕಡಿಮೆ ಉಷ್ಣತೆಯುಳ್ಳ ಎರಡೂ ತುದಿಗಳನ್ನು ಹಿಡಿದಾಗ, ಅತಿ ಸಣ್ಣ ಎಳೆಗಳನ್ನು ಎಳೆಯಬಹುದು ಎಂದೂ ತಿಳಿದೆವು. ಎಷ್ಟು ಸಣ್ಣ ಎಳೆಯೆಂದರೆ ಕಣ್ಣಿಗೆ ಕಾಣದಷ್ಟು. ಕೆಳಗಿನಿಂದ ಮೇಲಕ್ಕೆ ಬರುವ ಬಿಸಿ ಗಾಳಿ ಈ ಸಣ್ಣ ಎಳೆಗಳನ್ನು, ರೇಷ್ಮೆಯ ನೂಲಿನಂತೆ, ತಮ್ಮ ಜೊತೆಗೇ ಒಯ್ಯುತ್ತಿದ್ದವು. ಕೆಲವೇ ನಿಮಿಷಗಳ ಹಿಂದೆ ಮೊಂಡುತನ ತೋರುತ್ತಿದ್ದ ಗಾಜು ಈಗ ರೇಷ್ಮೆಯ ನೂಲಿನಂತೆ ಬಳುಕುತ್ತಿದೆ. ಹಾಗಾದರೆ, ಹತ್ತಿ ಮತ್ತು ರೇಷ್ಮೆಯನ್ನೂ ಅಗಾಧ ಪ್ರಮಾಣದಲ್ಲಿ ಒಟ್ಟಿಗೆ ಸೇರಿಸಿದರೆ, ಗಾಜಿನಷ್ಟು ಜಡ ಮತ್ತು ಸ್ಥಿರವಸ್ತು ಆಗುತ್ತದೆಯೇ? ಎನ್ರಿಕೋ ತಮ್ಮ ಅಜ್ಜನ ಮನೆಯಲ್ಲಿ ನಡೆಯುತ್ತಿದ್ದದ್ದೆಂದು ಒಂದು ಕಥೆ ಹೇಳಿದ. ರೇಷ್ಮೆ ಹುಳುಗಳು ತುಂಬ ದಪ್ಪನಾಗಿ ಇನ್ನೇನು ಪ್ಯೂಪಾ ಆಗುವ ಹೊತ್ತಿಗೆ, ತಮ್ಮ ಭಾರ ದೇಹವನ್ನು ಹೊತ್ತುಕೊಂಡು ಗಿಡವನ್ನೇರುವ ಪ್ರಯತ್ನವನ್ನು ಮಾಡುತ್ತವಂತೆ. ಆಗ ಅವುಗಳನ್ನು ಹಿಡಿದು ತಮ್ಮ ಬೆರಳುಗಳಿಂದ ಅವುಗಳನ್ನು ಅರ್ಧ ಮಾಡಿದಾಗ ಆ ಎರಡು ಅರ್ಧಗಳ ಮಧ್ಯೆ ಅವು ದಪ್ಪವಾದಂಥ ರೇಷ್ಮೆ ದಾರವನ್ನು ಬಿಡುತ್ತವಂತೆ. ಅದನ್ನು ಉಪಯೋಗಿಸಿ ಆ ಪಟ್ಟಣದ ಜನ ಮೀನಿನ ಬಲೆಯನ್ನು ಮಾಡುತ್ತಾರಂತೆ. ಈ ಕಥೆಯನ್ನು ನಾನು ನಂಬಲು ಕಷ್ಟವೇ ಪಡಬೇಕಿರಲಿಲ್ಲ. ಅಷ್ಟು ತರ್ಕಬದ್ಧ ಮತ್ತು ಬೆರಗು ಹುಟ್ಟಿಸುವ ಪರಿ; ಅದೇ ವೇಳೆಗೆ ಅಸಹ್ಯದ ಭಾವನೆಯನ್ನೂ ಮೂಡಿಸುವಂತಿತ್ತು. ಈ ಬಲೆ ನೇಯುವ ದಾರವನ್ನು ಸೃಷ್ಟಿಸುವ ಬಗೆ ಅದೆಷ್ಟು ಕ್ರೂರ! ಆ ಹುಳು ತನ್ನ ಜೀವನಕ್ಕೆಂದು ಶೇಖರಿಸಿಟ್ಟಿದ್ದ ದ್ರವ್ಯವೊಂದನ್ನು ನಾವು ಈ ರೀತಿ ಪಡೆಯುವುದೇ? ಆದರೆ ಅದೇ ಹೊತ್ತಿಗೆ ಈ ಕಥೆ ಬೆರಗನ್ನು ಉಂಟುಮಾಡಿದ್ದೂ ನಿಜ. ರೇಷ್ಮೆ ಹುಳುವನ್ನು ಅರ್ಧ ಮಾಡಿದರೆ ಹೀಗಾಗುತ್ತದೆಂದು ಯಾವುದೋ ಯುಗದಲ್ಲಿ ಕಂಡುಹಿಡಿದ ಆ ಪುರಾಣದ ಮನುಷ್ಯನ ಮನಸ್ಸು ಎಷ್ಟು ಸೃಜನಶೀಲವಾದದ್ದು ಮತ್ತು ಅನನ್ಯವಾದದ್ದು?

ಈ ಗಾಜಿನ ಟ್ಯೂಬನ್ನು ಬಲೂನಿನಂತೆ ಉಬ್ಬಿಸಲೂ ಸಾಧ್ಯ. ಆದರೆ ಅದಕ್ಕೆ ಬೇಕಾದ ಕೌಶಲ ಮಾತ್ರ ಉನ್ನತ ಮಟ್ಟದ್ದು. ಗಾಜಿನ ಸಣ್ಣ ಟ್ಯೂಬಿನ ಒಂದು ತುದಿಯನ್ನು ಮುಚ್ಚಬೇಕು. ನಂತರ ಇನ್ನೊಂದು ತುದಿಯಿಂದ ಬಲೂನಿಗೆ ಗಾಳಿ ತುಂಬಿದಂತೆ ಊದಿದರೆ ನಮ್ಮ ಮುಂದೆಯೇ ಪರಿಪೂರ್ಣ ಗೋಳವೊಂದರ ಸೃಷ್ಟಿಯಾಗುವುದು. ಆ ಗೋಳದ ಗೋಡೆಯ ದಪ್ಪ ಮಾತ್ರ ತುಂಬ ಕಡಿಮೆ ಮತ್ತು ನಾಜೂಕು. ನಮ್ಮ ಉಸಿರಿನ ಪ್ರಮಾಣದಲ್ಲಿ ಸ್ವಲ್ಪ ವ್ಯತ್ಯಯವಾದರೂ ಗಾಜಿನ ಗೋಡೆಯಲ್ಲಿ, ಸೋಪಿನ ಗುಳ್ಳೆಗಳಲ್ಲಿ ಕಾಣುವ ಬಣ್ಣಗಳನ್ನು ಕಾಣಬಹುದು. ಇದು ಕಂಡರೆ, ಮರಣ ಖಚಿತ. ನಮ್ಮ ಮುಂದೆಯೇ ಮೂಡಿದ್ದ ಗೋಳ ಚೂರು ಚೂರಾಗಿ ಮುರಿದು ಪ್ರಯೋಗಶಾಲೆಯ ನೆಲವೆಲ್ಲ ಗಾಜಿನ ಹಾಸಿಗೆ. ಮೊಟ್ಟೆ ಒಡೆದಾಗ ಶಬ್ದ ಬರುತ್ತದಲ್ಲ? ಅಂಥ ಶಬ್ದದೊಂದಿಗೆ ನೆಲಕ್ಕೆ ಬಿದ್ದಾಗ ನಾವು ಇಷ್ಟು ಕಷ್ಟಪಟ್ಟು ಮಾಡಿದ ಕೆಲಸಕ್ಕೆ ಏನೂ ಬೆಲೆಯೇ ಇಲ್ಲವೇ ಎನ್ನುವ ಭಾವನೆ. ಒಂದು

ರೀತಿಯಲ್ಲಿ ನೋಡಿದರೆ, ಇದು ನಮಗೆ ಕೊಟ್ಟ ಶಿಕ್ಷೆ. ಗಾಜೆಂದರೆ ಗಾಜೇ. ಅದು ಸೋಪಿನ ನೊರೆಯ ಗುಳ್ಳೆಯ ಹಾಗೆ ಇರಬೇಕೆಂದು ಭಾವಿಸುವುದು ತಪ್ಪಲ್ಲವೇ? ಹಾಗೆ ಭಾವಿಸಿದ್ದಕ್ಕೆ ಆಗಾಗ ಶಿಕ್ಷೆ ಅನುಭವಿಸಬೇಕಲ್ಲವೇ? ಸ್ವಲ್ಪ ಕಷ್ಟಪಟ್ಟರೆ ಇದರಲ್ಲಿ ಈಸೋಪನ ಕಥೆಯನ್ನೂ, ಅದರ ನೀತಿಯನ್ನೂ ನೋಡಲು ಸಾಧ್ಯ.

ಗಾಜಿನ ಜೊತೆ ನಡೆಸಿದ ಒಂದು ಗಂಟೆಯ ಯುದ್ಧದ ನಂತರ ನಮಗೂ ಶಕ್ತಿ ಕುಂದಿತ್ತು. ಅವಮಾನಕ್ಕೂ ಒಳಗಾಗಿದ್ದೆವು. ಕುದಿಯುತ್ತಿದ್ದ ಕೆಂಪು ಗಾಜನ್ನು ಅಷ್ಟು ಹೊತ್ತು ನೋಡಿದ್ದರಿಂದ ನಮ್ಮ ಕಣ್ಣುಗಳಲ್ಲಿರಬೇಕಾದ ದ್ರವ ಆರಿತ್ತು ಮತ್ತು ಕಣ್ಣುಗಳೂ ಕೆಂಪಾಗಿದ್ದವು. ನಮ್ಮ ಕೈಗಳಲ್ಲಿ ಸುಟ್ಟ ಗಾಯ. ಅಲ್ಲಾಡದೆ ಹೆಚ್ಚು ಹೊತ್ತು ನಿಂತದ್ದರಿಂದ ಕಾಲುಗಳು ಮರಗಟ್ಟಿದ್ದವು. ಇಷ್ಟರ ಮೇಲೆ, ಗಾಜಿನ ಮೇಲೆ ಕೆಲಸ ಮಾಡುವುದೆಂದರೆ ಅದೇನು ರಸಾಯನಶಾಸ್ತ್ರವೇ? ನಾವು ಪ್ರಯೋಗಾಲಯಕ್ಕೆ ಬಂದದ್ದು ಬೇರೆಯದೇ ಗುರಿಯಿಟ್ಟುಕೊಂಡು. ರಸಾಯನಶಾಸ್ತ್ರದ ಪಠ್ಯಪುಸ್ತಕದಲ್ಲಿ, ತುಂಬ ಸಹಜ ಮತ್ತು ಸುಲಭವೆಂಬಂತೆ ಬಿಂಬಿತವಾಗುತ್ತಿದ್ದ, ಅನೇಕ ರಾಸಾಯನಿಕ ಕ್ರಿಯೆಗಳಲ್ಲಿ ಒಂದನ್ನಾದರೂ, ನಮ್ಮದೇ ಕೈಗಳಿಂದ, ನಮ್ಮ ಕಣ್ಣ ಮುಂದೆಯೇ ನಡೆಸೇ ತೀರಬೇಕೆಂಬ ಅದಮ್ಯ ಬಯಕೆ ಮತ್ತು ಗುರಿಯಿಟ್ಟು ನಾವಿಲ್ಲಿಗೆ ಬಂದಿದ್ದೆವು.

ಸೆಸ್ಟಿನಿ ಮತ್ತು ಫ್ಯುನಾರೋ ಬರೆದ ಪುಸ್ತಕದಲ್ಲಿ ನೈಟ್ರಸ್ ಆಕ್ಸೈಡ್ ಅನಿಲವನ್ನು, ಹಾಸ್ಯಾಸ್ಪದ ರೀತಿಯಲ್ಲಿ 'ನಗುವ ಅನಿಲ' ಎಂದು ಬರೆದಿದ್ದಾರೆ. ಇದನ್ನು ಯಾರಾದರೂ ಹೀಗೆ ಕರೆದಾರೆಯೇ? ಅದನ್ನು ನಮ್ಮ ಮುಂದೆ ಹಿಡಿದಾಗ ನಮಗೆ ನಗು ನಿಜಕ್ಕೂ ಬರುತ್ತದೆಯೇ? ಅಮೋನಿಯಮ್ ನೈಟ್ರೇಟನ್ನು ನಿಧಾನವಾಗಿ ಜಾಗರೂಕತೆಯಿಂದ ಬಿಸಿ ಮಾಡಿದಾಗ ನಮಗೆ ನೈಟ್ರಸ್ ಆಕ್ಸೈಡ್ ಸಿಗುತ್ತದೆ. ಆದರೆ ಆ ಪ್ರಯೋಗಾಲಯದಲ್ಲಿ ಅಮೋನಿಯಮ್ ನೈಟ್ರೇಟ್ ಇರಲಿಲ್ಲ. ಬದಲಾಗಿ ಅಮೋನಿಯಾ ಮತ್ತು ನೈಟ್ರಿಕ್ ಆಸಿಡ್ ಇತ್ತು. ನಾವು ನಮ್ಮ ಭೋಳೆತನದಲ್ಲಿ ಅವೆರಡನ್ನೂ ಬೆರೆಸಿದೆವು. ಬೆರೆಸಿದ್ದೇ ತಡ, ಕೋಣೆಯ ತುಂಬ ತುಂಬುವಷ್ಟು ಬಿಳಿಯ ಹೊಗೆ. ಆದರೂ ನಾವು ಮುಂದುವರೆಸಿ, ಈ ಮಿಶ್ರಣದಲ್ಲಿ ಇರಬಹುದಾದ ನೀರನ್ನು ಆವಿ ಮಾಡುತ್ತೇವೆಂದು ಇನ್ನಷ್ಟು ಕುದಿಸಿದೆವು. ಕೆಲವೇ ಕೆಲವು ನಿಮಿಷಗಳಲ್ಲಿ ಇಡೀ ಕೋಣೆಯಲ್ಲಿ ಉಸಿರುಗಟ್ಟುವಷ್ಟು ದಟ್ಟ ಬಿಳಿಯ ಹೊಗೆ. ಇದನ್ನು ಯಾರು 'ನಗುವ ಅನಿಲ' ಎಂದು ಕರೆದರೋ? ನಮ್ಮಿಬ್ಬರಲ್ಲೂ ಅದು ಆತಂಕವನ್ನೇ ಸೃಷ್ಟಿಸಿತ್ತು. ಸದ್ಯ ನಮ್ಮ ಪ್ರಯೋಗವನ್ನು ಅಷ್ಟಕ್ಕೇ ನಿಲ್ಲಿಸಿದೆವು. ನಮ್ಮ ಅದೃಷ್ಟ. ಈ ಲವಣವನ್ನು ನಿಧಾನವಾಗಿ ಕುದಿಸದೇ ಇದ್ದಲ್ಲಿ ದೊಡ್ಡ ಸ್ಫೋಟವಾಗುತ್ತದೆ ಎಂಬುದು ನಮಗೆ ತಿಳಿದಿರಲಿಲ್ಲ.

ಹಾಗೆ ಸುತ್ತ ನೋಡುತ್ತಿರುವಾಗ ನನ್ನ ಕಣ್ಸೆಳೆದದ್ದು ಒಂದು ಸಾಧಾರಣ ಬ್ಯಾಟರಿ. ಹಾಂ! ಇದರಿಂದ ನಾವೇನಾದರೂ ಮಾಡಬಹುದು. ನೀರಿನ ವಿದ್ಯುದ್ವಿಭಜನೆ. ಅದನ್ನು ಅಷ್ಟು ಸಲ ನಮ್ಮ ಮನೆಯಲ್ಲಿ ಮಾಡಿದ್ದರಿಂದ, ಈ ಪ್ರಯೋಗವಂತೂ ಆತಂಕವನ್ನು ಸೃಷ್ಟಿಸದೆ, ನಮಗೆ ತಿಳಿದಿರುವ ಉತ್ತರವನ್ನು ನೀಡಬಹುದು ಎಂಬುದು ಖಾತ್ರಿಯಾಗಿತ್ತು. ಇದನ್ನು ನಾನು ಮಾಡಿ ತೋರಿಸಿದಲ್ಲಿ ಎನ್ರಿಕೋಗೆ ಭರವಸೆ ಮೂಡೀತು. ನಾನು ಒಂದು ಬೀಕರಿನಲ್ಲಿ ಸ್ವಲ್ಪ ನೀರು ಹಾಕಿದೆ. ಅದಕ್ಕೆ ಸ್ವಲ್ಪ ಉಪ್ಪನ್ನು ಸೇರಿಸಿದೆ. ಅಲ್ಲೇ ಹತ್ತಿರವಿದ್ದ ಎರಡು ಜ್ಯಾಮ್ ಭರಣಿಗಳನ್ನು ತಲೆಕೆಳಗು ಮಾಡಿಟ್ಟೆ. ನಂತರ ತಾಮ್ರದ ತಂತಿಯೊಂದನ್ನು ತೆಗೆದುಕೊಂಡು ಒಂದೊಂದು ಭರಣಿಯ ಕೆಳಗೆ ಒಂದೊಂದು ತುದಿಯನ್ನಿಟ್ಟು ಇನ್ನೊಂದು ತುದಿಯನ್ನು ಬ್ಯಾಟರಿಗೇ ಸೇರಿಸಿದೆ. ನೋಡುತ್ತಿದ್ದಂತೆ, ಗುಳ್ಳೆಗಳು ಆ ತಂತಿಯ ತುದಿಯಿಂದ ಮೇಲಕ್ಕೆದ್ದವು. ಕ್ಯಾಥೋಡಿನ ಮೇಲೆ ಏಳುತ್ತಿದ್ದ ಅನಿಲ, ಅನೋಡ್‌ಗಿಂತ ಎರಡುಪಟ್ಟು ಹೆಚ್ಚಾಗಿದ್ದದ್ದನ್ನು ಕಾಣಬಹುದಿತ್ತು. ನಾನು ಎಲ್ಲರಿಗೂ ಗೊತ್ತಿದ್ದ ಸಮೀಕರಣವನ್ನು ಬೋರ್ಡಿನ ಮೇಲೆ ಬರೆದೆ ಮತ್ತು ಆ ಸಮೀಕರಣದಂತೆಯೇ ಆ ಪ್ರಯೋಗದ ಫಲಿತಾಂಶ ಬರುತ್ತಿರುವುದನ್ನು ಎದೆ ಉಬ್ಬಿಸಿ ಹೇಳಿದೆ. ಎನ್ರಿಕೋ ನನ್ನ ಕಡೆ ಮುಖ ಮಾಡಿ ಕೇಳುತ್ತಿದ್ದರೂ ಅವನಿಗೆ ಮನದಟ್ಟಾಗಲಿಲ್ಲ ಎಂದು ಅವನ ಮುಖಚರ್ಯೆ ಹೇಳುತ್ತಿತ್ತು. ಅಷ್ಟು ಹೊತ್ತಿಗೆ ಕತ್ತಲಾಗಿತ್ತು ಮತ್ತು ವಿಪರೀತ ಚಳಿಯಿಂದ ನಾವೂ ನಡುಗುತ್ತಿದ್ದೆವು. ಆ ಪ್ರಯೋಗ ಹಾಗೆಯೇ ಇಡೀ ರಾತ್ರಿ ಮುಂದುವರೆಯಲಿ ಎಂದು ನಾವು ಎಲ್ಲವನ್ನೂ ಹಾಗೆಯೇ ಬಿಟ್ಟು ಹೊರಟೆವು. ಕೈತೊಳೆದುಕೊಂಡು ತಂದಿದ್ದ ಬ್ರೆಡ್ ಪುಡ್ಡಿಂಗ್‌ನ್ನು ಸವಿಯುತ್ತ, ಮನೆಯತ್ತ ಮುಖ ಮಾಡಿದೆವು.

ಪ್ರಯೋಗಾಲಯವನ್ನು ನಾವು ಮುಂದಿನ ದಿನವೂ ಉಪಯೋಗಿಸಬಹುದಿತ್ತು. ನನ್ನ ಸಿದ್ಧಾಂತಕ್ಕೆ ಜೀ ಹುಜೂರ್ ಎನ್ನುತ್ತಿದೆಯೋ ಎನ್ನುವಂತೆ ಆ ಕ್ಯಾಥೋಡ್ ಭರಣಿಯ ತುಂಬ ಅನಿಲವಿತ್ತು. ಆನೋಡ್ ಭರಣಿ ಅರ್ಧ ತುಂಬಿತ್ತು. 'ನೋಡಿದೆಯಾ ನನ್ನ ಸಿದ್ಧಾಂತದ ವಿಜಯವನ್ನು?' ಎಂದು ನನಗೇ ನಾನು ಮರ್ಯಾದೆ ಕೊಟ್ಟುಕೊಂಡು, ಎನ್ರಿಕೋಗೆ ಹೇಳಿದೆ. 'ನಾನು ಹೇಳುತ್ತಿರಲಿಲ್ಲವೇ? ನಿರ್ದಿಷ್ಟ ಪ್ರಮಾಣದ ಪ್ರಮೇಯ (Law of definite proportions) ಹೇಗೆ ಕೆಲಸ ಮಾಡುತ್ತದೆಂದು. ಆ ಪ್ರಮೇಯವನ್ನು ತೋರಿಸುವ ಒಂದು ಬಗೆ ಈ ವಿದ್ಯುದ್ವಿಭಜನೆ.' ಗರ್ವದಿಂದ ಹೇಳಿದೆ : ಇದನ್ನು ನಾನು ಮನೆಯಲ್ಲಿ ಎಷ್ಟೋ ದಿನ ಪ್ರಯೋಗ ಮಾಡಿ ಸ್ವತಃ ಮಾಡಿದ ಸಂಶೋಧನೆಯೆಂದೂ ಒತ್ತಿ ಹೇಳಿದೆ. ಆದರೆ ಅವತ್ತು ಯಾಕೋ ಎನ್ರಿಕೋನ ಮನಸ್ಸು ವಿಮುಖವಾಗಿತ್ತು ಮತ್ತು ಅವನು ಎಲ್ಲವನ್ನೂ ಅನುಮಾನದಿಂದ ನೋಡುತ್ತಿದ್ದ. 'ಅದು ಹೈಡ್ರೋಜನ್ ಮತ್ತು ಆಕ್ಸಿಜನ್ ಅಂತ ನಿನಗೆ ಹೇಗೆ ಗೊತ್ತು? ಅದು ಕ್ಲೋರೀನ್ ಆಗಿರಬಹುದಲ್ಲ? ನೀನು ಉಪ್ಪು ಹಾಕಿದ್ದನ್ನ ನಾನು ಗಮನಿಸಿದೆ' ಎಂದ.

ನಾನು ಇಷ್ಟು ಕಷ್ಟಪಟ್ಟು ತೋರಿಸಿದ ಸೈದ್ಧಾಂತಿಕ ಸತ್ಯವನ್ನು ಹೀಗೆ ಹೀಗಳೆಯುವುದೇ? ಈ ಪ್ರಯೋಗದ ಫಲಿತಾಂಶವನ್ನು ಇಷ್ಟು ನಿಕೃಷ್ಟವಾಗಿ ನೋಡುವುದಕ್ಕೆ ಎನ್ರಿಕೋಗೆ ಯಾವ ಹಕ್ಕಿದೆ? ನಾನಲ್ಲವೇ ಈ ಸಿದ್ಧಾಂತವನ್ನು ಹೆಚ್ಚು ತಿಳಿದವನು? ನಾನು ಮಾತ್ರ. ಅವನು ಈ ಪ್ರಯೋಗಾಲಯದ ಯಜಮಾನನಾಗಿದ್ದರೂ (ಅವನೂ ಮೊದಲ ಯಜಮಾನನಲ್ಲ; ಎರಡನೇ ದರ್ಜೆ) ಅವನು ಈ ಪ್ರಯೋಗದ ಫಲಿತಾಂಶವನ್ನು ಹೀಗೆ ನೋಡುವುದೇ? ಅವನಿಗೆ ಬೇರೆ ಎಷ್ಟೆಲ್ಲ ಗೊತ್ತಿತ್ತು ಮತ್ತು ಅದು ಅವನಿಗೂ ತಿಳಿದಿತ್ತು. ಆ ದೃಷ್ಟಿಯಿಂದಲಾದರೂ ಅವನು ನನ್ನ ಪ್ರಯೋಗದ ಕುರಿತು ಇಷ್ಟು ಒರಟಾದ ವಿಮರ್ಶೆ ಮಾಡಬಾರದಾಗಿತ್ತು. ನಾನು ಹೇಳಿದೆ. 'ಈಗ ನಾವು ನೋಡೋಣ' ಹೀಗೆ ಹೇಳುತ್ತ, ನಾನು ಆ ಕ್ಯಾಥೋಡ್ ತುಂಬಿದ ಭರಣಿಯನ್ನು ನಿಧಾನವಾಗಿ ಮೇಲೆತ್ತಿ ಅದರ ತುದಿಗೆ ಒಂದು ಬೆಂಕಿಯ ಕಿಡಿ ತಾಗಿಸಿದೆ. ಛಳ್ ಎಂಬ ಶಬ್ದದೊಡನೆ ಸಣ್ಣ ಸ್ಫೋಟವಾಯಿತು. ಆ ಗಾಜಿನ ಭರಣಿಯ ಕತ್ತು ನನ್ನ ಕೈಯಲ್ಲಿತ್ತು. ಮಿಕ್ಕೆಲ್ಲವೂ ಚೂರಾಗಿ ಪ್ರಯೋಗಾಲಯದ ತುಂಬ ಹರಡಿತ್ತು. (ಸದ್ಯ, ಆ ಭರಣಿಯನ್ನು ನಾನು ನನ್ನ ಎದೆ ಮಟ್ಟಕ್ಕೆ ಹಿಡಿದಿದ್ದೆ; ಸ್ವಲ್ಪ ಎತ್ತರಕ್ಕೆ ಹಿಡಿದಿದ್ದರೆ?) ಬಳೆಯ ರೂಪದಲ್ಲಿದ್ದ ಆ ಗಾಜಿನ ಭರಣಿಯ ಕತ್ತು ನನ್ನನ್ನೇ ಅಣಕವಾಡುವಂತೆ ಇತ್ತು.

ಪ್ರಯೋಗ ಹೇಗಾಯಿತು ಮತ್ತು ಯಾಕೆ ಹೀಗಾಯಿತೆಂದು ಚರ್ಚಿಸುತ್ತಾ ನಾವು ಅಲ್ಲಿಂದ ಹೊರಟೆವು. ನನ್ನ ಕಾಲುಗಳಲ್ಲಿ ಸ್ವಲ್ಪ ನಡುಕ. ನಾನು ಭಯ ಮತ್ತು ಗರ್ವಗಳನ್ನು ಒಟ್ಟೊಟ್ಟಿಗೇ ಅನುಭವಿಸುತ್ತಿದ್ದೆ. ನನ್ನ ಸಿದ್ಧಾಂತವನ್ನು ಪ್ರಯೋಗದ ಮೂಲಕ ವಿಶದಪಡಿಸಿದ್ದಕ್ಕೆ ಮತ್ತು ಸೃಷ್ಟಿಯ ಶಕ್ತಿಯ ರಭಸವನ್ನು ನನ್ನ ಕೈಯಲ್ಲಿ ಕಂಡಿದ್ದಕ್ಕೆ. ಅದು ಹೈಡ್ರೋಜನ್ ಆಗಿತ್ತು. ಅದೇ. ಅದೇ. ಅದೇ ನಮ್ಮ ಸೂರ್ಯನಲ್ಲಿ ಮತ್ತು ನಕ್ಷತ್ರಗಳಲ್ಲಿ ಸುಟ್ಟು ನಮಗೆ ಬೆಳಕನ್ನು ನೀಡುತ್ತಿರುವ ಧಾತು ಮತ್ತು ಸಾಂದ್ರೀಕೃತವಾಗಿ ನಮ್ಮ ವಿಶ್ವದಲ್ಲೆಲ್ಲ ಮೌನವಾಗಿ ವ್ಯಾಪಿಸಿದ ಧಾತು.

*(ಮುಂದುವರಿಯುವುದು)*


ಮೂಲ : **ಪ್ರಿಮೋ ಲೆವಿ,** ಇಟಲಿ. ಅನುವಾದ : **ಶಶಿಧರ ಡೋಂಗ್ರೆ**
ಮೈಸೂರು – ೫೭೦ ೦೦೦
email : msdongre@yahoo.com


**ಕಾಲ – ದೇಶ**

ವರ್ತಮಾನ ಜಗತ್ತಿನ
ಅನೇಕ ಭಾಗಗಳಲ್ಲಿ
ವಿಜೃಂಭಿಸುತ್ತಿದೆ
ಹಿಂಸೆ, ದೌರ್ಜನ್ಯ!
ಆದರೆ ಕಾಲ ಅನಂತವಾಗಿದೆ;
ಲೋಕ ವಿಶಾಲವಾಗಿದೆ!

**ಸಿಪಿಕೆ**
ಮೈಸೂರು

# ಕರ್ನಾಟಕದಲ್ಲಿ ಮೀಸಲಾತಿ ಮತ್ತು ಮಿಲ್ಲರ್ ಸಮಿತಿ ವರದಿ



**ಡಾ॥ ಟಿ. ಆರ್. ಚಂದ್ರಶೇಖರ**

ಪ್ರಸಿದ್ಧ ಇತಿಹಾಸಜ್ಞ ಎಸ್. ಚಂದ್ರಶೇಖರ್ ಹೇಳುವಂತೆ 'ಮಿಲ್ಲರ್ ಸಮಿತಿ ನೇಮಕಾತಿ, ಈ ಕುರಿತ ವಿಚಾರದಲ್ಲಿ ಇಡೀ ಜಗತ್ತಿನಲ್ಲೇ ನಡೆದ ಮೊದಲ ವಿದ್ಯಮಾನವೆಂದು ಚರಿತ್ರೆಯಲ್ಲಿ ದಾಖಲಾಗಿದೆ.' ಮೈಸೂರು ರಾಜ ಸಂಸ್ಥಾನದ ಆಡಳಿತದಲ್ಲಿದ್ದ ಬ್ರಾಹ್ಮಣರ ಪ್ರಾಬಲ್ಯವನ್ನು ಕಡಿಮೆ ಮಾಡುವುದರಲ್ಲಿ ಸದರಿ ಸಮಿತಿಯು ಮಹತ್ವದ ಪಾತ್ರ ನಿರ್ವಹಿಸಿತು. ಅನೇಕರು ಗುರುತಿಸಿರುವಂತೆ ಇದು ಬ್ರಾಹ್ಮಣೇತರರು ಸ್ಥಾಪಿಸಿದ್ದ ಸಂಘಟನೆಯಾದ ಪ್ರಜಾಮಿತ್ರ ಮಂಡಳಿಯ ಫಲವಾಗಿತ್ತು. ಕಳೆದ ಶತಮಾನದ ಆದಿಭಾಗದಲ್ಲಿ ಸಂಸ್ಥಾನದ ಆಡಳಿತದಲ್ಲಿ ಬ್ರಾಹ್ಮಣರ ಪ್ರಾಬಲ್ಯದ ಬಗ್ಗೆ ನಮಗೆ ಅನೇಕ ಸೂಚಿಗಳು ದೊರೆಯುತ್ತವೆ. ಮೊದಲನೆಯದಾಗಿ ವಿವಿಧ ಸಮುದಾಯಗಳ ಸಾಕ್ಷರತಾ ಪ್ರಮಾಣ. ಎರಡನೆಯದು ಸರ್ಕಾರಿ ಹುದ್ದೆಗಳಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ಪ್ರಮಾಣ. ಮೈಸೂರು ಸಂಸ್ಥಾನದ ಒಟ್ಟು ಜನಸಂಖ್ಯೆಯಲ್ಲಿ ಶೇ. ೩.೫ ರಷ್ಟಿದ್ದ ಬ್ರಾಹ್ಮಣರು ಸರ್ಕಾರಿ ಹುದ್ದೆಗಳಲ್ಲಿ ಶೇ. ೭೦ರಷ್ಟು ಪ್ರಾತಿನಿಧ್ಯ ಪಡೆದಿದ್ದರು. ಅನೇಕ ಅಧ್ಯಯನಗಳು ತೋರಿಸುತ್ತಿರುವಂತೆ ೧೯೧೧ರಲ್ಲಿ ಬ್ರಾಹ್ಮಣರ ಸಾಕ್ಷರತಾ ಪ್ರಮಾಣ ಶೇ. ೭೦.೫ ರಷ್ಟಿದ್ದರೆ ಲಿಂಗಾಯತರ ಮತ್ತು ಒಕ್ಕಲಿಗರ ಸಾಕ್ಷರತಾ ಪ್ರಮಾಣ ಕ್ರಮವಾಗಿ ಶೇ. ೧೭.೧ ಮತ್ತು ಶೇ. ೬.೨ರಷ್ಟಿತ್ತು. ಇಂಗ್ಲಿಷ್ ಸಾಕ್ಷರತೆಯು ಬ್ರಾಹ್ಮಣರಲ್ಲಿ ಶೇ. ೧೫.೬ರಷ್ಟಿದ್ದರೆ ಲಿಂಗಾಯತರಲ್ಲಿ ಮತ್ತು ಒಕ್ಕಲಿಗರಲ್ಲಿ ಅದರ ಪ್ರಮಾಣ ಶೇ. ೧ಕ್ಕಿಂತ ಕಡಿಮೆಯಿತ್ತು (ಜೇಮ್ಸ್ ಮೇನರ್. ೧೯೭೭). ಹಿಂದುಳಿದ ವರ್ಗಗಳ ಸ್ಥಿತಿಯು ಇಷ್ಟು ಕೆಳಮಟ್ಟದಲ್ಲಿದ್ದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸ್ಥಿತಿಯು ಹೇಗಿದ್ದಿರಬಹುದೆಂದು ಊಹಿಸಬಹುದು. ಇದಲ್ಲದೆ ಸಾಂಸ್ಕೃತಿಕ ಲೋಕದಲ್ಲಿ ಬ್ರಾಹ್ಮಣರು ಚಾತುರ್ವರ್ಣ್ಯ ಪ್ರಣಾಳಿಕೆಯ ಮೂಲಕ ತಮ್ಮ ಶ್ರೇಷ್ಠತೆಯನ್ನು ವಿವಿಧ ರೀತಿಯಲ್ಲಿ ಪ್ರತಿಪಾದಿಸುತ್ತಿದ್ದರು.

ಈ ಬಗೆಯ ಸಾಮಾಜಿಕ ಅಸಮಾನತೆಯ ವಿರುದ್ಧ ಪ್ರತಿಭಟನೆ ೨೦ನೆಯ ಶತಮಾನದ ಆರಂಭದ ದಶಕಗಳಲ್ಲಿ ವ್ಯಕ್ತವಾಗತೊಡಗಿತು. ಬ್ರಿಟಿಷ್ ಆಡಳಿತವು ಆರಂಭಿಸಿದ್ದ ಶಿಕ್ಷಣ ವ್ಯವಸ್ಥೆಯಿಂದಾಗಿ ಹಿಂದುಳಿದ ವರ್ಗಗಳು ಶಿಕ್ಷಣಕ್ಕೆ ತೆರೆದುಕೊಳ್ಳತೊಡಗಿದವು. ಎಲ್ಲ ಕ್ಷೇತ್ರಗಳಲ್ಲಿ ಬ್ರಾಹ್ಮಣರು ಸಾಧಿಸಿಕೊಂಡಿದ್ದ ಏಕಸ್ವಾಮ್ಯದ ಬಗ್ಗೆ ಹಿಂದುಳಿದ ವರ್ಗಗಳಲ್ಲಿ ಅಸಮಾಧಾನವನ್ನು ಉಂಟುಮಾಡುತ್ತಿತ್ತು. ಈ ಅಸಮಾಧಾನ ಮತ್ತು ಪ್ರತಿಭಟನೆಯ ಫಲವಾಗಿ ೧೯೧೬ರಲ್ಲಿ ಮೈಸೂರಿನಲ್ಲಿ ಹಿಂದುಳಿದ ವರ್ಗಗಳು 'ಪ್ರಜಾಮಿತ್ರ ಮಂಡಳಿ' ಎಂಬ ಸಂಘಟನೆಯನ್ನು ಕಟ್ಟಿ ಹಿಂದುಳಿದ ವರ್ಗಗಳ ಹಿತಾಸಕ್ತಿಗಳ ರಕ್ಷಣೆ ಮತ್ತು ಪೋಷಣೆಗಾಗಿ ಹೋರಾಟವನ್ನು ಆರಂಭಿಸಿತು.

ಹಿಂದುಳಿದ ವರ್ಗಗಳ ಮುಖಂಡರಾಗಿದ್ದ ಎಂ. ಬಸವಯ್ಯ, ಎಚ್. ಚೆನ್ನಯ್ಯ, ಕಲಾಮಿ ಮುಂತಾದವರು ಮಹಾರಾಜರಲ್ಲಿ ಬ್ರಾಹ್ಮಣರ ಪ್ರಾಬಲ್ಯದ ಬಗ್ಗೆ ಮತ್ತು ಹಿಂದುಳಿದ ವರ್ಗಕ್ಕೆ ಹೆಚ್ಚು ಅವಕಾಶ ನೀಡುವಂತೆ ಮನವಿಯನ್ನು ಸಲ್ಲಿಸತೊಡಗಿದವು. ತಾವೇ ಸ್ವತಃ ಬ್ರಾಹ್ಮಣೇತರರಾಗಿದ್ದ ಮಹಾರಾಜರು ಹಿಂದುಳಿದ ವರ್ಗಗಳ ಹಿತಾಸಕ್ತಿಗಳನ್ನು ರಕ್ಷಿಸುವುದರ ಪರವಾಗಿದ್ದರು. ಈ ಹಿನ್ನೆಲೆಯಲ್ಲಿ ಆಗಸ್ಟ್ ೨೩, ೧೯೧೮ರಲ್ಲಿ ಸಂಸ್ಥಾನದ ಮುಖ್ಯ ನ್ಯಾಯಾಧೀಶ ಲೆಸ್ಲಿ ಮಿಲ್ಲರ್ ಅವರ ಅಧ್ಯಕ್ಷತೆಯಲ್ಲಿ ಆರು ಜನರ ಸಮಿತಿಯೊಂದನ್ನು ರಚಿಸಿ ಸಂಸ್ಥಾನದ ಎಲ್ಲ ಸಮುದಾಯಗಳಿಗೆ ಸಮಾನ ಪ್ರಾತಿನಿಧ್ಯವನ್ನು ಆಡಳಿತ ಮತ್ತು ಸರ್ಕಾರಿ ಸೇವೆಯಲ್ಲಿ ನೀಡುವ ಬಗ್ಗೆ

ಕ್ರಮಗಳನ್ನು ಕೈಗೊಂಡು ಅಧ್ಯಯನ ನಡೆಸಿ ಶಿಫಾರಸ್ಸುಗಳನ್ನು ನೀಡುವಂತೆ ನೇಮಿಸಿದರು. ಆದರೆ ಸಂಸ್ಥಾನದಲ್ಲಿದ್ದ ಬ್ರಾಹ್ಮಣ ವರ್ಗವು ಇದನ್ನು ಪ್ರಬಲವಾಗಿ ವಿರೋಧಿಸಿತು. ಅಂದು ದಿವಾನರಾಗಿದ್ದ ಸರ್. ಎಂ. ವಿಶ್ವೇಶ್ವರಯ್ಯ ಅವರಿಗೆ ಮೀಸಲಾತಿ ಬಗ್ಗೆ ಒಪ್ಪಿಗೆಯಿರಲಿಲ್ಲ. ಮಹಾರಾಜರ ಕ್ರಮವನ್ನು ವಿರೋಧಿಸಿ ಅವರ ತಮ್ಮ ದಿವಾನ ಹುದ್ದೆಗೆ ರಾಜೀನಾಮೆ ಸಲ್ಲಿಸಿದರು. ಆದರೆ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಇದರಿಂದ ಹಿಂಜರಿಯದೆ ಸಮಿತಿಯನ್ನು ನೇಮಿಸಿದರು.

ಸಮಿತಿಯು ಸಾರ್ವಜನಿಕ ಸೇವೆಯಲ್ಲಿನ ಬ್ರಾಹ್ಮಣರ ಪ್ರಾಬಲ್ಯದ ಬಗ್ಗೆ ಅಧ್ಯಯನ ನಡೆಸಿ ತನ್ನ ವರದಿಯನ್ನು ೧೯೧೯ರಲ್ಲಿ ಮಹಾರಾಜರಿಗೆ ಸಲ್ಲಿಸಿತು. ಸಮಿತಿಯ ಮುಂದಿನ ಏಳು ವರ್ಷಗಳಲ್ಲಿ ಸರ್ಕಾರಿ ಸೇವೆಯಲ್ಲಿ ಬ್ರಾಹ್ಮಣರ ಪ್ರಮಾಣವು ಶೇ. ೫೦ ಮೀರಬಾರದು ಮತ್ತು ಕೆಳಹಂತದ ಹುದ್ದೆಗಳಲ್ಲಿ ಬ್ರಾಹ್ಮಣರ ಪ್ರಮಾಣವು ಒಂದನೆಯ ಮೂರರಷ್ಟಿರಬೇಕು ಎಂದು ಸಮಿತಿಯು ತನ್ನ ಶಿಫಾರಸ್ಸು ನೀಡಿದುದಲ್ಲದೆ ಸರ್ಕಾರಿ ಹುದ್ದೆಗಳಿಗೆ ನೇಮಕಾತಿ ಮಾಡುವಾಗ ಹಿಂದುಳಿದ ವರ್ಗಗಳಲ್ಲಿ ಅರ್ಹರು ದೊರೆತರೆ ಅವರನ್ನು ಆದ್ಯತೆಯ ಮೇಲೆ ನೇಮಕ ಮಾಡಿಕೊಳ್ಳಬೇಕು ಎಂದು ಶಿಫಾರಸ್ಸು ಮಾಡಿತು.

ಬ್ರಾಹ್ಮಣ ವರ್ಗವು ಇದಕ್ಕೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿತು. ಅಂದು ಪತ್ರಿಕಾ ಮಾಧ್ಯಮವು ಸರಿಸುಮಾರು ಬ್ರಾಹ್ಮಣರ ವಶದಲ್ಲಿತ್ತು. ಮೈಸೂರಿನ ಎಂ. ವೆಂಕಟಕೃಷ್ಣಯ್ಯ, ತಿ. ತಾ. ಶರ್ಮ, ಪಿ. ಆರ್. ರಾಮಯ್ಯ, ಡಿವಿಜಿ, ವೀರಕೇಸರಿ ಸೀತಾರಾಮಶಾಸ್ತ್ರಿ ಮುಂತಾದವರು ಪತ್ರಿಕೆಗಳಲ್ಲಿ ಮೀಸಲಾತಿ ವಿರುದ್ಧ ಲೇಖನಗಳನ್ನು ಪ್ರಕಟಿಸಿದರು. ಡಿವಿಜಿ ಅವರು ಮಿಲ್ಲರ್ ಸಮಿತಿ ವರದಿಯ ಬಗ್ಗೆ ಹೀಗೆ ಬರೆದರು. 'ಮೈಸೂರಿನ ದಿವಾನರು–೪' (೧೯೭೧, ಪು: ೨೦೮) ಎಂಬ ಕೃತಿಯಲ್ಲಿನ 'ರಾಜಸೇವಾಧುರೀಣ ಸರದಾರ್ ಕಾಂತರಾಜ ಅರಸ್' ಎಂಬ ಅಧ್ಯಾಯದಲ್ಲಿ ಮಿಲ್ಲರ್ ಸಮಿತಿ ವರದಿಯ ಬಗ್ಗೆ ತಮ್ಮ ಅಸಮಾಧಾನವನ್ನು ಹೀಗೆ ಹೊರಹಾಕಿದ್ದಾರೆ.

'-------- ಇದು (ಮಿಲ್ಲರ್ ಸಮಿತಿ : ಲೇಖಕ) ಪ್ರಜಾಮಿತ್ರ ಮಂಡಳಿಯ ಫಲಿತಾಂಶ. ಈ ಮಂಡಳಿಗೆ ಕಾಂತರಾಜ ಅರಸರ ಸಹಾನುಭೂತಿ ಇತ್ತೆಂದು ಬಹುಮಂದಿ ನಂಬಿದ್ದಾರೆ. ಮಿಲ್ಲರ್ ಕಮಿಟಿ ರಿಪೋರ್ಟ್ ಮಾಡಿರಲಿ, ಮಾಡಿಲ್ಲದೆ ಹೋಗಲಿ ಅದರ ಶಿಫಾರಸ್ಸುಗಳನ್ನು ಸರ್ಕಾರ ನಡೆಸಿಕೊಡುವುದಾದರೆ ನಡೆಸಲಿ. ಆದರೆ ಆ ರಿಪೋರ್ಟನ್ನು ಪ್ರಕಟಿಸುವುದು ಅವಶ್ಯಕತೆಯಿಲ್ಲ. ಈ ಪ್ರಕಟಣೆಯಿಂದ ಕೇಡು ಉಂಟು. ಅದು ದೇಶದಲ್ಲಿ ಜಾತಿ ಮಾತ್ಸರ್ಯವನ್ನು, ಕೋಮುವಾರು ವೈಷಮ್ಯವನ್ನು ಹೆಚ್ಚು ಮಾಡೀತು – ಎಂದು ಸರ್ಕಾರದಲ್ಲಿ ಕೆಲಮಂದಿ ಪ್ರಮುಖರು ಅಭಿಪ್ರಾಯಪಟ್ಟರು. ಕಾಂತರಾಜ ಅರಸ ಅವರು ಆ ವರದಿ ಪ್ರಕಟವಾಗಲೇಬೇಕೆಂದು, ಅದಕ್ಕೆ ತಮ್ಮ ಸಮ್ಮತಿಯುಂಟೆಂದು ಪಟ್ಟು ಹಿಡಿದರಂತೆ. ಮಹಾರಾಜರಾದರೋ ಮುಖ್ಯಮಂತ್ರಿಗಳ ಶಿಫಾರಸ್ಸನ್ನು ಅಂಗೀಕರಿಸುವ ಸಂಪ್ರದಾಯದಲ್ಲಿ ಶ್ರದ್ಧೆ ಉಳ್ಳವರು. ಹಾಗಾಗಿ ಮಿಲ್ಲರ್ ವರದಿಯು ಪ್ರಕಟವಾಗಿ ಸರ್ಕಾರದಿಂದ ಅಂಗೀಕೃತವಾಯಿತು'. ಇಷ್ಟು ಹೇಳಿದ ಡಿ. ವಿ. ಗುಂಡಪ್ಪ ಅವರು 'ಇದು ವಿವಾದದ ವಿಷಯ. ಇದನ್ನು ಬೆಳೆಸುವುದು ಯಾರಿಗೂ ಹಿತವಲ್ಲ. ಅದನ್ನು ಅಷ್ಟಕ್ಕೆ ಬಿಡೋಣ' ಎಂದು ತಮ್ಮ ಮಿಲ್ಲರ್ ಸಮಿತಿ ವರದಿಯ ಬಗೆಗಿನ ಟಿಪ್ಪಣಿಯನ್ನು ಮುಗಿಸುತ್ತಾರೆ. ಇಡೀ ಬ್ರಾಹ್ಮಣ ವರ್ಗವು ಜಾತಿ ವ್ಯವಸ್ಥೆಯು ಶ್ರಮ ವಿಭಜನೆಯ ಆಧಾರದಲ್ಲಿ ರಚನೆಯಾಗಿದೆ. ಜ್ಞಾನಕ್ಕೆ ಬ್ರಾಹ್ಮಣರು ವಾರಸುದಾರರಾಗಿದ್ದರೆ ಬ್ರಾಹ್ಮಣೇತರರು ದೈಹಿಕ ಶ್ರಮಕ್ಕೆ ಬಾಧ್ಯಸ್ಥರಾಗಿದ್ದಾರೆ. ಇದು ನೈಸರ್ಗಿಕ ನಿಯಮ ಎಂದು ಅವರು ವಾದಿಸುತ್ತಿದ್ದರು. ಮೈಸೂರು




ಪ್ರತಿನಿಧಿ ಸಭೆಯಲ್ಲಿ ಓರ್ವ ಬ್ರಾಹ್ಮಣ ಸದಸ್ಯರು ಮಿಲ್ಲರ್ ಸಮಿತಿ ವರದಿಯ ಶಿಫಾರಸ್ಸುಗಳ ಬಗ್ಗೆ ಹೀಗೆ ತಮ್ಮ ವಿರೋಧವನ್ನು ಮಂಡಿಸಿದ್ದರು. 'ನಾನು ಬ್ರಾಹ್ಮಣರ ಹೊಟ್ಟೆಪಾಡಿನ ಬಗ್ಗೆ ಏನನ್ನೂ ಕೇಳುವುದಿಲ್ಲ. ಇದು ಬೇರೆಯದೇ ಪ್ರಶ್ನೆ. ಸಾರ್ವಜನಿಕ ಸೇವೆಯಲ್ಲಿ ದಕ್ಷತೆಯಿರಬೇಕು ಎಂಬುದು ನಮ್ಮ ಏಕೈಕ ಕಾಳಜಿ. ಕೋಮುವಾರು ಆಧಾರದ ಮೇಲೆ ನೇಮಕಾತಿ ನಡೆಸಲು ಸಾರ್ವಜನಿಕ ಸೇವೆ ಎನ್ನುವುದು ಪ್ರಾತಿನಿಧಿಕ ಸಂಸ್ಥೆಯಲ್ಲ. ಶುಕ್ರನೀತಿಯ ಪ್ರಕಾರ ಮತ್ತು ಪಶ್ಚಿಮ ದೇಶಗಳಲ್ಲಿ ಆಚರಣೆಯಲ್ಲಿರುವಂತೆ ಯಾರೇ ಆಗಲಿ ವಿದ್ಯಾರ್ಹತೆಯಿರುವವರು ಸರ್ಕಾರಿ ಸೇವೆಯನ್ನು ಸಲ್ಲಿಸಲು ಅರ್ಹರಾಗಿರುತ್ತಾರೆ. ಯಾವುದೇ ದೇಶದಲ್ಲಿ, ಯಾವುದೇ ಸಂದರ್ಭದಲ್ಲಿ ಜಗತ್ತಿನ ಚರಿತ್ರೆಯಲ್ಲಿ ಸರ್ಕಾರಿ ಸೇವೆಗೆ ಕೋಮುವಾರು ಆಧಾರದಲ್ಲಿ ನೇಮಕಾತಿ ನಡೆಸಲು ಅದನ್ನು ಪ್ರಾತಿನಿಧಿಕ ಸಂಸ್ಥೆಯಾಗಿ ಪರಿಗಣಿಸಿಲ್ಲ'.

ಬ್ರಾಹ್ಮಣರ ವಶದಲ್ಲಿದ್ದ ಪತ್ರಿಕೆಗಳೆಲ್ಲವೂ ದಕ್ಷತೆ ಮತ್ತು ಪ್ರತಿಭೆಗಳನ್ನು ಆಧಾರ ಮಾಡಿಕೊಂಡು ಅಪ್ರತ್ಯಕ್ಷವಾಗಿ ಮೀಸಲಾತಿ ಮೂಲಕ ಸದ್ಯದಲ್ಲಿ ಮತ್ತು ಮುಂದೆ ಸರ್ಕಾರಿ ಹುದ್ದೆಗಳನ್ನು ಅಲಂಕರಿಸುವವರು 'ಅದಕ್ಷರು' ಮತ್ತು 'ಅಜ್ಞಾನಿಗಳು' ಆಗಿರುತ್ತಾರೆ ಎಂಬ ಅರ್ಥ ಬರುವ ರೀತಿಯಲ್ಲಿಯೇ ವರದಿ, ವಿಶ್ಲೇಷಣೆ, ಲೇಖನ ಪ್ರಕಟಿಸುತ್ತಿದ್ದವು. ಇಲ್ಲಿನ ವಿಭಜನೆಯು ಕೇವಲ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಎಂಬುದಷ್ಟೇ ಆಗಿರಲಿಲ್ಲ. ಅದು ಕ್ರಮವಾಗಿ ಸಮರ್ಥರು–ಅಸಮರ್ಥರು ಎನ್ನುವ ಭಿನ್ನತೆಯೂ ಅಲ್ಲಿತ್ತು.

ಮಿಲ್ಲರ್ ಸಮಿತಿಯ ವರದಿಯ ಬಗ್ಗೆ ವಿಶೇಷ ಅಧ್ಯಯನ ನಡೆಸಿದ ಜೇಮ್ಸ್ ಮೇನರ್ (೧೯೭೭), ಎಸ್. ಚಂದ್ರಶೇಖರ್ (೧೯೭೮), ಸುರೇಂದ್ರರಾವ್ (೨೦೧೬), ಬೆಜ್ನೋರ್ ಹೆಟ್ನೆ (೧೯೭೮), ಜಿ. ತಿಮ್ಮಯ್ಯ (೧೯೯೩) ಮುಂತಾದವರು ಮಿಲ್ಲರ್ ಸಮಿತಿ ವರದಿಯ ಬಗ್ಗೆ ಸಂಸ್ಥಾನದ ಬ್ರಾಹ್ಮಣ ವರ್ಗ ಹೇಗೆ ತಮ್ಮ ಒಳಗಿನ ಭಿನ್ನಾಭಿಪ್ರಾಯವನ್ನು ಬದಿಗಿಟ್ಟು ವಿರೋಧಿಸಿದರು ಎಂಬುದರ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ. ಮಿಲ್ಲರ್ ಸಮಿತಿಯ ಸದಸ್ಯರಾಗಿದ್ದ ಮತ್ತು ವರದಿಗೆ ತಮ್ಮ ಭಿನ್ನಮತವನ್ನು ದಾಖಲಿಸಿದ್ದ ರಾವ್ ಬಹದ್ದೂರ್, ಎಂ. ಸಿ. ರಂಗ ಅಯ್ಯಂಗಾರ್ 'ಸಂಸ್ಥಾನವು ತೀವ್ರ ಅಭಿವೃದ್ಧಿ ಸಾಧಿಸಿಕೊಳ್ಳುತ್ತಿರುವುದರಿಂದ ಮುಂದುವರಿದ ಮತ್ತು ಹಿಂದುಳಿದ ವರ್ಗಗಳ ನಡುವಿನ ಅಂತರ ಕಡಿಮೆಯಾಗುತ್ತಿದೆ' ಎಂದು ವಾದ ಮಂಡಿಸಿದ್ದರು. ಆದರೆ ಇವರ ಮಾತು ಎಷ್ಟೊಂದು ಸುಳ್ಳಾಗಿತ್ತು ಎಂಬುದು ಸಂಸ್ಥಾನದಲ್ಲಿ ವಿವಿಧ ಸಮುದಾಯಗಳ ಸಾಕ್ಷರತಾ ಪ್ರಮಾಣದ ಬೆಳವಣಿಗೆಯನ್ನು ನೋಡಿದರೆ ತಿಳಿಯುತ್ತದೆ. ಬ್ರಾಹ್ಮಣರ ಸಾಕ್ಷರತೆಯು ೧೯೪೧ರಲ್ಲಿ ಶೇ. ೮೭.೧ರಷ್ಟಿದ್ದರೆ ಕರ್ನಾಟಕದ ಒಟ್ಟು ಸಾಕ್ಷರತೆ ೨೦೧೧ರಲ್ಲಿ ಶೇ. ೭೫.೩೬ರಷ್ಟಿತ್ತು. ಇಂದಿಗೂ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ನಡುವೆ ಅಸಮಾನತೆಯು ತೀವ್ರ ರೀತಿಯಲ್ಲಿ ಮುಂದುವರಿದಿರುವಾಗ ಅಂದು ನೂರು ವರ್ಷಗಳ ಹಿಂದೆ ಇದು ಹೇಗಿದ್ದಿರಬೇಡ?

**ಮಿಲ್ಲರ್ ಸಮಿತಿ ವರದಿಯ ಅನುಷ್ಠಾನ**

ಮಿಲ್ಲರ್ ಸಮಿತಿಯು ತನ್ನ ವರದಿಯನ್ನು ಮತ್ತು ಶಿಫಾರಸ್ಸುಗಳನ್ನು ೧೯೧೯ರಲ್ಲಿ ಮಹಾರಾಜರಿಗೆ ಸಲ್ಲಿಸಿತು. ಈ ವರದಿಯನ್ನು ಅಧಿಕಾರಿಗಳ ಅಭಿಪ್ರಾಯವನ್ನು ತಿಳಿದುಕೊಳ್ಳುವುದಕ್ಕಾಗಿ ಸರ್ಕಾರದಿಂದ ಎಲ್ಲ ಇಲಾಖೆಗಳ ಮುಖ್ಯಸ್ಥರಿಗೆ ಕಳುಹಿಸಿಕೊಡಲಾಗುತ್ತದೆ. ಆದರೆ ಎಲ್ಲ ಇಲಾಖೆಗಳ ಮುಖ್ಯಸ್ಥರೆಲ್ಲ ಬ್ರಾಹ್ಮಣರಾಗಿದ್ದರು. ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜುಕೇಶನ್ ಸಿ. ಆರ್. ರೆಡ್ಡಿ ಅವರನ್ನು ಬಿಟ್ಟರೆ ಉಳಿದೆಲ್ಲ ಸರ್ಕಾರಿ ಅಧಿಕಾರಿಗಳು ಮಿಲ್ಲರ್ ಸಮಿತಿ ವರದಿಗೆ ತಮ್ಮ ವಿರೋಧವನ್ನು ಮಂಡಿಸಿದರು. ಸಿ. ಆರ್. ರೆಡ್ಡಿ ಅವರು

ಮೈಸೂರು ಸಂಸ್ಥಾನದಲ್ಲಿ ೧೯೧೬ರ ನಂತರ ಆರಂಭವಾಗಿದ್ದ ಬ್ರಾಹ್ಮಣೇತರ ಚಳುವಳಿಯ ಮಾರ್ಗದರ್ಶಕರಾಗಿದ್ದರು. ಈ ವರದಿಯ ಬಗ್ಗೆ ಮೈಸೂರು ಪ್ರಾತಿನಿಧ್ಯ ಸಭೆಯಲ್ಲಿ ಚರ್ಚೆ ನಡೆದಿದ್ದಾಗ ಅದರ ಸದಸ್ಯರಾಗಿದ್ದ ಕೆಲಡೆ ಟಿ. ಶೇಷಯ್ಯ ಅವರು 'ನಾನು ಬ್ರಾಹ್ಮಣರ ಹೊಟ್ಟೆಪಾಡಿಗಾಗಿ ಏನನ್ನೂ ಕೇಳುವುದಿಲ್ಲ. ಅದು ಬೇರೆ ಪ್ರಶ್ನೆ. ಸಾರ್ವಜನಿಕ ಸೇವೆಯಲ್ಲಿ ದಕ್ಷತೆ ಇರಬೇಕು ಎಂಬುದೊಂದೆ ನಮ್ಮ ಕಾಳಜಿ. ಕೋಮುವಾರು ಆಧಾರದ ಮೇಲೆ ನೇಮಕಾತಿ ಮಾಡಲು ಅದೇನು ಪ್ರಾತಿನಿಧಿಕ ಸಂಸ್ಥೆಯಲ್ಲ. ಶುಕ್ರನೀತಿಯ ಪ್ರಕಾರ ಮತ್ತು ಪಶ್ಚಿಮ ದೇಶಗಳಲ್ಲಿ ಆಚರಣೆಯಲ್ಲಿರುವಂತೆ ಯಾರೇ ಆಗಲಿ ವಿದ್ಯಾರ್ಹತೆ ಒರಿವವರು ಸಕಾರಿ ಸೇವೆಯಲ್ಲಿ ಸೇರಲು ಅರ್ಹರಾಗಿರುತ್ತಾರೆ. ಜಗತ್ತಿನ ಚರಿತ್ರೆಯ ಯಾವುದೇ ಸಂದರ್ಭದಲ್ಲಿ ಯಾವುದೇ ದೇಶದಲ್ಲಿ ಸರ್ಕಾರಿ ಸೇವೆಗೆ ಕೋಮುವಾರು ಆಧಾರದಲ್ಲಿ ನೇಮಕಾತಿ ನಡೆಸಲು ಅದನ್ನು ಪ್ರಾತಿನಿಧಿಕ ಸಂಸ್ಥೆಯಾಗಿ ಪರಿಗಣಿಸಿಲ್ಲ' ಎಂದು ಮಿಲ್ಲರ್ ಸಮಿತಿಯ ಮೂಲ ಸಿದ್ಧಾಂತವನ್ನೇ ಪ್ರಶ್ನೆ ಮಾಡಿದರು. ಮಿಲ್ಲರ್ ಸಮಿತಿ ನೇಮಕಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ 'ದಿ ಕಮಿಟಿ ಅಪಾಯಿಂಟ್‌ಡ್ ಟು ಕನಿಸಿಡರ್ ಸ್ಟೆಪ್ಸ್ ನೆಸಸರಿ ಫಾರ್ ದಿ ಅಡಿಕ್ವೇಟ್ ರಿಪ್ರೆಸೆಮಟೇಶನ್ ಆಫ್ ಕಮ್ಯುನಿಟಿಸ್ ಇನ್ ದಿ ಪಬ್ಲಿಕ್ ಸರ್ವಿಸಸ್'. ಅಂದರೆ ಮೀಸಲಾತಿ ಹಿಂದಿದ್ದ ತಾತ್ವಿಕ ಸಂಗತಿಯೆಂದರೆ ಸಂಸ್ಥಾನದ ಎಲ್ಲ ಸಮುದಾಯಗಳಿಗೂ ಸಮಾನವಾದ ಪ್ರಾತಿನಿಧ್ಯವನ್ನು ನೀಡುವುದು.

ಏನೆಲ್ಲ ವಿರೋಧ ಮತ್ತು ಅಡ್ಡಿ–ಆತಂಕಗಳು ಬಂದರೂ, ಎಂ. ವಿಶ್ವೇಶ್ವರಯ್ಯರಂತಹ ಪ್ರಸಿದ್ಧ ಅಧಿಕಾರಿ ರಾಜೀನಾಮೆ ನೀಡಿದರೂ ಸಂಸ್ಥಾನದ ಇಡೀ ಬ್ರಾಹ್ಮಣ ವರ್ಗ ವಿರೋಧಿಸಿಯೂ ಹಿಂಜರಿಯದೆ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮಿಲ್ಲರ್ ಸಮಿತಿ ವರದಿಯ ಶಿಫಾರಸ್ಸುಗಳನ್ನು ೧೯೨೧ರಲ್ಲಿ ಜಾರಿಗೊಳಿಸಿದರು.

ಮಿಲ್ಲರ್ ಸಮಿತಿಯ ಅನುಷ್ಠಾನದ ನಂತರದ ವರ್ಷಗಳಲ್ಲಿ ಸಾರ್ವಜನಿಕ ಸೇವೆಗಳಲ್ಲಿ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರ ನಡುವಿನ ಅನುಪಾತ ತೀವ್ರ ಬದಲಾಗಲಿಲ್ಲ. ಆದರೆ ೧೯೩೦ರ ನಂತರ ಅದರಲ್ಲಿ ಸಾಕಷ್ಟು ಬದಲಾವಣೆ ಯಾಯಿತು. ಉದಾಹರಣೆಗೆ ೧೯೧೮ರಿಂದ ೧೯೩೬ರವರೆಗೆ ಸಂಸ್ಥಾನದ ಗೆಜೆಟೆಡ್ ಹುದ್ದೆಗಳಲ್ಲಿ ಬ್ರಾಹ್ಮಣರ ಪ್ರಮಾಣ ಸರಿಸುಮಾರು ಶೇ. ೬೦ಕ್ಕಿಂತ ಅಧಿಕವಾಗಿದ್ದರೆ ನಾನ್ ಗೆಜೆಟೆಡ್ ಹುದ್ದೆಗಳಲ್ಲಿ ಅವರ ಪ್ರಮಾಣ ಶೇ. ೫೦ಕ್ಕಿಂತ ಅಧಿಕವಾಗಿತ್ತು. ಅದರ ನಂತರ ಬ್ರಾಹ್ಮಣರ ಪ್ರಮಾಣ ಕಡಿಮೆಯಾಗಿ ೧೯೪೭ರಲ್ಲಿ ಬ್ರಾಹ್ಮಣರ ಪ್ರಮಾಣ ಗೆಜೆಟೆಡ್ ಹುದ್ದೆಗಳಲ್ಲಿ ಶೇ. ೪೫ರಷ್ಟಾದರೆ ನಾನ್ ಗೆಜೆಟೆಡ್ ಹುದ್ದೆಗಳಲ್ಲಿ ಅವರ ಪ್ರಮಾಣ ಶೇ. ೩೭ರಷ್ಟಾಯಿತು. ಇಷ್ಟಾದರೂ ಜನಸಂಖ್ಯೆಯಲ್ಲಿ ಶೇ. ೪ಕ್ಕಿಂತ ಕಡಿಮೆ ಇರುವ ಬ್ರಾಹ್ಮಣ ವರ್ಗವು ೧೯೫೬ರಲ್ಲಿ ಶೇ. ೩೦ಕ್ಕಿಂತ ಅಧಿಕ ಪ್ರಮಾಣದಲ್ಲಿ ಸರ್ಕಾರಿ ಉದ್ಯೋಗಗಳಲ್ಲಿದ್ದರು.

ಮಿಲ್ಲರ್ ಸಮಿತಿಯ ವರದಿಯ ಶಿಫಾರಸ್ಸುಗಳಲ್ಲಿ ಅನೇಕ ಮಿತಿಗಳಿದ್ದವು. ಮೊದಲನೆಯದಾಗಿ ವರದಿಯು ಮಹಿಳೆಯರ ಉದ್ಯೋಗದ ಬಗ್ಗೆ ಅಥವಾ ಲಿಂಗ ತಾರತಮ್ಯದ ಬಗ್ಗೆ ಮಾತನಾಡುವುದಿಲ್ಲ. ಅದೇ ರೀತಿಯಲ್ಲಿ ಪರಿಶಿಷ್ಟರ ಶಿಕ್ಷಣದ ಬಗ್ಗೆ ಮತ್ತು ಉದ್ಯೋಗದ ಬಗ್ಗೆ ಮಾತನಾಡಿದರೂ ಖಚಿತವಾದ ಶಿಫಾರಸ್ಸುಗಳನ್ನು ನೀಡುವುದು ಅದಕ್ಕಾಗಲಿಲ್ಲ. ಮೂರನೆಯದಾಗಿ ಬ್ರಾಹ್ಮಣೇತರರ ಹೋರಾಟದಲ್ಲಿ ಸಂಸ್ಥಾನದ ಪ್ರಬಲ ಜಾತಿಗಳಾದ ಲಿಂಗಾಯತರು ಮತ್ತು ಒಕ್ಕಲಿಗರೇ ವಿನಾ ಉಳಿದ ಸಮುದಾಯಗಳಿರಲಿಲ್ಲ. ನಾಲ್ಕನೆಯದಾಗಿ ಮದರಾಸಿನಲ್ಲಿ ಜಸ್ಟೀಸ್ ಪಾರ್ಟಿ ಅಥವಾ ಪೆರಿಯರ್ ನೇತೃತ್ವದಲ್ಲಿ ರೂಪಿಸಿದ್ದ ಅವೈದಿಕ ಸಿದ್ಧಾಂತದಂತಹ ಒಂದು ಸಿದ್ಧಾಂತವನ್ನು ರೂಪಿಸುವುದು ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರ ಸಂಘಟನೆಗೆ ಸಾಧ್ಯವಾಗಲಿಲ್ಲ. ಕೊನೆಯದಾಗಿ ಬ್ರಾಹ್ಮಣೇತರರ ಚಳುವಳಿಯ ನೇತೃತ್ವ ವಹಿಸಿದ್ದ ಪ್ರಜಾಮಿತ್ರ ಮಂಡಳಿಯು ೧೯೨೫ರ ನಂತರ ಒಡೆದುಹೋಯಿತು.

ನಮ್ಮ ಸಮಾಜದಲ್ಲಿ ಹಿಂದುಳಿದ ವರ್ಗಗಳು ಮತ್ತು ಪರಿಶಿಷ್ಟ ಸಮುದಾಯಗಳಿಗೆ ಮೀಸಲಾತಿ ನೀಡುವುದಕ್ಕೆ ಸಂಬಂಧಿಸಿದಂತೆ ೨೦ನೆಯ ಶತಮಾನದಲ್ಲಿ ಯಾವ ಬಗೆಯ ವಿರೋಧ ಮತ್ತು ಯಾವ ವರ್ಗದಿಂದ ಬಂದಿತ್ತೋ ಅದೇ ಬಗೆಯ ವಿರೋಧ – ಅದೇ ಬಗೆಯ ವರ್ಗಗಳಿಂದ ೨೧ನೆಯ ಶತಮಾನದ ಆರಂಭದ ದಶಕಗಳಲ್ಲಿ ಕಂಡುಬರುತ್ತಿರುವುದನ್ನು ಕಾಣಬಹುದು. ಪ್ರಸಿದ್ಧ ಚಿಂತಕ ಜಿ. ರಾಮಕೃಷ್ಣ ಅವರು ತಮ್ಮ ಅನುಭವದ ಮೂಲಕ ಸಮಾಜದಲ್ಲಿ ಮೀಸಲಾತಿಗೆ ಎಂತಹ ವಿರೋಧವಿತ್ತು ಎಂಬುದನ್ನು ಹೀಗೆ ದಾಖಲಿಸಿದ್ದಾರೆ. '೧೯೪೭–೪೮ರಲ್ಲಿ ನಾನು ಮಾಗಡಿ ತಾಲ್ಲೂಕಿನ ಕೆಂಪಸಾಗರದಲ್ಲಿ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿ. ಎಲ್ಲ ವಿದ್ಯಾರ್ಥಿಗಳು ಹಳ್ಳಿಯವರೆ. ಅವರಲ್ಲಿ ಹಲವರು ಅವರ ಕುಟುಂಬಗಳಲ್ಲಿ ಮೊದಲ ಪೀಳಿಗೆಯ ಅಕ್ಷರಸ್ಥರು. ವಿದ್ಯಾಭ್ಯಾಸ ಪಡೆಯಬೇಕೆಂಬ ಹಂಬಲವುಳ್ಳವರು. ನಮ್ಮ ಮುಖ್ಯೋಪಾಧ್ಯಾಯರು ಮಾಗಡಿ ಬಳಿಯ ತಿರುಮಲೆಯಿಂದ ಬರುತ್ತಿದ್ದರು. ಒಳ್ಳೆಯ ಅಧ್ಯಾಪಕರು. ಆದರೆ ವಿದ್ಯಾರ್ಥಿಗಳನ್ನು ಯಾವಾಗಲೂ ಹಂಗಿಸುತ್ತಿದ್ದರು. ಅವರ ಪಾಠಕ್ಕಿಂತಲೂ ನನಗೆ ಅವರ ಕುಚೋದ್ಯದ ಮಾತುಗಳೆ ಹೆಚ್ಚು ನೆನಪಿನಲ್ಲಿ ಉಳಿದಿವೆ. ಅವರು ಯಾವಾಗಲೂ ಹೇಳುತ್ತಿದ್ದ ಮಾತು ಇದು: 'ನಿಮಗೆ ಯಾಕ್ರೋ ವಿದ್ಯೆ. ಹೋಗಿ ಉಳ್ಳಿಕಜ್ಜಾಯ ತಿಂದುಕೊಂಡಿರಿ'. ಮುಂದುವರಿದು ಅವರು ಬೆಂಗಳೂರು ನಗರದಲ್ಲಿ ಇಂದಿಗೂ ಅಂತಹ ಭಾವನೆಗಳಿರುವವರು ಇದ್ದಾರೆ. ಅಂತಹವರಲ್ಲಿ ಮಹನೀಯರು ಹೇಳುತ್ತಿರುತ್ತಾರೆ 'ನಮ್ಮ ದೇಶದಲ್ಲಿ ಎಲ್ಲ ಕೆಲಸಗಳಿಗೂ ಯೋಗ್ಯರಿದ್ದಾರೆ. ಆದರೆ ಯಾರು ಯಾವ ಸ್ಥಾನದಲ್ಲಿರಬೇಕೋ ಆ ಸ್ಥಾನಗಳಲ್ಲಿಲ್ಲ. ಆದ್ದರಿಂದಲೇ ನಮ್ಮ ಸಮಸ್ಯೆಗಳು ಪರಿಹಾರ ಕಾಣುತ್ತಿಲ್ಲ'. ಇದರ ಬಗ್ಗೆ ಜಿಆರ್ ಅವರ ಟೀಕು: 'ಇದು ಮೀಸಲಾತಿ ಬಗೆಗಿನ ಅಸಮಾಧಾನವೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ' (ಮ್ಯಾನ್ ಎಗೆನೆಸ್ಟ್ ಮಿಥ್' ೨೦೧೭. ಪುಟ ೬).

ಈ ಹಿನ್ನೆಲೆಯಲ್ಲಿ ಮಿಲ್ಲರ್ ಸಮಿತಿಯ ಶತಮಾನೋತ್ಸವದಲ್ಲಿ ಅದರ ಬಗ್ಗೆ ಅಧ್ಯಯನ ಮಾಡುವುದು ಅಗತ್ಯ.

**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕರು, ೨ನೆಯ ಮುಖ್ಯ ರಸ್ತೆ, ೪ನೆಯ ಅಡ್ಡ ರಸ್ತೆ, ಬೇಗೂರು ಮುಖ್ಯ ರಸ್ತೆ
ಹೊಂಗಸಂದ್ರ, ಬೆಂಗಳೂರು–೫೬೦ ೦೬೮
email : trcshekhara@gmail.com

ಕಾವ್ಯಲೋಕ



## ಗಜಲ್

ಜಗವೆಲ್ಲಾ ಸುತ್ತಿದರೂ ನಿಸ್ವಾರ್ಥ ಪ್ರೀತಿ ಸಿಗಲಿಲ್ಲ ನೋಡು
ಯಾವ ಸಂತೆಯಲ್ಲೂ ನಂಬಿಕೆ ಖರೀದಿಸಲಾಗಲಿಲ್ಲ ನೋಡು

ಚೆಲುವ ಹೂ ತೋಟದ ಸುತ್ತಲೂ ಮುಳ್ಳ ಬೇಲಿ ಬಿಗಿಯಲಾಗಿದೆ
ಮನ ಕಾಡುವ ಬಯಕೆಗೆ ಲಕ್ಷ್ಮಣ ರೇಖೆ ಎಳೆಯಲಾಗಲಿಲ್ಲ ನೋಡು

ಲೋಕದ ನೋವಿಗೆ ನೊಂದು ಮುಲಾಮು ಹುಡುಕುತಾ ಹೋದವನು
ನಿನ್ನ ಹೃದಯದ ದುಃಖ ದುಮ್ಮಾನ ಅರಿಯಲಾಗಲಿಲ್ಲ ನೋಡು

ಹುಟ್ಟು ಸಾವಿನ ನಡುವಿನ ಸಂಭ್ರಮ ಪೊರೆಕಳಚ ಹೊರಟವನು
ಮನೆ ಮನದ ಸಂತಸದ ಬೆಳಕು ಸತ್ತು ಬಿದ್ದದ್ದು ಕಾಣಲಿಲ್ಲ ನೋಡು

ಬಯಲ ಆಲಯಕೆ ಹಚ್ಚಿದ ಸೂರ್ಯ"ಪ್ರಭೆ" ಮಂಕಾಗಿತ್ತು
ಒಳಗಣ್ಣ ಬೆಳಕಲಿ ನಡೆದವನಿಗೆ ಕೈ ದೀವಿಗೆ ಬೇಕಾಗಲಿಲ್ಲ ನೋಡು

**ಪ್ರಭಾವತಿ ಎಸ್ ದೇಸಾಯಿ**
ಗಿರಿತಾರೆ ಬಿಲ್ಡಿಂಗ್, ವಿವೇಕ ನಗರ (ಪಶ್ಚಿಮ), ಬಸವನ ಬಾಗೇವಾಡಿ ರೋಡ್
ವಿಜಯಪುರ – ೫೮೬೧೯, email : desaiprabhavati@gmail.com

# ಭಾರತದ ಶ್ರಮಜೀವಿಗಳ ಸಂಘಟಿತ ಹೋರಾಟದ ಶತಮಾನೋತ್ಸವ

## ವಿದ್ಯಾರ್ಥಿಗಳಿಗೆ ಪ್ರಬಂಧ ಸ್ಪರ್ಧೆ

**(ಸ್ನಾತಕೋತ್ತರ / ಸಂಶೋಧನಾ ವಿದ್ಯಾರ್ಥಿಗಳಿಗೆ)**

ಭಾರತದ ಶ್ರಮಜೀವಿ ವರ್ಗದ ಸಂಘಟಿತ ಹೋರಾಟಕ್ಕೆ ನೂರು ವರ್ಷ ತುಂಬಿದೆ. ೩೧–೧೦–೧೯೨೦ರಂದು ಸ್ವಾತಂತ್ರ್ಯ ಹೋರಾಟಗಾರ ಲಾಲಾಲಜಪತ್ ರಾಯ್ ಅವರ ಅಧ್ಯಕ್ಷತೆಯಲ್ಲಿ ಎ.ಐ.ಟಿ.ಯು.ಸಿ. (ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್) ಸ್ಥಾಪನೆಯಾಯಿತು. ಭಾರತದ ದುಡಿವ ವರ್ಗದ ಮೊದಲ ಸಂಘಟನೆಯಾದ ಇದು, ಬ್ರಿಟಿಷ್ ಸಾಮ್ರಾಜ್ಯಶಾಹಿ ದುರಾಡಳಿತದ ವಿರುದ್ಧ, ಶ್ರಮಿಕರ ಹಕ್ಕುಗಳಿಗಾಗಿ ಹೋರಾಡುತ್ತಲೇ ದೇಶದ ಸ್ವಾತಂತ್ರ್ಯ ಹೋರಾಟವನ್ನೂ ತನ್ನ ಗುರಿಯಾಗಿಸಿಕೊಂಡಿತ್ತು. 'ಸಂಪೂರ್ಣ ಸ್ವರಾಜ್' ಘೋಷಣೆಯೊಂದಿಗೆ ದೇಶದ ಸ್ವಾತಂತ್ರ್ಯ ಆಂದೋಲನಕ್ಕೆ ಬಲ ನೀಡಿತು. ೧೯೪೨ರ ಚಲೇಜಾವ್ ಚಳುವಳಿ ಬೆಂಗಳೂರಿನಲ್ಲಿ ಯಶಸ್ವಿಯಾಗಲು ಕಾರ್ಮಿಕ ವರ್ಗದ ಪಾತ್ರ ಮಹತ್ವದ್ದು. ಸ್ವಾತಂತ್ರ್ಯಾನಂತರ ಮತ್ತು ೧೯೯೧ರ ಜಾಗತೀಕರಣ, ಉದಾರೀಕರಣ ನೀತಿಗಳ ವಿರುದ್ಧ ಶ್ರಮಿಕ ವರ್ಗದ ಹಿತಾಸಕ್ತಿಗಾಗಿ, ಎ.ಐ.ಟಿ.ಯು.ಸಿ. ದೇಶದಾದ್ಯಂತ ನಿರಂತರ ಹೋರಾಡುತ್ತಿದೆ.

ಯುವಜನಾಂಗ, ವಿದ್ಯಾರ್ಥಿ ಸಮುದಾಯ ಶ್ರಮಿಕರ ಇಂಥ ಸಮರಶೀಲ ಹೋರಾಟದ ಪರಂಪರೆಯನ್ನು ಮನಗಾಣಲು ಅವರನ್ನು ಪ್ರೋತ್ಸಾಹಿಸಲು ಎ.ಐ.ಟಿ.ಯು.ಸಿ. ಕರ್ನಾಟಕ ರಾಜ್ಯ ಸಮಿತಿ ಹಾಗೂ ೨೧ ವರ್ಷದಿಂದ ನಿರಂತರವಾಗಿ ಪ್ರಕಟವಾಗುತ್ತಿರುವ ಕರ್ನಾಟಕದ ಜನಪರ ಚಿಂತಕರ, ಲೇಖಕರ, ಓದುಗರ ಪತ್ರಿಕೆಯಾದ 'ಹೊಸತು' ಮಾಸಿಕದ ಸಹಯೋಗದಲ್ಲಿ ರಾಜ್ಯದ ಸ್ನಾತಕೋತ್ತರ ಹಾಗೂ ಸಂಶೋಧನಾ ವಿದ್ಯಾರ್ಥಿಗಳಿಗಾಗಿ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿದೆ. ವಿದ್ಯಾರ್ಥಿಗಳು ಸ್ಪಂದಿಸಲು ಈ ಮೂಲಕ ಕೋರಲಾಗಿದೆ.

### ಪ್ರಬಂಧ ಸ್ಪರ್ಧೆಯ ವಿಷಯಗಳು

**ಈ ಕೆಳಕಂಡ ವಿಷಯಗಳ ಕುರಿತು ವಿದ್ಯಾರ್ಥಿಗಳಿಂದ ಪ್ರಬಂಧಗಳನ್ನು ಆಹ್ವಾನಿಸಲಾಗಿದೆ.**

೧) ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಕಾರ್ಮಿಕ ಚಳುವಳಿಯ ಪಾತ್ರ
೨) ವಸಾಹತುಶಾಹಿ ವಿರುದ್ಧ ಸಂಘಟಿತ ಕಾರ್ಮಿಕ ವರ್ಗದ ಹೋರಾಟ (ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ)
೩) ಭಾರತದ ಕಾರ್ಮಿಕ ಚಳುವಳಿಯ ಮೇಲೆ ಅಂತರರಾಷ್ಟ್ರೀಯ ಕಾರ್ಮಿಕ ಚಳುವಳಿಯು ಬೀರಿರುವ ಪ್ರಭಾವ
೪) ಕಾರ್ಮಿಕ ಚಳುವಳಿ ಮತ್ತು ಮಹಿಳೆಯರ ಹಕ್ಕುಗಳು
೫) ಕಾರ್ಮಿಕ ಚಳುವಳಿಗೆ ಜಾಗತೀಕರಣ ಮತ್ತು ತಂತ್ರಜ್ಞಾನದ ಕ್ರಾಂತಿ ಎಸೆದಿರುವ ಸವಾಲುಗಳು
೬) ಕಾರ್ಮಿಕ ಚಳುವಳಿಯ ಮುಂದಿನ ಭವಿಷ್ಯ

### ಅರ್ಹತೆ ಮತ್ತು ನಿಯಮಗಳು

**ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ /ಸಂಶೋಧನಾ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಭಾಗವಹಿಸಬಹುದು. ಎಲ್ಲ ಪ್ರಬಂಧಗಳು ಈ ಮೇಲೆ ತಿಳಿಸಿರುವ ವಿಷಯಗಳಿಗೆ ಸಂಬಂಧಪಟ್ಟಿರಬೇಕು.**

೧) ಪ್ರಬಂಧಗಳು ಮೂಲ ಕೃತಿಯಾಗಿರಬೇಕು, ಇತರ ಅಧ್ಯಯನಗಳು, ನಿಯತಕಾಲಿಕೆಗಳು ಮತ್ತು ಲೇಖನಗಳಿಂದ ತೆಗೆದುಕೊಳ್ಳುವ ಉಲ್ಲೇಖಗಳನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ೨) ಪ್ರಬಂಧವು ಕನ್ನಡದಲ್ಲಿ ೨೦೦೦ ಪದಗಳ ಮಿತಿಯಲ್ಲಿರಬೇಕು. ೩) ಪ್ರಬಂಧಗಳು ನುಡಿ ಸಾಫ್ಟ್‌ವೇರ್ ಬಳಸಿ ಟೈಪ್ ಮಾಡಿರಬೇಕು. ೪) ಪ್ರಬಂಧಗಳನ್ನು hosathu@gmail.comಗೆ ಇಮೇಲ್ ಮಾಡುವುದು ಮತ್ತು ಅದರ ಪ್ರತಿಯೊಂದನ್ನು ಈ ಕೆಳಗಿನ ವಿಳಾಸಕ್ಕೆ ತಲುಪಿಸುವುದು. ೫) ಪ್ರಬಂಧಗಳ ಪ್ರತಿಯೊಂದಿಗೆ ವ್ಯಾಸಂಗ ಮಾಡುತ್ತಿರುವ ಶಿಕ್ಷಣ ಸಂಸ್ಥೆ ನೀಡಿರುವ ವಿದ್ಯಾರ್ಥಿ ಗುರುತಿನ ಚೀಟಿಯನ್ನು ಲಗತ್ತಿಸಬೇಕು. ೬) ಸ್ಪರ್ಧೆಯಲ್ಲಿ ಭಾಗವಹಿಸುವ ವಿದ್ಯಾರ್ಥಿಗಳು ಮುಂದಿನ ಸಂಪರ್ಕಕ್ಕಾಗಿ ತಮ್ಮ ಮೊಬೈಲ್ ಸಂಖ್ಯೆ, ಇಮೇಲ್, ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆದು ಕಳಿಸುವುದು. ೭) ಇ–ಮೇಲ್ ಮೂಲಕ ಪ್ರಬಂಧ ಸಲ್ಲಿಸಲು ಕೊನೆಯ ದಿನಾಂಕ ೩೧ ಜನವರಿ ೨೦೨೦.

### ಮೌಲ್ಯಮಾಪನ ಮತ್ತು ಬಹುಮಾನಗಳು

**ಆಯ್ದ ಆರು ಪ್ರಬಂಧಗಳ ಲೇಖಕರು ತಲಾ ಮೂರು ಸಾವಿರ ರೂಪಾಯಿಗಳೊಂದಿಗೆ ಸಾಧನೆ ಪ್ರಮಾಣ ಪತ್ರವನ್ನು ಪಡೆಯುವರು.**

೧) ಉತ್ತಮ ಮತ್ತು ಅತ್ಯುತ್ತಮ ಪ್ರಬಂಧಗಳಿಗೆ ಒಂದು ವರ್ಷ ಮತ್ತು ಮೂರು ವರ್ಷ 'ಹೊಸತು' ಚಂದಾ ಉಚಿತ. ೨) 'ಹೊಸತು' ಸಂಪಾದಕ ಮಂಡಳಿಯು ಅರ್ಹ ವಿದ್ಯಾರ್ಥಿಗಳ ಪ್ರಬಂಧಗಳನ್ನು ಮೌಲ್ಯಮಾಪನ ಮಾಡಿ, ಅಂಕಗಳನ್ನು ನೀಡಿ, ಉತ್ತಮ ಹಾಗೂ ಅತ್ಯುತ್ತಮ ಎಂದು ವರ್ಗೀಕರಿಸುವರು. ೩) ಆಯ್ದ ಆರು ಅತ್ಯುತ್ತಮ ಪ್ರಬಂಧಗಳನ್ನು 'ಹೊಸತು' ಮಾಸಪತ್ರಿಕೆಯಲ್ಲಿ ಪ್ರಕಟಿಸಲಾಗುವುದು ಹಾಗೂ ಅಂತಹ / ಪ್ರಕಟಿತ ಆರು ಪ್ರಬಂಧಗಳ ಲೇಖಕರಿಗೆ 'ಹೊಸತು' ಪತ್ರಿಕೆಯ ಮೂರು ವರ್ಷದ ಉಚಿತ ಚಂದಾ ನೀಡಲಾಗುವುದು. ೪) ಉತ್ತಮ ಪ್ರಬಂಧಗಳ ಲೇಖಕರಿಗೆ ಒಂದು ಪ್ರಮಾಣ ಪತ್ರದ ಜೊತೆ ಒಂದು ವರ್ಷದ ಅವಧಿಯ 'ಹೊಸತು' ಉಚಿತ ಚಂದಾ ನೀಡಲಾಗುವುದು. ೫) ಭಾಗವಹಿಸಿದ ಎಲ್ಲಾ ವಿದ್ಯಾರ್ಥಿಗಳಿಗೆ ಪ್ರಮಾಣ ಪತ್ರ ನೀಡಲಾಗುವುದು.

**ಅಂಚೆ ವಿಳಾಸ : ಪ್ರಕಾಶಕರು, 'ಹೊಸತು' ತಿಂಗಳ ಪತ್ರಿಕೆ,** ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

# ಪ್ಲ್ಯಾಸ್ಟಿಕ್ ನಿಷೇಧವೇನೋ ಆಯಿತು... ಮುಂದೇನು?

ರಾಜೀವ್ ಎನ್. ಮಾಗಲ್

**ಪ್ಲ್ಯಾಸ್ಟಿಕ್ ಎಂಬ ಪಿಡುಗು...**

ಸುಮಾರು ೬೦ರ ದಶಕದಲ್ಲಿ, ಭಾರತ ಆಹಾರ ಭದ್ರತೆಯ ವಿಚಾರದಲ್ಲಿ ತಲ್ಲಣಗೊಂಡಿದ್ದಾಗ, ವಿದೇಶಗಳಿಂದ ಆಹಾರ ಸಾಮಗ್ರಿಗಳ ಆಮದು ಅನಿವಾರ್ಯವೆನಿಸತೊಡಗಿದಾಗ ಅಂದಿನ ಕೇಂದ್ರ ಸರ್ಕಾರ, ರಸಗೊಬ್ಬರಗಳ ಬಳಕೆಯನ್ನು ದೇಶದ ಕೃಷಿ ವಲಯದಲ್ಲಿ ಅಳವಡಿಸಿಕೊಂಡ ಪದ್ಧತಿ ಇಂದು ಬೃಹತ್ ಪಿಡುಗಿನ ರೀತಿ ಕಾಡುತ್ತಿದೆ ಎಂದರೆ ತಪ್ಪಾಗದು. ಆದರೆ, ನಮ್ಮ ದೈನಂದಿನ ಜೀವನದಲ್ಲಿ, ಕೈಗಾರಿಕಾ ವಲಯದಲ್ಲಿ, ಸೇವಾ ವಲಯದಲ್ಲಿ ಪ್ಲ್ಯಾಸ್ಟಿಕ್ ಬಳಕೆ ರಸಗೊಬ್ಬರಗಳ ಬಳಕೆಗಿಂತಲೂ ಗಂಭೀರ ಸ್ವರೂಪ ತಾಳಿದೆ ಎಂದರೆ ಅತಿಶಯೋಕ್ತಿಯಾಗದು. ಕಾರಣ, ರಸಗೊಬ್ಬರಗಳ ಬಳಕೆಯನ್ನು ಸಂಪೂರ್ಣವಾಗಿ ತ್ಯಜಿಸಿ ಜೈವಿಕ ಇಲ್ಲವೇ ಸಾವಯವ ಕೃಷಿ ಪದ್ಧತಿಯನ್ನು ಅಳವಡಿಸಿಕೊಳ್ಳುವುದು ಅಷ್ಟು ಕಠಿಣವಾದ ಕಾಯಕವಲ್ಲ. ಈಗಾಗಲೇ ಅನೇಕ ಕೃಷಿಕರು, ರಾಸಾಯನಿಕಗಳ ಬಳಕೆಯಿಂದ ಉಂಟಾದ, ಉಂಟಾಗಬಹುದಾದ ಅಪಾಯಗಳನ್ನು ಮನಗಂಡು ನಮ್ಮ ಪೂರ್ವಜರ ನೈಸರ್ಗಿಕ ಕೃಷಿ ಪದ್ಧತಿಯತ್ತ ಮುಖ ಮಾಡುತ್ತಿರುವುದು ವಾಸ್ತವ. ಆದರೆ, ಬಹುಶಃ ದೋಸೆ ಹಾಕುವ ಕಬ್ಬಿಣದ ಹಂಚಿಗೆ ಅಳವಡಿಸಿರುವ ಹಿಡಿಯಿಂದ (Handle) ಹಿಡಿದು ...ವಿಮಾನದಲ್ಲಿ ಬಳಸುವ, ಬಾಹ್ಯಾಕಾಶ ನೌಕೆಯಲ್ಲಿ ಬಳಸುವ ಬಹುತೇಕ ಭಾಗಗಳನ್ನು ಪ್ಲ್ಯಾಸ್ಟಿಕ್ ಎಂಬ ಪರಿಸರಕ್ಕೆ ಮಾರಕವಾದ ಪದಾರ್ಥದಿಂದಲೇ ತಯಾರಿಕೆಯಾಗಿರುವುದೇ ಇಂದು ಬಹು ದೊಡ್ಡ, ಬಗೆಹರಿಸಲಾಗದ ಸಮಸ್ಯೆಯಾಗಿದೆ. ವೈಜ್ಞಾನಿಕ ಸಂಶೋಧನೆಗಳ, ಆವಿಷ್ಕಾರದ ಹಿನ್ನೆಲೆಯಲ್ಲಿ ವಿಧ-ವಿಧವಾದ, ವಿಭಿನ್ನ ರೀತಿಯ ಪ್ಲ್ಯಾಸ್ಟಿಕ್ ಪದಾರ್ಥಗಳನ್ನು ತಯಾರಿಸಿ ಅವುಗಳ ಬಳಕೆಯನ್ನು ವಿಜೃಂಭಿಸುವ ಕಾಲ ಬದಲಾಗಿ, ಈ ಅನಿವಾರ್ಯ ಪದಾರ್ಥದ ಬಳಕೆಯನ್ನು ಅಂತ್ಯಗೊಳಿಸುವುದಿರಲಿ, ಕಡಿವಾಣ ಹಾಕುವುದಕ್ಕೂ ಸಹ ಆಲೋಚನೆಗಳು ಸಾಕಾರಗೊಳ್ಳುತ್ತಿಲ್ಲ, ಸೂಕ್ತ ಪರಿಹಾರ ಸಿಗುತ್ತಿಲ್ಲ. ಆದರೆ ಪ್ರಯತ್ನಗಳು ಅನಿವಾರ್ಯವಾಗಿವೆ. ಪ್ಲ್ಯಾಸ್ಟಿಕ್ ಉತ್ಪಾದನೆ, ಬಳಕೆ ಹಾಗೂ ಅದರ ಮರುಬಳಕೆಯ ಕೆಲವು ಸತ್ಯಾಸತ್ಯತೆಗಳ ಅಂಕಿ-ಅಂಶಗಳು ಇಲ್ಲಿವೆ...




**ಎಲ್ಲೆಲ್ಲಿ ಪ್ಲ್ಯಾಸ್ಟಿಕ್ ಬಳಕೆ?**

ಇದೇ ಉತ್ತರಿಸಲಾಗದ ಬಹುದೊಡ್ಡ ಪ್ರಶ್ನೆ, ಸವಾಲು! ಈ ಪ್ರಶ್ನೆಯನ್ನು ಕೊಂಚ ಬದಲಾಯಿಸಬೇಕಾಗುತ್ತದೆ... "ಎಲ್ಲಿಲ್ಲ ಪ್ಲ್ಯಾಸ್ಟಿಕ್ ಬಳಕೆ?" ಎಂಬುದಾಗಿ! ದಿನೇ ದಿನೇ ಹೆಚ್ಚಿದ ಮಾನವನ ವೈಜ್ಞಾನಿಕ ಬುದ್ಧಿ ಸಾಮರ್ಥ್ಯದ ಕಾರಣಕ್ಕೆ, ವೈಜ್ಞಾನಿಕ ಸಂಶೋಧನೆಗಳ ಹಿನ್ನೆಲೆಯಲ್ಲಿ ಈ ಹಿಂದೆ ಬಳಕೆಯಾಗುತ್ತಿದ್ದ, ಪರಿಸರಕ್ಕೆ ಮಾರಕವಾಗಿರದ ಹಲವಾರು ಪದಾರ್ಥಗಳನ್ನು ಮೂಲೆ ಗುಂಪು ಮಾಡಿ, ಕಡಿಮೆ ಬೆಲೆಯ, ಕಡಿಮೆ ತೂಕದ, ಹೆಚ್ಚು ಬಾಳಿಕೆ ಬರುವ, ನೋಡಲು ಸುಂದರವಾಗಿ ಕಾಣುವ ಪ್ಲ್ಯಾಸ್ಟಿಕ್ ಎಂಬ ಕೃತಕ ಪದಾರ್ಥದ ಆವಿಷ್ಕಾರವಾದಾಗ ಇಡೀ ವಿಶ್ವವೇ ಸಂಭ್ರಮಾಚರಣೆಗೆ ಮುಂದಾಗಿತ್ತು. ಆ ಸಂಭ್ರಮದ ದಿನಗಳಲ್ಲಿ ಮುಂದೊಂದು ದಿನ ಇದೇ ಪ್ಲ್ಯಾಸ್ಟಿಕ್ ಎಂಬ ಪದಾರ್ಥವನ್ನು ಮಾನವ ತನ್ನ ಆಲೋಚನೆಯಿಂದಲೇ ಕಿತ್ತೊಗೆಯುವ ಪರಿಸ್ಥಿತಿ ಬರಬಹುದೆಂಬ ಕಿಂಚಿತ್ತೂ ಊಹೆ ಆತನಿಗೆ ಇರಲಿಲ್ಲವಾಗಿತ್ತೇನೋ? ಹುಟ್ಟಿದ ಕಂದನನ್ನು ತೊಟ್ಟಿಲಲ್ಲಿ





ಮಲಗಿಸಲು ಬಳಸುತ್ತಿದ್ದ ಮೆತ್ತನೆಯ ಹತ್ತಿ ಬಟ್ಟೆಯ ಕವುದಿಯ ಬದಲಾಗಿ ಪ್ಲ್ಯಾಸ್ಟಿಕ್ ಹೊದಿಕೆ, ಗಾಜಿನ ಹಾಲಿನ ಬಾಟಲಿಯ ಬದಲಿಗೆ ಪ್ಲ್ಯಾಸ್ಟಿಕ್, ತೊಗಲಿನ ಚಪ್ಪಲಿಯ ಬದಲಿಗೆ ಪ್ಲ್ಯಾಸ್ಟಿಕ್ ಪಾದರಕ್ಷೆ, ಮಹಿಳೆಯರ ಸಾಂಪ್ರದಾಯಿಕ ಗಾಜಿನ ಬಳೆಯ ಬದಲಿಗೆ ಪ್ಲ್ಯಾಸ್ಟಿಕ್ ಬಳೆಗಳು, ಹಾಲು ಸರಬರಾಜಿಗೆ ಬಳಸುವ ಪ್ಲ್ಯಾಸ್ಟಿಕ್ ಕವರ್, ಶಾಯಿ ತುಂಬಿಸಿ ಬಳಸುವ ಲೇಖನಿಯ ಬದಲಿಗೆ ಒಮ್ಮೆ ಬಳಸಿ ಬಿಸಾಡುವ ಪೆನ್ ಹೀಗೆ ದಿನನಿತ್ಯದ ಬಳಕೆಯ ಪದಾರ್ಥಗಳಲ್ಲಿ ಬಹುತೇಕವು ಪ್ಲ್ಯಾಸ್ಟಿಕ್‌ಮಯವಾಗಿವೆ. ಪ್ಲ್ಯಾಸ್ಟಿಕ್ ಇಲ್ಲದೇ ಜೀವನವೆ ಇಲ್ಲವೇನೋ? ಎಂಬಂತಾಗಿದೆ ಮಾನವನ ಕಾರ್ಯ ವೈಖರಿ! ಈ ಕಾರಣಕ್ಕೆ, ಒಮ್ಮೆ ಬಳಕೆಯಾದ ಪ್ಲ್ಯಾಸ್ಟಿಕ್ ಪದಾರ್ಥಗಳನ್ನು ಬಿಸಾಡಿದರೆ ಅವುಗಳು ಮಣ್ಣಿನಲ್ಲಿ ಕರಗದೇ ಶಾಶ್ವತವಾಗಿ ತಮ್ಮ ಮೂಲ ಸ್ವರೂಪದಲ್ಲಿಯೇ ಉಳಿಯುತ್ತಿರುವುದೇ ಅತ್ಯಂತ ಗಂಭೀರ ಸಮಸ್ಯೆಯಾಗಿ ಕಾಡುತ್ತಿರುವ ಕಾರಣಕ್ಕೆ ಇಂದು ಅನಿವಾರ್ಯವಾಗಿ ಪ್ಲ್ಯಾಸ್ಟಿಕ್ ಪದಾರ್ಥಗಳ ಬಳಕೆಗೆ ಕಡಿವಾಣ ಹಾಕುವತ್ತ, ನಿರ್ಬಂಧಿಸುವತ್ತ ಆಲೋಚನೆಗಳು ಭರದಿಂದ ಸಾಗುತ್ತಿವೆ, ಕಾನೂನುಗಳನ್ನು ಜಾರಿ ಮಾಡಲಾಗುತ್ತಿದೆ, ಮಾನವ ಈ ಸಮಸ್ಯೆಯಿಂದ ತತ್ತರಿಸಿದ್ದಾನೆ ಎಂಬ ವಿಚಾರವಂತೂ ಅಪ್ಪಟ ಸತ್ಯ. ಪ್ಲ್ಯಾಸ್ಟಿಕ್ ಎಂಬ ಹೆಮ್ಮಾರಿ ಯಾವ ಮಟ್ಟಿಗೆ ಪರಿಸರದ ನಾಶಕ್ಕೆ ಕಾರಣವಾಗಿದೆ ಎಂದರೆ ಜಲಚರಗಳು ಪ್ಲ್ಯಾಸ್ಟಿಕ್ ಸೇವಿಸಿ ಅವುಗಳ ಸಂತತಿಯೇ ನಾಶವಾಗಿರುವುದು, ಕಾಮಧೇನು ಎಂದೇ ಪೂಜಿಸಲಾಗುವ ಹಸುಗಳು ರಸ್ತೆ ಬದಿಯಲ್ಲಿನ ಕಸದ ತೊಟ್ಟಿಗಳಲ್ಲಿನ ಪ್ಲ್ಯಾಸ್ಟಿಕ್ ತ್ಯಾಜ್ಯವನ್ನು ತಿಂದು ಘೋರ ಆರೋಗ್ಯದ ಸಮಸ್ಯೆಯನ್ನು ಎದುರಿಸುತ್ತಿರುವ ಸಂಗತಿ, ಪಟ್ಟಣ ಹಾಗೂ ನಗರ ಪ್ರದೇಶಗಳಲ್ಲಿ ಬಿಸಾಡಿರುವ ಪ್ಲ್ಯಾಸ್ಟಿಕ್ ತ್ಯಾಜ್ಯ ರಸ್ತೆಯ ಇಕ್ಕೆಲಗಳಲ್ಲಿನ ಚರಂಡಿಯಲ್ಲಿ ಕರಗದೇ ಉಳಿದು ನೀರಿನ ಹರಿಯುವಿಕೆಗೆ ಅಡ್ಡಿಪಡಿಸಿ ಪ್ರವಾಹ ಪರಿಸ್ಥಿತಿ ಉಂಟುಮಾಡಿರುವ ಹಿನ್ನೆಲೆಯಲ್ಲಿ ಉದ್ಭವಿಸುವ ಸಮಸ್ಯೆಗಳು, ಪ್ಲ್ಯಾಸ್ಟಿಕ್ ತ್ಯಾಜ್ಯಕ್ಕೆ ಹಚ್ಚಿದ ಬೆಂಕಿಯಿಂದ ಉತ್ಪತ್ತಿಯಾಗುವ ವಿಷಕಾರಿ ಹೊಗೆ ಉಸಿರಾಟದ ಹಾಗೂ ಅನೇಕ ಆರೋಗ್ಯದ ಸಮಸ್ಯೆ ಒಡ್ಡುತ್ತಿರುವುದು... ಹೀಗೆ ಪ್ಲ್ಯಾಸ್ಟಿಕ್ ಒಡ್ಡುತ್ತಿರುವ ಸಮಸ್ಯೆಗಳು ಒಂದಲ್ಲ ಎರಡಲ್ಲ... ನೂರಾರು!

**ಈ ಗಂಭೀರ ಸಮಸ್ಯೆಗೆ ಪರಿಹಾರ ಉಂಟೇ?**

ಪ್ರತಿಯೊಂದು ಸಮಸ್ಯೆಗಳಿಗೆ ಪರಿಹಾರವೇನೋ ಇದ್ದೇ ಇರುತ್ತೆ. ಆದರೆ ಮಾನವ ನಿರ್ಮಿತ ಸಮಸ್ಯೆಗೆ ಮಾನವನೇ ಸಮಸ್ಯೆ ಹುಡುಕುವುದು ಅನಿವಾರ್ಯವಾಗಿದ್ದು ಹಂತ-ಹಂತವಾಗಿ, ವೈಜ್ಞಾನಿಕವಾಗಿ ಸಮಸ್ಯೆಯನ್ನು ದೂರ ಮಾಡಬೇಕಾಗುತ್ತೆ. ದಶಕ ಗಳಿಂದ ಬಳಕೆಯಲ್ಲಿರುವ ಪ್ಲ್ಯಾಸ್ಟಿಕ್ ಪದಾರ್ಥ ಪರಿಸರದ ಮೇಲೆ, ಮಾನವನ ಹಾಗೂ ಪ್ರಾಣಿಗಳ ಆರೋಗ್ಯದ ಮೇಲೆ ಬೀರಿರುವ, ವಾಯುಮಾಲಿನ್ಯದ ಮೇಲೆ ಎಸಗಿರುವ ಘೋರ ಅಡ್ಡ ಪರಿಣಾಮಗಳನ್ನು ತಡವಾಗಿ ಅರಿತ ಮಾನವ ಜನಾಂಗ ಇದ್ದಕ್ಕಿದ್ದಂತೆ ಎಚ್ಚೆತ್ತು ಪ್ಲ್ಯಾಸ್ಟಿಕ್ ಪಿಡುಗಿಗೆ ಏಕಾಏಕಿ ಕಡಿವಾಣ ಹಾಕುವ ಪ್ರಯತ್ನಕ್ಕೆ ಮುಂದಾಗಿರುವುದು ವಾಸ್ತವವಾದರೂ ಸಹ ಅದರ ಸಾಧಕ ಬಾಧಕಗಳನ್ನು ಕೂಲಂಕಶವಾಗಿ ಅರಿತು, ವಿಶ್ಲೇಷಿಸಿ, ಸಮಸ್ಯೆಗೆ ಪರಿಹಾರ ಹುಡುಕುವತ್ತ ಅವಸರದ ಹೆಜ್ಜೆ ಇಡುತ್ತಿರುವುದು ಸಹ ವಾಸ್ತವದ ಸಂಗತಿ. ಒಂದು ಮಾತಂತೂ ಸತ್ಯ.... ಪರಿಸರದ ಉಳಿವಿಗೆ, ಮನುಕುಲದ ಆರೋಗ್ಯಕ್ಕೆ, ಪಕ್ಷಿ-ಪ್ರಾಣಿಗಳ-ಜಲಚರಗಳ ಇತರೆ ಜೀವರಾಶಿಗಳ ನೆಮ್ಮದಿಯ ಜೀವನಕ್ಕೆ ಅತ್ಯಂತ ಹೆಚ್ಚಿನ ಮಟ್ಟದಲ್ಲಿ ಮಾರಕ ವಾಗಿರುವ ಪ್ಲ್ಯಾಸ್ಟಿಕ್ ಪದಾರ್ಥಕ್ಕೆ ಸಾಧ್ಯವಾದ ಮಟ್ಟಿಗೆ ಕಡಿವಾಣ ಹಾಕಬೇಕಿರುವುದು ಅನಿವಾರ್ಯವಾದ ಕಾರಣ ಕೆಲವು ಕ್ಲಿಷ್ಟಕರ ನಿರ್ಧಾರಗಳು ಅನಿವಾರ್ಯವಾಗಿವೆ, ಕೆಲವು ಕಾನೂನಾತ್ಮಕ ನಿಲುವುಗಳು ಅವಶ್ಯವಾಗಿವೆ. ಈ ಹಿನ್ನೆಲೆಯಲ್ಲಿಯೇ ದೇಶದ ಪ್ರಧಾನಿ "ಒಮ್ಮೆ ಉಪಯೋಗಿಸಲ್ಪಡುವ ಪ್ಲ್ಯಾಸ್ಟಿಕ್ ಪದಾರ್ಥ"ಕ್ಕೆ (Single Use Plastic) ವಿದಾಯ ಹೇಳುವ ನಿರ್ಧಾರ ತೆಗೆದುಕೊಂಡಿದ್ದು ಇತ್ತೀಚಿಗಿನ ವಿಶ್ವಸಂಸ್ಥೆಯ ಮಹಾ ಅಧಿವೇಶನದಲ್ಲಿಯೂ ಸಹ ಈ ವಿಚಾರವನ್ನು ಪ್ರಸ್ತಾಪಿಸಿದ್ದಾರೆ... ಜಿ-೨೦ ಶೃಂಗಸಭೆಯಲ್ಲಿಯೂ ಸಹ ಈ ವಿಚಾರದಲ್ಲಿ ಗಹನವಾದ ಚರ್ಚೆಯಾಗಿದ್ದು ಕಠಿಣ ನಿರ್ಧಾರಗಳು ಅನಿವಾರ್ಯವಾಗಿದ್ದು ಈ ಪ್ರಸ್ತಾಪಗಳಿಗೆ ಜಗತ್ತಿನಾದ್ಯಂತ ದೊರೆತಿರುವ ಉತ್ತಮ ಸ್ಪಂದನೆಯನ್ನು ಸಾಕಾರಗೊಳಿಸುವ ಕರ್ತವ್ಯ ಪ್ರತಿಯೋರ್ವ ನಾಗರಿಕರ ಜವಾಬ್ದಾರಿಯಾಗಿರುತ್ತದೆ. ಆದರೆ, ಈ ನಿರ್ಧಾರದ ಹಿನ್ನೆಲೆಯಲ್ಲಿ ಪರಿಹಾರಕ್ಕೆ ಮುಂದಾಗಿರುವ ಸರ್ಕಾರಗಳು ತೆಗೆದು ಕೊಳ್ಳಬೇಕಿರುವ ಮಹತ್ತರವಾದ ನಿರ್ಧಾರವೆಂದರೆ ಈಗಾಗಲೇ ಹಲವಾರು ದಶಕ ಗಳಿಂದ ನಿರಂತರವಾಗಿ ಪ್ಲ್ಯಾಸ್ಟಿಕ್ ತಯಾರಿಕೆಯಲ್ಲಿ, ಪ್ಲ್ಯಾಸ್ಟಿಕ್ ಕೈಗಾರಿಕೆಗಳಲ್ಲಿ ಬಂಡವಾಳ ಹೂಡಿರುವ ಅನೇಕಾನೇಕ ಸಣ್ಣ ಹಾಗೂ ಮಧ್ಯಮ ವರ್ಗದ ಉದ್ದಿಮೆಗಳಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸಿಕೊಟ್ಟು, ಅವರುಗಳಿಗೆ ಆರ್ಥಿಕವಾಗಿ ನೆರವು ನೀಡಿ, ಈಗಾಗಲೇ ಸ್ಥಾಪಿಸಿರುವ ಪ್ಲ್ಯಾಸ್ಟಿಕ್ ತಯಾರಿಕಾ ಸಾಮಗ್ರಿಗಳ, ಉಪಕರಣಗಳ, ಸಲಕರಣೆಗಳನ್ನು ಅನ್ಯವಸ್ತುಗಳ ತಯಾರಿಕೆಯಲ್ಲಿ ಬಳಸುವ, ಅಳವಡಿಸಿಕೊಳ್ಳುವ ಸಾಧ್ಯತೆಗಳ ಬಗ್ಗೆ ಅವಕಾಶ ಕಲ್ಪಿಸಿ ತದನಂತರ ಈ ಕೈಗಾರಿಕಾ ವಲಯ ಪುನಃ ಸ್ವಾವಲಂಬಿಗಳಾಗಿ ಮತ್ತೊಂದು ಕೈಗಾರಿಕೆಯಲ್ಲಿ ಮುಂದುವರಿಯು ವಂತಹ ವ್ಯವಸ್ಥೆಯನ್ನು ಕಲ್ಪಿಸುವುದು ಬಹಳವೇ ಪ್ರಮುಖ ವಿಚಾರವಾಗಿರುತ್ತೆ. ಕಾನೂನಿನ ನೆರವಿನಿಂದ, ಸರ್ಕಾರದ ಆದೇಶದಿಂದ, ಏಕಾಏಕಿ ಪ್ಲ್ಯಾಸ್ಟಿಕ್ ಪದಾರ್ಥಗಳ ಉತ್ಪಾದನೆಯನ್ನು ಸ್ಥಗಿತಗೊಳಿಸುವ ಏಕೈಕ ಗುರಿಯಿಂದ, ಪ್ಲ್ಯಾಸ್ಟಿಕ್ ತಯಾರಿಕೆಯನ್ನೇ ಸ್ಥಗಿತಗೊಳಿಸುವಂತೆ ಆದೇಶ ಹೊರಡಿಸಿ, ಪರ್ಯಾಯ ವ್ಯವಸ್ಥೆ ಕಲ್ಪಿಸದಿರುವುದು ದೇಶದ ಆರ್ಥಿಕತೆಯ ಮೇಲೆ, ಸಾಮಾಜಿಕ ವ್ಯವಸ್ಥೆಯ ಮೇಲೆ, ಈ ಕೈಗಾರಿಕೆಯ ಮೇಲೆ ಅವಲಂಬಿತ ಕುಟುಂಬಗಳ ಮೇಲೆ ಅತ್ಯಂತ ಗಂಭೀರ ಪರಿಣಾಮ ಬೀರುವುದನ್ನು ಮನಗಾಣಬೇಕಿದೆ. ಹಾಗಾಗಿ ತಜ್ಞರ ಸಲಹೆಯ, ಅನುಭವಿಗಳ ಸೂಚನೆಯ ಮೇರೆಗೆ ಪ್ಲ್ಯಾಸ್ಟಿಕ್ ನಿಷೇಧದ ವಿಚಾರದಲ್ಲಿ ಪರಿಹಾರ ಕಂಡುಕೊಳ್ಳುವುದು ಅತ್ಯಂತ ಮಹತ್ವದ ಹೆಜ್ಜೆಯಾಗಿರುತ್ತದೆ.

ಮಾತ್ರವಲ್ಲ, ಪ್ಲ್ಯಾಸ್ಟಿಕ್ ಎಂಬ ಪಿಡುಗನ್ನು ದೂರ ಮಾಡುವಲ್ಲಿ ಅನೇಕ ವೈಜ್ಞಾನಿಕ ಸಂಶೋಧನೆಗಳು ಭರದಿಂದ ಸಾಗಿದ್ದು ಈಗಾಗಲೇ ತ್ಯಾಜ್ಯವಾಗಿ ಪರಿಸರದಲ್ಲಿ ಬಿಸಾಡಲ್ಪಟ್ಟಿರುವ ಪ್ಲ್ಯಾಸ್ಟಿಕ್ ಪದಾರ್ಥವನ್ನು ತಿನ್ನುವ ಬ್ಯಾಕ್ಟೀರಿಯಗಳ ಅನ್ವೇಷಣೆ, ಮಣ್ಣಿನಲ್ಲಿ ಕರಗುವ ಪ್ಲ್ಯಾಸ್ಟಿಕ್ ಪದಾರ್ಥದ ಆವಿಷ್ಕಾರ, ಪ್ಲ್ಯಾಸ್ಟಿಕ್ ಮರುಬಳಕೆಯ (Recycle) ವಿಚಾರ - ಹೀಗೆ ಹತ್ತಾರು ಸಂಗತಿಗಳ ಬಗ್ಗೆ ವೈಜ್ಞಾನಿಕ ಸಮುದಾಯ ಪ್ರಯತ್ನಗಳನ್ನು ಮಾಡುತ್ತಿದ್ದು ಯಶಸ್ಸನ್ನು ಎದುರು ನೋಡುತ್ತಿರುವ ವಿಚಾರದಲ್ಲಿ ಬಹುಶಃ ಪರಿಸರವೂ ಕಾತುರದಿಂದ ಕಾಯುತ್ತಿರಬಹುದೇನೋ?

**ಪರಿಹಾರದ ಆಚೆಗೆ ಕೆಲವು ಜವಾಬ್ದಾರಿಗಳು...?**

ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ಮತ್ತೊಂದು ಅತ್ಯಂತ ಪ್ರಮುಖವಾದ ಜವಾಬ್ದಾರಿಯುತವಾದ ಕಾಯಕಕ್ಕೆ ಕೈಹಾಕಬೇಕೆಂದಿರುವ, ಗಮನಾರ್ಹ ವಿಚಾರವೆಂದರೆ ಈಗಾಗಲೇ ಪರಿಸರದಲ್ಲಿ, ಭೂಮಿಯ ಪದರಗಳಲ್ಲಿ, ಸಾಗರಗಳಲ್ಲಿ, ಜಲಮೂಲಗಳಲ್ಲಿ ಬಚ್ಚಿಟ್ಟುಕೊಂಡಿರುವ... ಒಟ್ಟಾರೆಯಾಗಿ ಕಂಡಕಂಡಲ್ಲಿ ಕಾಣಸಿಗುತ್ತಿರುವ, ಅಡಗಿ ಕುಳಿತಿರುವ, ಎಂದೆಂದೂ ಕರಗದ ಪ್ಲ್ಯಾಸ್ಟಿಕ್ ಎಂಬ ಕಠಿಣ ಪದಾರ್ಥವನ್ನು ಸಂಪೂರ್ಣವಾಗಿ ಹೊರತೆಗೆದು, ಅದನ್ನು ಸೂಕ್ತ ರೀತಿಯಿಂದ ವಿಲೇವಾರಿ ಮಾಡಿ ಈಗಾಗಲೇ ಮಲಿನಗೊಂಡಿರುವ ಪರಿಸರವನ್ನು ಮುಂಚಿನ ಪರಿಸ್ಥಿತಿಯತ್ತ ಒಯ್ಯುವುದೇ ಆಗಿರುತ್ತದೆ. ಪ್ಲ್ಯಾಸ್ಟಿಕ್ ಪದಾರ್ಥವನ್ನು ಬಳಸಿ ರಸ್ತೆಗಳ ನಿರ್ಮಾಣ ಈ ಪರಿಹಾರದ ಹೆಜ್ಜೆಯಲ್ಲಿ ಒಂದು ಚಿಕ್ಕ ಉದಾಹರಣೆ ಎಂದು ಪರಿಗಣಿಸಬಹುದು ಹಾಗೂ ಈ ನಿಟ್ಟಿನಲ್ಲಿ ಈಗಾಗಲೇ ಪ್ರಯೋಗಗಳು ಯಶಸ್ವಿಯಾಗಿರುವುದು ಗಂಭೀರ ಸಮಸ್ಯೆಗಳ ನಡುವೆ ಕೊಂಚಮಟ್ಟಿಗೆ ನೆಮ್ಮದಿ ನೀಡುವ ಸಂಕೇತವಾಗಿರುತ್ತದೆ. ಒಟ್ಟಿನಲ್ಲಿ, ಆಧುನಿಕ ಸಂಶೋಧನೆಯ ನೆಪದಲ್ಲಿ, ನೂತನ ಆವಿಷ್ಕಾರದ ಕಾರಣಕ್ಕೆ, ತಂತ್ರಜ್ಞಾನ ಹಾಗೂ ಮಾನವನ ಸಾಮರ್ಥ್ಯಗಳಲ್ಲಿನ ಪೈಪೋಟಿಯ ಹುಮ್ಮಸ್ಸಿನಲ್ಲಿ ಕಳೆದ ಹಲವಾರು ದಶಕಗಳ ಸಮಯದಲ್ಲಿ ಎಗ್ಗಿಲ್ಲದೇ ಮಲಿನಗೊಳಿಸಿರುವ ಪರಿಸರವನ್ನು ಪುನಃ ಹಿಂದಿನ ಸ್ಥಿತಿಗತಿಯತ್ತ ತರುವಲ್ಲಿ ಪ್ರಾಮಾಣಿಕ ಪ್ರಯತ್ನಗಳು ಅದೇ ವೈಜ್ಞಾನಿಕ ಮನೋಭಾವವನ್ನು ಹೊಂದಿರುವ ಮಾನವನ ಜವಾಬ್ದಾರಿಯೇ ಆಗಿರುತ್ತದೆ! ಈ ಗಂಭೀರ ಪಿಡುಗಿನ ಮೂಲೋತ್ಪಾಟನದ ಜವಾಬ್ದಾರಿಯಲ್ಲಿ ಮಾನವನ ಪಾತ್ರವೇ ಅನಿವಾರ್ಯವಾಗಿರುತ್ತದೆ... ಮಹತ್ತರವಾಗಿರುತ್ತದೆ, ಸಮಯೋಚಿತವಾಗಿರ ಬೇಕಾಗುತ್ತದೆ! ಪರಿಸರಕ್ಕೆ ಮಾರಕವಾಗಿರುವ ಪ್ಲ್ಯಾಸ್ಟಿಕ್ ಬಳಕೆಯನ್ನು ಸ್ವಯಂಪ್ರೇರಿತವಾಗಿ ನಿರ್ಬಂಧಿಸುವುದು ಪ್ರಥಮ ಹೆಜ್ಜೆಯಾದಲ್ಲಿ ಮಾತ್ರ ಈ ಸಮಸ್ಯೆಗೆ ಶೀಘ್ರವಾಗಿ ಇತಿಶ್ರೀ ಹಾಡಬಹುದಲ್ಲವೇ?


**ರಾಜೀವ್ ಎನ್. ಮಾಗಲ್**

ಶ್ರೀ ಸಾಯಿ ಸಿರಿ ಎಸ್ಟೇಟ್, ಅಂ.ಪೆ.ಸಂ : ೬೩

ಸಕಲೇಶಪುರ - ೫೭೩ ೧೩೪, ಹಾಸನ ಜಿಲ್ಲೆ

email : rajivmagal2016@gmail.com

# ಕಾಮ್ರೇಡ್ ಕೆ. ಎಂ. ಶ್ರೀನಿವಾಸ್ ಹೇಳಿದ ನೆನಪುಗಳು

**ಡಾ॥ ರಾಜೇಗೌಡ ಹೊಸಹಳ್ಳಿ**



೧) ನಾನು ಲಾಯರ್ ಆಗಿ ಅದ್ಯಾಕೆ ಸೇರಿದೆನೋ ಕಾಣೆ! ಮಹಿಷಿ ನರಸಿಂಹಮೂರ್ತಿಗಳ ಶಿವಮೊಗ್ಗ ಆಫೀಸಿನಲ್ಲಿ ಜೂನಿಯರ್ ಲಾಯರ್ ಆಗಿ ಸೇರಿದ್ದೆ. ಅವರು ಕ್ರಿಮಿನಲ್ ಲಾಯರ್. ಮೈದುನನಾದವನು ಅತ್ತಿಗೆ ಜುಟ್ಟು ಕೊಯ್ದಿದ್ದ ಒಂದು ಕೇಸು. ಆಕೆ ದರ್ಜೆ ಹೆಣ್ಣುಮಗಳು. ಮೈದುನನ ಪರ ವಕಾಲತ್ ಹಾಕಿದ್ದ ನಮ್ಮ ಸೀನಿಯರ್ ಲಾಯರು ಇರಲಿಲ್ಲ. 'ನೀವೆ ನಡೆಸ್ರಿ' ಅಂತಾ ಜಡ್ಜ್ ಹೇಳಿದರು. ಸರಿ ವಾದ ಮಂಡಿಸಿದೆ. 'ಅಮ್ಮಾ ನೀವು ಓದುವಾಗ ಕ್ರಾಫ್‌ಕಟ್ ಮಾಡಿಸ್ಕೊಳ್ತಾ ಇದ್ರಿ ಅಲ್ಲವೆ!' ಎಂದೆ. ಅವರು ಹೌದು ಅನ್ನಬೇಕೆನ್ನುವಷ್ಟರಲ್ಲಿ ಜಡ್ಜಿಗೆ ಸಿಟ್ಟುಬಂತು. ಏನ್ರೀ! ನೀವೇ ತಲೆ ಕಟ್ ಮಾಡಿಸ್ಕೊಂಡು ಸುಳ್ಳುಕೇಸು ಹಾಕಿದಿರಿ ಅಂತಾ ಅಲ್ಲವೇ ನಿಮ್ಮ ವಾದ! ಅಂತಾ ಜಡ್ಜು ನನ್ನ ದಬಾಯಿಸಿದರು. ನಾನು ಫೈಲು ಪುಸ್ತಕವೆಲ್ಲ ಟೇಬಲ್ ಮೇಲೆ ಎಸೆದು ನಿಂತುಬಿಟ್ಟೆ. ತಕ್ಷಣ ಅಲ್ಲೆ ಇದ್ದ ಕಲ್ಲಯ್ಯ ಎನ್ನೋ ಕ್ರಿಮಿನಲ್ ಲಾಯರ್ ಬಂದು ಪರಿಸ್ಥಿತಿ ಸುಧಾರಿಸಿದರು ಅನ್ನಿ. ಅವೊತ್ತೆ ನನ್ನ ಲಾಯರ್‌ಗಿರಿ ಮುಗಿತು. ಸಮಾಜಸೇವೆ ಅಂತಾ ಹೊರಟೋನು ಹಿಂದಿರುಗಿ ನೋಡಲಿಲ್ಲ. ಆಗ ಅರಗದ ಸೀಮೆಲಿ ಏನೂ ಇರಲಿಲ್ಲ. ಸಹಕಾರ ಸಂಘ, ವೇರ್‌ಹೌಸ್, ದನದ ಆಸ್ಪತ್ರೆ ಹೈಸ್ಕೂಲು, ಗ್ರಾಮಪಂಚಾಯ್ತಿ, ಕಾರ್ಪೊರೇಷನ್ ಬ್ಯಾಂಕ್, ಟೆಲಿಫೋನ್ ಆಫೀಸುಗಳ ಎಲ್ಲ ತಂದಿವಿ. ಪ್ರಾಂತ ರೈತ ಸಂಘ ಕಟ್ಟಿದಿವಿ. ಇದಕ್ಕೆಲ್ಲಾ ಖಾದರ್‌ಸಾಬ್ ಅನ್ನೋರು ಸಹಾ ಸಹಕಾರ ನೀಡಿದರು. ಇದಿರಲಿ ಆ ನನ್ನ ಹೆತ್ತವ್ವನೇ ಇದಕ್ಕೆಲ್ಲ ಕಾರಣ ಅನ್ನಿ. ನಾನು ಅಪ್ಪನ ಮುಖ ನೋಡ್ದೋನ್ ಅಲ್ಲ. ಆಕೆ ಗಂಡನ ಕಳ್ಕೊಂಡವಳು, ೧೯ ಮೊಳದ ಗೊಬ್ಬೆ ಸೀರೆ ಉಟ್ಟು ಗಂಡಸಿಗಿಂತ ಹೆಚ್ಚಾಗಿ ಜಮೀನು ಮನೆ ಮಾಡಿದ್ದಕ್ಕೇ ನಾನು ಇಂಥಾದನ್ನ ಮಾಡೋಕಾಯ್ತು. ಅವಳು ನನ್ನಂತವನನ್ನ ಹೇಗೆ ಸಹಿಸಿದಳೋ ಕಾಣೆ! ಆಕೆಯೋ ದೇವರು.

೨) ನಾನು ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಲಿರೋ ಲಾ ಕಾಲೇಜು ಹಾಸ್ಟೆಲಿನಲ್ಲಿದ್ದೆ. ೧೯೫೬ರಲ್ಲಿ ಕೆಂಗಲ್ ಹನುಮಂತಯ್ಯನೋರು, ವಿಧಾನಸೌಧ ಕಟ್ಟಿದ ಕನಸು ನೆನಸುಗಳಲ್ಲೆ; 'ನಾಳೆ ಉದ್ಘಾಟನೆ' ಎನ್ನುವಾಗ ಅಧಿಕಾರ ಕಳ್ಕೊಂಡ್ರು. ಪಶ್ಚಿಮ ದ್ವಾರದ ಕಡೆಯಿಂದ ತಾನು ಕಟ್ಟಿದ ಸೌಧ ಹಿಂದಿರುಗಿ ನೋಡುತ್ತಲೇ; ನಮ್ಮಂತಾ, ನೋಡ್ತಾ ನಿಂತಿದ್ದವರ ಕಡೆಗೆ ಕೈ ಮುಗಿತಾ ಬರ್ತಾ ಇದ್ರು. ಆತನ ಕಣ್ಣಲ್ಲಿ ನೀರು ಇಳಿತಾ ಇದ್ವು. ಆ ಸನ್ನಿವೇಶ ಬಿಡಿ! ನನ್ನಂತಾ ಕಡುಪಿನ ಮನುಷ್ಯನ ಕಣ್ಣಲ್ಲಿ ಸಹ ನೀರು ಬಂದ್ವು ಅನ್ನಿ. ಮನುಷ್ಯನ ಆಸೆ, ಜಾತಿ ಪ್ರೇಮ ಈ ದೇಶದ ದುರಂತ. ಇದಕ್ಕೆ ಕಡಿದಾಳ್ ಮಂಜಪ್ಪನವರು ಜವಾಬ್ದಾರ್ರೆ ಹೌದು.

೩) ನನಗೆ ಆಗ ಆಡೋ ವಯಸ್ಸು. ನಮ್ಮ ತೀರ್ಥಳ್ಳಿ–ಆರಗ ಕಡೆ ಮಂಜಪ್ಪ ಅಂತಾ ಒಬ್ಬರು ಮಾಸ್ತರು ಇದ್ದರು. ಗಾಂಧಿ ಹಿಂದೆ ಬಿದ್ದು ಇರೋ ಕೆಲಸ ಕಳ್ಕೊಂಡ್ರು. ಬಹಳ ಬಡತನಕ್ಕೆ ಸಿಕ್ಕಿಬಿದ್ದರು. ಅದಿರಲಿ! ಯಡೂರಲ್ಲಿ ಕಾಂಗ್ರೆಸ್ ಭಾಷಣ ಇಡಿಸಿದ್ದರು. ಅದಕ್ಕೆ ಸಾಹುಕಾರ್ ಶ್ರೀನಿವಾಸ್ ಜೋಯಿಸರನ್ನ ಅಧ್ಯಕ್ಷತೆ ಅಂತಾ ಪ್ರಚಾರ ಮಾಡಿದ್ರು. ಇದನ್ನೆಲ್ಲಾ ಪೊಲೀಸಿನೋರು ಹೆಜ್ಜೆಹೆಜ್ಜೆಗೆ ಸುದ್ದಿಕೊಡೋ ಕಾಲ. ಇದೆಲ್ಲ ರಾಮಾಯಣ ಯಾಕೆ ಅಂತಾ ಜೋಯಿಸರು ಸಭೆಗೇ ಬರಲಿಲ್ಲ. ನಾನು ಎಂಟುಹತ್ತು ವರ್ಷದ ಹುಡುಗ, ಅಲ್ಲಿ ಅಜ್ಜಿ ಮನೆಗೆ ಹೋದೋನು! ನೋಡ್ತಾ ನಿಂತಿದ್ದೆ! ಮಂಜಪ್ಪನವರು ನನ್ನ ಊರ ಕಡೇರೇ ಹೌದು. ಇನ್ನೇನು ಸಭೆ ಪ್ರಾರಂಭವಾಗಬೇಕು. 'ಹೇ ಶ್ರೀನಿವಾಸ' ಅಂದವರೇ ಅನಾಮತ್ ನನ್ನ ಟೇಬಲ್ ಮೇಲೆ ನಿಲ್ಲಿಸಿ ಭಾಷಣ ಮಾಡು ಅಂದ್ರು. ಸಭೇಲಿ ಈ ಶ್ರೀನಿವಾಸನೇ ಭಾಷಣ ಮಾಡ್ತಾನೆ. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು ಅಂದ್ರು. ಅದೇನು ಮಾಡಿದೆನೋ. ಅದೆಂತ ಹೇಳಿದೆನೋ ಕಾಣೆ.

ನಾನು ನನ್ನೂರಲ್ಲಿ ಆಡ್ತ ಇದ್ದಿವಿ. ಪೊಲೀಸಪ್ಪ ಬಂದು 'ಯಾರು ಶ್ರೀನಿವಾಸ' ಅಂದ. 'ಇವನೇ ಇವನೇ' ಅಂತಾ ನನ್ನ ತೋರಿಸಿದರು. ಹೇ ತಮಾಷೆ ಮಾಡ್ತಿರೇನ್ರಿ; ಕಾಂಗ್ರೆಸ್ ಸಭೇಲಿ

> ನಮ್ಮನೆಲಿ ಒಂದು ದೋಣಿ; ಅಂದರೆ ಮುಚ್ಚಿದರೆ ಪೆಟ್ಟಿಗೆ, ಅದೇ ಮಲಗೋ ಮಂಚ ಆಗೋದು. ಅದರೊಳಗೆ ಚಿಕ್ಕದೊಂದು ಪೆಟ್ಟಿಗೇ ಬೀಗಹಾಕಿ ಬಂಗಾರ ಇಟ್ಟಿರ್ತಿದ್ದರು. ನಮ್ಮನೆಲಿ ಹೆಗ್ಗಣ ಇಲಿ ಕಾಟ. ನನ್ನ ದೊಡ್ಡಪ್ಪನ ಮಕ್ಕಳೂ ನನ್ನ ವಯಸ್ಸಿನವರೇ ಹೌದು. ಮಲಗ್ತಿದ್ವಿ . ಕರಕರ ಕೊರಕೊರ ಅನ್ನೋ ಶಬ್ದ. ಆಗ ಎದ್ದು ಇಲಿ ಹೆಗ್ಗಣ ಹೊಡ್ಯೋದು ಇದ್ದೇ ಇತ್ತು. ದಿನಾ ಇದಿತ್ತಲಾ! ಆವೊತ್ತು ಹಿಂಗೇ ಶಬ್ದ ಆಗ್ತಾ ಇತ್ತು. ಹೇ ಸುಮ್ಮನೆ ಬಿದ್ಕೊಳೋ ಯಾವನು ಏಳ್ತನೆ ಅಂತಾ ನನ್ನಣ್ಣ ಹೇಳಿದ. ಬೆಳಗಾದರೆ ನೋಡ್ತಾರೆ! ಮನೆ ಹೆಂಚು ತೆಗೆದವರೆ! ಪೆಟ್ಟಿಗೆ ಖಾಲಿ. ಯಾರ್ಯಾರನ್ನೋ ಪೊಲೀಸಿನವರು ತಂದು ವದೆ ಬಿಟ್ಟಿದ್ದು ಅಷ್ಟೇ ನೆನಪು. ಅದೆಲ್ಲಿ ಸಿಕ್ಯಾತು!



ಅಧ್ಯಕ್ಷತೆ ವಹಿಸಿದ, ಶ್ರೀನಿವಾಸ ಯಾರ್‍ರಿ ಅಂದ್ರು. ಪೊಲೀಸಿನವರಿಗೆ ಹೆದರೋ ಕಾಲ ಅಲ್ಲವೇ! ಅಲ್ಲಿ ಪಟ್ಟಮಕ್ಕಿಯವರು ಒಬ್ಬರು ಶ್ರೀನಿವಾಸ ಅಂತಾ ಇದ್ದರು. 'ಅವರೇ ಶ್ರೀನಿವಾಸ' ಅಂತಾ ಆತನನ್ನು ತೋರಿಸಿದ್ರು. ಏನೂ ಕಾಣದ ಅವನ ಹಿಡ್ಕೊಂಡು ಹೋದರು. ಹೀಗಿತ್ತು ನಾವು ನಮ್ಮ ಸಮಾಜ ಆಗಿನ ಕಾಲದಲ್ಲಿ ಅನ್ನಿ. ಮುಂದೆ 'ಮೈಸೂರ ಚಲೋ ಚಳುವಳಿಲಿ' ಇದೇ ಮಂಜಪ್ಪ ಮತ್ತು ನಾನು ಅಲ್ಲದೆ ಇನ್ನು ಎಲ್ಲ ಸೇರಿ ಜಾತಾ ಹೊರಟೆವು. ಕಡೂರು ಬಳಿ ನಮ್ಮನ್ನು ಬಂಧಿಸಿದರು.

೪. ಜಯಚಾಮರಾಜ ಒಡೆಯರ ಕಾಲ ೧೯೪೨ರಲ್ಲಿ ತೀರ್ಥಹಳ್ಳಿ ತುಂಗಾನದಿಗೆ ಕಮಾನು ಸೇತುವೆ ಕಟ್ಟಿದ್ದು. ಅದೇ ನಮ್ಮ ಪುಟ್ಟಪ್ಪನವರದ್ದು 'ದೋಣಿಸಾಗಲಿ ಮುಂದೆ ಹೋಗಲಿ' ಅಂತಾ ಬರುತ್ತಲ್ಲಪ್ಪ ಅದೇ ಜಾಗ. ಆಚೆ ಕಾಡಲ್ಲಿ ಮಿಲಿಟರಿ ಕ್ಯಾಂಪಿತ್ತು. ಆಗ ಸ್ವಾತಂತ್ರ್ಯ ಹೋರಾಟದ ಕಾಲ. ಜನಾರ್ಧನ ನಾಯಕರು ಮುಂದಾಳು. ಕಾಳಿಂಗ ರಾಯರು, ಪುಟ್ಟರಾಯರು, ಉಡುಪಿ ಮಂಜಪ್ಪನವರು ಇಂತಹವರೆಲ್ಲ ತೀರ್ಥಹಳ್ಳಿ ಕಡೆ ಹೋರಾಟಗಾರರು. ನನಗೆ ಇನ್ನು ವಯಸ್ಸು ಆಗಿರಲಿಲ್ಲ. ಅದು ಹೇಗೋ ನನ್ನ ಕಿವಿಗೆ ಕಮಾನು ಸೇತುವೆ ಉಡಾಯಿಸೋ ವಿಚಾರ ಸಿಕ್ತು. ಓಡೋಗಿ ಇನ್ಸ್‌ಪೆಕ್ಟರ್‌ಗೆ ಹೇಳಿದೆ. ಅದೇನೋ ನನಗೆ ಗೊತ್ತಿಲ್ಲ! ಇಂಥ ಸೇತುವೆ ಒಡೆದರೆ ಹೇಗೆ! ಉಳಿಸಬೇಕು ಅಂತಾ ಮನಸಿಗೆ ಬಂದುಬಿಡ್ತು. ಉಳಿತು.

೫. ಶಾಂತವೇರಿ ಗೋಪಾಲಗೌಡರಿಗಿಂತ ನಾನು ವಯಸ್ಸಿನಲ್ಲಿ ಚಿಕ್ಕೋನು. ಆದರೂ ನಾವಾಗಲೇ ಈಚಲ ಮರ, ಕಡಿಯೋ ಕೆಲಸ, ಟೆಲಿಫೋನ್ ವೈರ್ ಕೀಳೋ ಕೆಲಸ ಇಂಥ ಉಲ್ಲಂಘನೆಗೆ ಕೈಹಾಕಿದ್ದೆವು. ಮುಂದೆ ದೇಶಕ್ಕೆ ಸ್ವತಂತ್ರ ಬಂದ ಮೇಲೆ ಕಾಂಗ್ರೆಸಿನ ಬದರಿ ನಾರಾಯಣ ವಿರುದ್ಧ ಸೋಷಲಿಸ್ಟ್ ಪಾರ್ಟಿಯಿಂದ ಗೋಪಾಲಗೌಡರು ನಿಂತರು. ನಾವು ಊರೂರು ಮೇಲೆ ಪ್ರಚಾರಕ್ಕೆ ನಡ್ಕೊಂತಾ ಹೋಗೋದು; ಅಲ್ಲೆ ಮನೆಮನೇಲಿ ಊಟ ತಿಂಡಿ ಮುಗಿಸೋದು. ಉಂಡವರೇ ವಲ್ಲಿ ಹಾಸಿ ಓಟಿಗೊಂದು ರೂಪಾಯಿನಂತೆ ನೀವು ಓಟು ಹಾಕೋರು ಕೊಡಬೇಕು ಅಂತಾ ಕುಳಿತುಬಿಡ್ತಿದ್ದಿವಿ. ಅದನ್ನು ಒಟ್ಟು ಹಾಕಿ ಸಾಯಂಕಾಲ ವಲ್ಲಿ ಗಂಟು ಕೊಡವಿ ಗೌಡ್ರ ಖರ್ಚಿಗಂತಾ ಕೊಡೋದು. ಈಗಿನ ರಾಜಕೀಯ ನೋಡಿ! ಅಯ್ಯೋ ದೇವರೇ! ಏನಾಗೋಯ್ತು ಕಾಲ! ನಾನು ರೈತರಪರ ಕಾರ್ಮಿಕರ ಪರ ನಿಂತೋನು! ನಾನು ಕಮ್ಯುನಿಸ್ಟ್ ಪಾರ್ಟಿ ಬದಲಾಯಿಸಿದ್ರೆ ಎಂದೋ ಎಂ.ಎಲ್.ಎ. ಆಗಬಹುದಿತ್ತು. ನಾವು ಸೋಲ್ತಿವಿ ಅಂತಾನೇ ಸ್ಪರ್ಧೆಗೆ ಇಳಿತಿದ್ದಿವಿ. ಹಾಗೇ ನಾನು ಸೋತಿದ್ದು ಉಂಟು. ಅದು ಸೋಲು ಅಂತಾ ನಾನು ತಿಳಿದೇಯಿಲ್ಲ.

೬) ನಾನೆಂತಾ ಹೋರಾಟಗಾರ ಬಿಡ್ರಿ. ನನ್ನಂಥವರೆಷ್ಟು ಜನ ಈ ದೇಶದಲ್ಲಿಲ್ಲ! ಹಾಂ ನನ್ನ ಹೋರಾಟದಲ್ಲಿ ನೆನಪುಳಿಯೋ ಅಂತಾದ್ದು 'ವರಾಹಿ ಸಂತ್ರಸ್ತರ ಹೋರಾಟ ಸಮಿತಿ'. ಅದಕ್ಕೆ ನನ್ನನ್ನ ಅಧ್ಯಕ್ಷ ಅಂತಾ ಮಾಡಿದರು. ಆಗಿನ ಪರಿಸ್ಥಿತಿ ಏನಂತೀರಿ! ಅಡವಿಯೊಳಗಿದ್ದ ಏನೂ ಅರಿಯದ ಜನ. ಸರ್ವೆನಂಬರು ಅಂದರೇನು ಅಂತಲೇ ಗೊತ್ತಿಲ್ಲದೋರು. ಇಂತಾವರನ್ನ ವಕ್ಕಲೆಬ್ಬಿಸೋ ಕಾಲ. ಲಿಂಗನಮಕ್ಕಿ, ಚಕ್ರ, ಸಾವೆಹಕ್ಲು ಇಲ್ಲೆಲ್ಲ ಏನೆಲ್ಲಾ ಅನಾವುತ ಆಗಿತ್ತು ಅಂತಾ ತಿಳಿದಿತ್ತು. (ಕಾಗೋಡು ಸತ್ಯಾಗ್ರಹ ಆಗಿತ್ತು). ಆಗ ಅಬ್ಬೆಪಾರಿಗಳಾಗಿ ಎಷ್ಟೋ ಜನ ಸತ್ತು ಹೋಗಿದ್ದರು. ಕಾನೂನೇ ಸತ್ತು ಹೋಗಿತ್ತು ಅನ್ನಿ. ವರಾಹಿ ವಿಚಾರ ಹೇಳ್ತೀನಿ ಕೇಳಿ. ಆ ಕಾಡು ಜಗತ್ತಿನ ಬೃಹತ್ ಅಡವಿಯಲ್ಲಿ ಇದೊಂದು. ಆ ಕಾಡು ಕಡಿತಾ ಇದ್ದರೆ ಈಚೆಗೆ ಬಂದ ಹಂದಿಗಳು ಬೆಳ್ಳಗಿದ್ದವು ಅಂತೀನಿ. ಸೂರ್ಯನ ಬೆಳಕೇ ಬೀಳದ ಕಾಡು ಕಡಿದಿದ್ದು ೨೨ ಸಾವಿರ ಹೆಕ್ಟೇರ್ ಕಾಡು. ವಿದ್ಯುತ್ ಅಲ್ಲಿಂದ ಬರೋದು ಅಷ್ಟರಲ್ಲೇ ಇರಲಿ ಬಿಡಿ! ಗೇಣಿ ಕಾಯ್ದೆ ಬಂದ ಸಮಯ. ಸಾಹುಕಾರರಾದ 'ಶೀರ್‍ನಾಳಿಯವರಿಗೋಸ್ಕರ ಈ ಮುಳುಗಡೆ' ಅಂತಾ ನಮಗೇನು ಗೊತ್ತಿಲ್ಲದ ವಿಚಾರ ಆಗಿರ್‍ಲಿಲ್ಲ. ಏನು ಮಾಡೋದು! ದೇವರಾಜ ಅರಸರ ಬಳಿ ರೈತರ ಪರ ನಿಯೋಗ ಹೋದಿವಿ. ಆಯ್ತು ಆಯ್ತು. 'ನೀವೆಲ್ಲಾ ದೇಶಕ್ಕೆ ತ್ಯಾಗ ಮಾಡಬೇಕ್ರಿ' ಎಂದು ಗುಟುರಿಕೆ ಹಾಕಿ ಕಳುಹಿಸಿದರು.

ಆಮೇಲೆ ಗುಂಡೂರಾವ್ ಬಂದರು. ಮತ್ತೆ ಹೋದಿವಿ. ಎಲ್ಲಾ ಚೀಫ್ ಸೆಕ್ರೆಟರಿ, ಸೀನಿಯರ್ ಆಫೀಸರನ್ನೆಲ್ಲಾ ಹಾಜರಿರಿಸಿದ್ದರು. ನಾನು ವಿಚಾರವೆಲ್ಲಾ ವಿವರವಾಗಿ ಮಂಡಿಸಿದೆ. ಏನೂ ಅರಿಯದ ಕಾಡು ಜನಸ್ವಾಮಿ, ಎಲ್ಲಿಗೆ ಹೋಗೋದು, ಈಗ ನೀವು ನಿಗದಿಪಡಿಸಿರೋ ಹಣದಲ್ಲಿ ಏನು ಸಿಗುತ್ತೆ ಅಂತೆಲ್ಲ ವಾದ ಮಂಡಿಸಿದೆ. ಪಂಚೆವುಟ್ಟ, ವಲ್ಲಿ ಹೆಗಲ ಮೇಲೆ ಹಾಕಿದ್ದ ನನ್ನ ದಿರಿಸು ನೋಡಿ; ಇವರು ತಿಳ್ಕೊಂಡಿರೋಂತೆ ಕಾಣ್ತಾರೆ ಅಂದ್ರು. ಅಲ್ಲೆ ಪಕ್ಕದಲ್ಲಿದ್ದ ಕಾಗೋಡು ತಿಮ್ಮಪ್ಪನವರು ನನ್ನ ಚುಟುಕದಲ್ಲಿ ಪರಿಚಯಿಸಿದರು. ಇರಲಿ, ಸಂತೋಷ ಅಂದವರೇ ಎಕರೆಗೆ ಅಡಿಕೆ ತೋಟಕ್ಕೆ ೪೦ ಸಾವಿರ, ಗದ್ದೆಗೆ ೧೭ ಸಾವಿರ, ಮನೆಗೆ ಇಂತಿಷ್ಟು, ಕಡೆಗೆ ಏನೂ ರಿಕಾರ್ಡಿಲ್ಲದ ಜಾಗ, ಮನೆಗೂ ಇಷ್ಟು ಕೊಡಬೇಕು ಅಂತಾ ತೀರ್ಮಾನ ಹೇಳಿಬಿಟ್ಟರು. ಆ ಕಾಲಕ್ಕೆ ಅದು ರೈತರಿಗೆ ದೊಡ್ಡ ಮೊತ್ತ. 'ನಾವು ಹಾರಂಗಿ ಮುಳುಗಡೆಲಿ ಮನೆಮಠ ಕಳ್ಕೊಂಡವರೇ ಹೌದು; ಮುಂದೆ ಏನೂ ಹೇಳಬೇಡಿ; ರೈತರ ಕಷ್ಟ ಏನೂ ಅಂತಾ ಗೊತ್ತು' ಎಂದು ಖಡಾಖಂಡಿತವಾಗಿ ಅಧಿಕಾರಿಗಳಿಗೆ ಹೇಳಿದರು. ಅದೇ ರೀತಿ ಆದೇಶ ಗಳಾದವು. ನಾವು ರೈತರನ್ನ ಒಟ್ಟು ಹಾಕಿದೆವು. ಹಣಕೊಡದೆ ಜಾಗ ಬಿಡೋರಲ್ಲ ಅಂತಾ ಹೇಳಿ ಚಡೇ ಕೂತಿವಿ. ಮುಳುಗಡೆ ಕಚೇರಿಗಳಿಗೆ ರೈತರ ದನಕರು ಕಟ್ಟಿಸಿದ್ದು ಉಂಟು. ಅನಂತರ ನಮ್ಮ ಅಲ್ಲಿನ ಹೋರಾಟ ಉಳಿದೆಡೆಗೆ ಒಂದು ಮಾದರಿಯಾದಂತೆ ಆಯಿತು. ಅದಿರಲಿ! ಏನು ಸುಡುಗಾಡು ಸರ್ಕಾರಗಳೋ! ರೈತರ ಗೋಳ ಕೇಳೋರ್ ಇಲ್ಲವಲ್ಲ! ಗುಂಡೂರಾಯನ ಇತಿಹಾಸ ಏನಾದರಿರಲಿ; ಒಂದು ಮನಸ್ಸಿರಬೇಡವೇ! ಆತನಿಗೆ ಆ ಮನಸಿತ್ತು.




೭. ಅಯ್ಯೋ ಆಗಿನ ಮಲೆನಾಡು ಏನು ಹೇಳ್ತೀರಿ; ಹುಟ್ಟಿದೋರು, ಹೆತ್ತೋರು, ದುಡಿಯೋರು, ಇವೊತ್ತಿದ್ದೋರು ನಾಳೆ ಇರ್‍ತಿರ್‍ಲಿಲ್ಲ. ನನಗೆ ಒಂದೆರಡು ವರ್ಷದ ಮಗುನಲ್ಲೆ ಅಪ್ಪ ಸತ್ತೋದರು. ತಾಯಿ ಬೇಸಾಯಕ್ಕೆ ಇಳಿದಳು. ಸಾಕಿದಳು ಓದಿಸಿದಳು. ಆದರೆ ನಾನು ಮನೆಬಿಟ್ಟು ಸಮಾಜಕಾರ್ಯ ಅಂತಾ ಇಳಿದುಬಿಟ್ಟೆ. ಹೀಗೀಗೆ ಅಂತಾ ಒಂದಿನ ಹಂಗಿಸ್ಲಿಲ್ಲ. ಹೇಗೆ ಸಹಿಸಿಕೊಂಡಿರಬೇಕು. ಮಾತಾಯಿ! ಆಗ ಒಂಥರಾ ಗಾಣಗುದ್ದುಗೆ ಜ್ವರ ಅಂತಾ ಬಂದು ಬಿಡೋದು. ಅದು ೧೯೩೧ ಜಪಾನ್–ಚೈನಾ ಯುದ್ಧ ಕಾರಣ ಅದೊಂದು ಫ್ಲೂ ತರಾ ಬರ್‍ತಿತ್ತು ಅಂತಾರಪ್ಪಾ! ಅದೆಂತದೋ ಸುಡುಗಾಡು ಅದಿರಲಿ! ನನ್ನಜ್ಜ ಬೊಮ್ಮೆಗೌಡ ದೊಡ್ಡ ಜಮೀನ್ದಾರ್‍ರು. ಆಗ ವಿಠಲ್ ರಾವ್ ಅನ್ನೋ ಸಾಹುಕಾರ ಜೊತೆ ಬೊಂಬಯಿ ವರೆಗೂ ವ್ಯಾಪಾರ ಮಾಡ್ತಿದ್ದರು. ಆಗ ಸೊಂಟದಲ್ಲಿ ಚಿನ್ನದ ನಾಣ್ಯ ಕಟ್ಕೊಂಡು ಬರ್‍ತ ಇದ್ದರಂತೆ.

ನಮ್ಮನೆಲಿ ಒಂದು ದೋಣಿ; ಅಂದರೆ ಮುಚ್ಚಿದರೆ ಪೆಟ್ಟಿಗೆ, ಅದೇ ಮಲಗೋ ಮಂಚ ಆಗೋದು. ಅದರೊಳಗೆ ಚಿಕ್ಕದೊಂದು ಪೆಟ್ಟಿಗೇ ಬೀಗಹಾಕಿ ಬಂಗಾರ ಇಟ್ಟಿರ್‍ತಿದ್ದರು. ನಮ್ಮನೆಲಿ ಹೆಗ್ಗಣ ಇಲಿ ಕಾಟ. ನನ್ನ ದೊಡ್ಡಪ್ಪನ ಮಕ್ಕಳೂ ನನ್ನ ವಯಸ್ಸಿನವರೇ ಹೌದು. ಮಲಗ್ತಿದ್ವಿ. ಕರಕರ ಕೊರಕೊರ ಅನ್ನೋ ಶಬ್ದ. ಆಗ ಎದ್ದು ಇಲಿ ಹೆಗ್ಗಣ ಹೊಡ್ಯೋದು ಇದ್ದೇ ಇತ್ತು. ದಿನಾ ಇದಿತ್ತಲಾ! ಆವೊತ್ತು ಹಿಂಗೇ ಶಬ್ದ ಆಗ್ತಾ ಇತ್ತು. ಹೇ ಸುಮ್ಮನೆ ಬಿದ್ಕೊಳ್ಳೋ ಯಾವನು ಏಳ್ತನೆ ಅಂತಾ ನನ್ನಣ್ಣ ಹೇಳಿದ. ಬೆಳಗಾದರೆ ನೋಡ್ತಾರೆ! ಮನೆ ಹೆಂಚು ತೆಗೆದವರೆ! ಪೆಟ್ಟಿಗೆ ಖಾಲಿ. ಯಾರ್‍ಯಾರನ್ನೋ ಪೊಲೀಸಿನವರು ತಂದು ವದೆ ಬಿಟ್ಟಿದ್ದು ಅಷ್ಟೇ ನೆನಪು. ಅದೆಲ್ಲಿ ಸಿಕ್ಯಾತು! ನಾನು ಆಗ ಸಣ್ಣ ಹುಡುಗ ಅನ್ನಿ.

**ಡಾ|| ರಾಜೇಗೌಡ ಹೊಸಹಳ್ಳಿ**
ನಂ. ೪೧೩, ಟೀಚರ್ಸ್ ಕಾಲೋನಿ, ನಾಗರಭಾವಿ
ಬೆಂಗಳೂರು – ೫೬೦ ೦೭೨
email : rajegowdahr@gmail.com

# ಆಲೂರು ವೆಂಕಟರಾಯರು

## ಬಹುಮುಖಿ ಕರ್ನಾಟಕ ಏಕೀಕರಣ ಅಸಾಧ್ಯಗೊಳಿಸಿವೆಯೇ ಭೌಗೋಳಿಕ ಕರ್ನಾಟಕ ಏಕೀಕರಣ ನೇತಾರನ ಚಿಂತನೆಗಳು?

ಡಾ॥ ಸರ್ಜಾಶಂಕರ ಹರಳಿಮಠ

**ಕ**ರ್ನಾಟಕ ಏಕೀಕರಣ ಚಳುವಳಿಯ ಮುಂಚೂಣಿ ನಾಯಕರಾದ ಆಲೂರು ವೆಂಕಟರಾಯರು (೧೮೮೦–೧೯೬೪) ಧಾರವಾಡ ಮತ್ತು ಬಳ್ಳಾರಿಯನ್ನು ತಮ್ಮ ಕಾರ್ಯರಂಗವನ್ನಾಗಿ ಮಾಡಿಕೊಂಡಿದ್ದರು. ಏಕೀಕರಣ ಚಳುವಳಿಗೆ ತಮ್ಮನ್ನು ಪೂರ್ಣ ಅರ್ಪಿಸಿಕೊಳ್ಳುವ ಮುನ್ನ ಆಲೂರರು ಕಾಂಗ್ರೆಸ್ಸಿನ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯರಾಗಿದ್ದರು. ವೃತ್ತಿಯಲ್ಲಿ ವಕೀಲರಾಗಿದ್ದ ಆಲೂರರು 'ಜಯಕರ್ನಾಟಕ' ಪತ್ರಿಕೆಯ ಸಂಪಾದಕ, ಪ್ರಕಾಶಕರಾಗಿ ಸೇವೆ ಸಲ್ಲಿಸುತ್ತ, ದೇಶಾಭಿಮಾನ, ಭಾಷಾಭಿಮಾನ ಮೂಡಿಸುವ ಪ್ರಯತ್ನ ಮಾಡಿದರು.

ಕರ್ನಾಟಕ ಏಕೀಕರಣ ಚಳುವಳಿಯನ್ನು ಮುನ್ನಡೆಸಿದ ಆಲೂರು ವೆಂಕಟರಾಯರು ಅವರೇ ಸ್ವತಃ ದಾಖಲಿಸಿರುವಂತೆ ೧೭ ವರ್ಷಗಳ ಕಾಲ ಸ್ವಂತ ಖರ್ಚಿನಲ್ಲಿ ಕರ್ನಾಟಕದ ಇತಿಹಾಸ ಸಂಶೋಧಿಸಿದರು. ೧೯೧೦ರಿಂದ ೧೯೧೬ರ ವರೆಗೆ ಅವರು ಕರ್ನಾಟಕದಾದ್ಯಂತ ಪ್ರವಾಸ ಮಾಡಿ ಸಂಶೋಧನೆ ನಡೆಸಿದರು. ಇಷ್ಟು ಮಾತ್ರವಲ್ಲದೆ ತನ್ನ ಸ್ವಂತ ಗಳಿಕೆ ಮತ್ತು ಹಿರಿಯರ ಆಸ್ತಿಪಾಸ್ತಿಗಳನ್ನು ಸಾರ್ವಜನಿಕ ಜೀವನಕ್ಕಾಗಿ ಧಾರೆಯೆರೆದವರು ವೆಂಕಟರಾಯರು.

**ಭೌಗೋಳಿಕ ಕರ್ನಾಟಕದ ಮೇಲೆ ಇವರು ಕಟ್ಟಬಯಸಿದ್ದು ಸನಾತನ ಧರ್ಮ, ಹಿಂದುತ್ವ, ಬ್ರಾಹ್ಮಣತ್ವದಂತಹ ತರತಮಗಳನ್ನು ಪೋಷಿಸುವ ಮೌಲ್ಯಗಳ ಕರ್ನಾಟಕವನ್ನೇ ಹೊರತು ಸಾವಿರಾರು ವರ್ಷಗಳಿಂದ ಕನ್ನಡದ ಸಾಹಿತಿಗಳು, ವಚನಕಾರರು, ತತ್ವಪದಕಾರರು ಕಟ್ಟಿಟ್ಟಂತಹ ಜೀವಪರ ಮೌಲ್ಯಗಳುಳ್ಳ ಕರ್ನಾಟಕವನ್ನಲ್ಲ. ಇಂತಹ ಪರಂಪರೆಯ ವಾರಸುದಾರರು ವೈಚಾರಿಕವಾಗಿ ಕನ್ನಡ ಪ್ರಜ್ಞೆಯನ್ನು ರೂಪಿಸಲು ಯತ್ನಿಸಿದ ಶಂಬಾ ಜೋಶಿಯವರು. ಆಲೂರು ಮತ್ತು ಶಂಬಾ ಕಂಡುಹಿಡಿದು ಕೊಟ್ಟ ಎರಡು 'ಕರ್ನಾಟಕಗಳಲ್ಲಿ' ಯಾವ ಕರ್ನಾಟಕವನ್ನು, ಯಾವ ಕರ್ನಾಟಕದ ಯಾವ ಅಂಶಗಳನ್ನು ಸ್ವೀಕರಿಸುತ್ತೇವೆ, ಯಾವ ಅಂಶಗಳನ್ನು ತ್ಯಜಿಸುತ್ತೇವೆ, ಒಟ್ಟಾರೆ ಯಾವ ಕರ್ನಾಟಕವನ್ನು ಮಾದರಿಯನ್ನಾಗಿ ಸ್ವೀಕರಿಸುತ್ತೇವೆ ಎನ್ನುವುದು ನಾವು ಕಟ್ಟಬಯಸುವ ಕರ್ನಾಟಕದ ಸ್ವರೂಪವನ್ನು ನಿರ್ಧರಿಸುವ ಸಂಗತಿಯಾಗಿದೆ.**

ಎಂದು ಘೋಷಿಸಿಕೊಂಡಂತೆ ಆಲೂರರು ಕರ್ನಾಟಕ ಏಕೀಕರಣಕ್ಕಾಗಿ ಕೊನೆಯವರೆಗೂ ದುಡಿದರು. ವಾಚನಾಲಯಗಳು ಕರ್ನಾಟಕತ್ವದಲ್ಲಿ ರಾಜಕಾರಣ ಮತ್ತು ವಾಙ್ಮಯಗಳನ್ನು ಜೋಡಿಸುವ ಕೊಂಡಿಗಳು. ಅವು ಎಲ್ಲೆಡೆಗೂ ಸ್ಥಾಪಿತವಾದರೆ ಅಖಂಡ ಕರ್ನಾಟಕವು ನಿರ್ಮಾಣವಾಗುತ್ತವೆ ಎಂದು ಚಿಂತಿಸಿದ ಆಲೂರರು ಕರ್ನಾಟಕದಾದ್ಯಂತ ವಾಚನಾಲಯಗಳನ್ನು ಆರಂಭಿಸಲು ಕೊಪ್ಪಳದ ಶ್ರೀ ಜಯರಾಮಾಚಾರ್ಯರನ್ನು ನೇಮಿಸಿದರು.

ಕನ್ನಡವೆಂದರೆ ಕೇವಲ ಒಂದು ಭಾಷೆಯಲ್ಲ. ಆ ಭಾಷೆಯನ್ನಾಡುವ ಜನರ ಬದುಕೂ ಭಾಷೆಯಷ್ಟೇ ಮುಖ್ಯ ಎಂದು ಆಲೂರರು ಭಾವಿಸುತ್ತಾರೆ. 'ವಾಙ್ಮಯದಲ್ಲಿ ಕರ್ನಾಟಕತ್ವ – ಕರ್ನಾಟಕತ್ವವೆಂದರೆ ಕನ್ನಡ ವಾಙ್ಮಯ ಮಾತ್ರವಲ್ಲ ಕನ್ನಡ ನುಡಿಯೆಂದರೆ, ಕರ್ನಾಟಕ ಸರ್ವಸ್ವವೆಂದು ತಿಳಿಯುವ ಒಂದು ವರ್ಗವು ನಮ್ಮಲ್ಲಿದೆ. ಅದು ಅಷ್ಟು ಸರಿಯಲ್ಲ. "ಅತ್ಯತಿಷ್ಠತ್ ದಶಾಂಗುಲಂ" ಎಂಬಂತೆ ಕರ್ನಾಟಕತ್ವವು ವ್ಯಾಪಾರ, ಕಲೆ, ಭೂಸುಧಾರಣೆ, ಬಂದರ ಸುಧಾರಣೆ, ಆಯುರ್ವೇದ ಮುಂತಾದ ಅನೇಕ ವಿಚಾರಗಳನ್ನು ಒಳಗೊಂಡಿದೆ' ಎನ್ನುವ ಸ್ಪಷ್ಟತೆ ಆಲೂರರಲ್ಲಿತ್ತು. ಕನ್ನಡವನ್ನು ಯಜಮಾನ ಭಾಷೆಯಾಗಿಯೂ ಇಲ್ಲಿ ಇರುವ

ಆಲೂರರ ಪ್ರಯತ್ನದ ಫಲವಾಗಿ ೧೯೨೦ರಲ್ಲಿ ಜರುಗಿದ ಅಖಿಲ ಕರ್ನಾಟಕ ರಾಷ್ಟ್ರೀಯ ಪರಿಷತ್ತಿನಲ್ಲಿ ೨೦೦೦ ಪ್ರತಿನಿಧಿಗಳು ಕೂಡಿ ಕರ್ನಾಟಕದ ಹಿತಕ್ಕೆ ಸಂಬಂಧಿಸಿದ ಅನೇಕ ವಿಷಯಗಳನ್ನು ಚರ್ಚಿಸಿದರು. ಅಂದು ಚರ್ಚಿಸಲ್ಪಟ್ಟ ವಿಷಯಗಳ ವ್ಯಾಪ್ತಿ ತುಂಬ ದೊಡ್ಡದು. ರಾಜಕಾರಣ, ವಾಙ್ಮಯ, ವ್ಯಾಪಾರ, ವೃತ್ತಪತ್ರಿಕೆಗಳ ಬೆಳವಣಿಗೆ, ಕರ್ನಾಟಕದಲ್ಲಿನ ರೈಲ್ವೆಗಳ ತೊಂದರೆ, ಪೋಸ್ಟುಗಳ ತೊಂದರೆ, ಬಂದರು, ನೀರು ಕಾಲುವೆ, ಹೈಕೋರ್ಟ್, ವಿಶ್ವವಿದ್ಯಾಲಯ, ಮೋಟಾರಿನ ಅನಾನುಕೂಲತೆಗಳು, ರಸ್ತೆಗಳು, ಸೇತುವೆಗಳು, ಆಂಧ್ರ–ಮರಾಠರ ಆಕ್ರಮಣ, ಕನ್ನಡ ಶಾಲೆ, ಕಾಲೇಜು, ಗಡಿನಾಡಿನ ಜಾಗೃತಿ, ಕರ್ನಾಟಕ ಸಂಗೀತ ಮತ್ತು ಕಲೆಗಳು, ನಾಟಕ, ಸಿನಿಮಾ, ವಾಚನಾಲಯ ಇತ್ಯಾದಿ ಅನೇಕ ವಿಷಯಗಳು ಅಂದು ಚರ್ಚಿಸಲ್ಪಟ್ಟವು.

'ಕರ್ನಾಟಕದ ಸರ್ವಾಂಗೀಣ ಉನ್ನತಿ' ಎಂಬೀ ಮೂರು ಶಬ್ದಗಳಲ್ಲಿ ನನ್ನ ಜಗತ್ತೆಲ್ಲವೂ ಅಡಕವಾಗಿದೆ



ಉಪಭಾಷೆಗಳನ್ನು ಅಧೀನ ಭಾಷೆಯಂತೆ ನೋಡುವ ಮನೋಭಾವವನ್ನು ಆಲೂರರು ವಿರೋಧಿಸುತ್ತ 'ಕರ್ನಾಟಕದಲ್ಲಿ ಕನ್ನಡವಲ್ಲದೆ ತುಳು, ಕೊಂಕಣಿ, ಕೊಡಗು ಮುಂತಾದ ಉಪಭಾಷೆಗಳಿವೆ. ಈ ಜನರಿಗೆ ತಮ್ಮ ಮಾತೃಭಾಷೆಯ ಅಭಿಮಾನವನ್ನು ಬಿಡಹೇಳುವುದು ಸರಿಯಲ್ಲ' ಎನ್ನುತ್ತಾರೆ. ಇದರೊಂದಿಗೆ 'ಈಗಿನ ದಿವಸಗಳಲ್ಲಿ ಮಾತೃಭಾಷೆಗಿಂತ ದೇಶಭಾಷೆಗೆ ಒಂದು ಬಗೆಯ ಮಹತ್ವವಿದೆ. ಆದ್ದರಿಂದ ಎಲ್ಲರೂ ದೇಶಭಾಷೆಯನ್ನು ಕಲಿಯುವುದು ಅತ್ಯವಶ್ಯವು' ಎಂದು ಉಪಭಾಷೆಗಳನ್ನಾಡುವವರು ದೇಶಭಾಷೆಯ ಮಹತ್ವವನ್ನು ಅರಿತು ಅದನ್ನು ಕಲಿಯಬೇಕೆಂದು ಸೂಚಿಸುತ್ತಾರೆ. ಹೀಗಿದ್ದರೂ ಆಲೂರರಲ್ಲಿ ಕರ್ನಾಟಕತ್ವದ ನಿರ್ಮಿತಿಯಲ್ಲಿ ಭಾಷೆ ಒಂದು ಅಂತಸ್ಥ ಘಟಕ ಮಾತ್ರವಾಗಿರುತ್ತದೆ. ಅವರಿಗೆ ಕರ್ನಾಟಕತ್ವದ ಚರ್ಚೆಗೆ ಭಾಷೆ ಅಷ್ಟಾಗಿ ಮುಖ್ಯವಾಗುವುದಿಲ್ಲ. ಕರ್ನಾಟಕ ಸಾಹಿತ್ಯ

ಪರಿಷತ್ತನ್ನು 'ಕನ್ನಡ ಸಾಹಿತ್ಯ ಪರಿಷತ್ತು' ಎಂದು ಬದಲಿಸಲು ಒಪ್ಪದೆ ಬಿ.ಎಂ.ಶ್ರೀ. ಜತೆ ಭಿನ್ನಮತ ಹೊಂದಿ ಸಾಹಿತ್ಯ ಪರಿಷತ್ತಿಗೆ ಆಲೂರರು ರಾಜೀನಾಮೆ ನೀಡಿದ ಪ್ರಸಂಗ ಅವರ ಹೆಚ್ಚಿನ ಒತ್ತು ಭೌಗೋಳಿಕತೆಗೆ (ಕರ್ನಾಟಕ) ಇರುವುದನ್ನು ಹೇಳುತ್ತದೆ. ಭೌಗೋಳಿಕವಾಗಿ ಕರ್ನಾಟಕ ಒಂದಾದರೆ ಇಲ್ಲಿನ ಸಮಸ್ಯೆಗಳು ಬಗೆಹರಿಯಬಹುದು ಎಂಬ ನಂಬಿಕೆ ಇದರ ಹಿನ್ನೆಲೆಯಲ್ಲಿರಬಹುದು.

ಏಕೀಕರಣದ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕ ಮತ್ತು ಮೈಸೂರು ಕರ್ನಾಟಕ ಎಂಬ ಎರಡು ಗುಂಪುಗಳ ನಡುವೆ ಸದಾ ಸಂಘರ್ಷ ನಡೆಯುತ್ತಲೇ ಇತ್ತು. ಇದಕ್ಕೆ ರಾಜಕಾರಣ, ಜಾತಿ ಯಂತಹ ಭಾಷಿಕೇತರ ಕಾರಣಗಳು ಮುಖ್ಯವಾಗಿದ್ದವು. ಈ ಚಳುವಳಿಯ ಸಂದರ್ಭದಲ್ಲಿಯೇ ಕನ್ನಡ ಸಾಹಿತ್ಯ ಪರಿಷತ್ತು ಧಾರವಾಡದಲ್ಲಿರಬೇಕೋ ಅಥವಾ ಮೈಸೂರಿನಲ್ಲಿರಬೇಕೋ ಎಂಬ ಚರ್ಚೆ ಏರ್ಪಟ್ಟಿತು. ಆಗ ಆಲೂರರು ತಮ್ಮ ಧಾರವಾಡ ಪ್ರಾಂತ್ಯದಲ್ಲಿಯೇ ಪರಿಷತ್ತು ಇರಬೇಕು ಎಂದು ಹಠ ಹಿಡಿಯದೆ ಅದು ಬೆಂಗಳೂರಿನಲ್ಲಿ ಸ್ಥಾಪಿತವಾಗಲು ಕಾರಣರಾದರು. ಆಲೂರರು ಧಾರವಾಡದಲ್ಲಿನ ಮರಾಠ ಲೈಬ್ರರಿಯನ್ನು ಸ್ವಲ್ಪ ಕಾಲ ಸ್ವತಃ ನಡೆಸಿ ನಂತರ ಅದನ್ನು ಮರಾಠಿಗರಿಗೆ ಬಿಟ್ಟುಕೊಟ್ಟರು. ಆಲೂರರು ಕೊನೆಯವರೆಗೂ ತಮ್ಮ ಲೈಬ್ರರಿಯಲ್ಲಿ ನೂರಾರು ಮರಾಠಿ ಪುಸ್ತಕಗಳನ್ನು ಇಟ್ಟುಕೊಂಡಿದ್ದರು. 'ಮಾತೃಭಾಷೆಯ ಅಭಿಮಾನವನ್ನು ಬಿಡಹೇಳುವುದು ಸರಿಯಲ್ಲ' ಎಂದು ಉಪಭಾಷೆಗಳಿಗೆ ಹೇಳುವಾಗ ಆ ಪಟ್ಟಿಯಲ್ಲಿ ಉರ್ದು ಬಾರದಿರುವುದು ಒಂದು ಕೊರತೆ ಯೆನಿಸಿದರೂ ಉಳಿದಂತೆ ಮೇಲ್ಕಂಡ ಎಲ್ಲವೂ ಆಲೂರರ ಉದಾರವಾದಿ ಹಾಗೂ ಮುಕ್ತ ಧೋರಣೆಗೆ ನಿದರ್ಶನಗಳಾಗಿವೆ.

ಆಲೂರರ 'ಕರ್ನಾಟಕತ್ವದ ವಿಕಾಸ' ಕೃತಿಗೆ ಮುನ್ನುಡಿ ಬರೆಯುತ್ತ ಹಂಪನಾ ಅವರು 'ಹಿಂದೂ ಸನಾತನ ಧರ್ಮ, ವರ್ಣಾಶ್ರಮ ಪದ್ಧತಿ, ಶ್ರೀಮನ್ಮಧ್ವಾಚಾರ್ಯರ ದ್ವೈತ ಸಭಾ ಇವುಗಳಲ್ಲಿ ಅವರಿಗಿದ್ದ ನಂಬಿಕೆಗನುಗುಣವಾಗಿಯೇ ಅವರು ಕೊನೆಯವರೆಗೂ ಬಾಳಿದರಾದರೂ ಇವನ್ನೆಲ್ಲ ತನ್ನ ಮನೆಯಮಟ್ಟಿಗಷ್ಟೇ ಇಟ್ಟುಕೊಂಡು ಸಾರ್ವಜನಿಕ ಜೀವನದಲ್ಲಿ ಎಂದೂ ತರಲಿಲ್ಲ' ಎಂದು ಅಭಿಪ್ರಾಯ ಪಡುತ್ತಾರೆ. ಹಂಪನಾ ಅವರ ಮಾತಿನಲ್ಲಿ ಎರಡು ದನಿಗಳು ಕೇಳುತ್ತಿವೆ. ಒಂದು, ವ್ಯಕ್ತಿಯ ವೈಯಕ್ತಿಕ ನಂಬಿಕೆಗಳು ಸಾರ್ವಜನಿಕ ಬದುಕನ್ನು ಹಾಳುಗೆಡವ ಬಹುದು ಎನ್ನುವ ತಿಳುವಳಿಕೆಯಿಂದ ಮೂಡಿದ ವೈಯಕ್ತಿಕ ನಂಬಿಕೆಗಳನ್ನು ಮನೆಗೆ ಸೀಮಿತವಾಗಿಟ್ಟು ಕೊಳ್ಳುವುದು ಮತ್ತು ನಮ್ಮ ವೈಯಕ್ತಿಕ ನಂಬಿಕೆಗಳು ಸಾರ್ವಜನಿಕ ಬದುಕಿನ ನಮ್ಮ ನಡವಳಿಕೆಗಳಲ್ಲಿ ಮಧ್ಯಪ್ರವೇಶಿಸದಂತೆ ನೋಡಿಕೊಳ್ಳುವುದು ಒಂದು ಆದರ್ಶ ಎನ್ನುವ ರೀತಿಯಲ್ಲಿ ಸಮಾಜದಲ್ಲಿ ಚಾಲ್ತಿ ಯಲ್ಲಿರುವ ನಂಬಿಕೆ. ಎರಡನೆಯದು ಸಮಾಜದಲ್ಲಿ ಚಾಲ್ತಿಯಲ್ಲಿರುವ ಈ ನಂಬಿಕೆಗೆ ಚ್ಯುತಿ ಬಾರದಂತೆ ಆಲೂರರು ಬದುಕಿದರು ಎನ್ನುವುದು. ಇದು ಚರ್ಚೆಯನ್ನು ಆಹ್ವಾನಿಸುವ ಸಂಗತಿಗಳಾಗಿವೆ.

ವ್ಯಕ್ತಿಯ ವೈಯಕ್ತಿಕ ಪ್ರಾಮಾಣಿಕವಾದ ನಂಬಿಕೆಗಳು ಆ ವ್ಯಕ್ತಿಯ ಸಾರ್ವಜನಿಕ ಬದುಕನ್ನು ಒಂದಲ್ಲಾ ಒಂದು ಬಗೆಯಲ್ಲಿ ಪ್ರಭಾವಿಸುತ್ತಲೇ ಇರುತ್ತವೆ. ತನ್ನ ವೈಯಕ್ತಿಕ ನಂಬಿಕೆಗಳನ್ನು ಜನರೊಂದಿಗೆ ಒಡನಾಡುವ ಸಾರ್ವಜನಿಕ ಬದುಕಿನ ಸಂದರ್ಭದಲ್ಲಿ ಪರಿಷ್ಕರಿಸಿ ಕೊಳ್ಳಲು ಆ ವ್ಯಕ್ತಿಗೆ ಸಾಧ್ಯವಿದೆ. ಸ್ವತಃ ತನಗೇ ವಿಶ್ವಾಸವಿಲ್ಲದ, ತಾನು ನಂಬದ ನಂಬಿಕೆಗಳನ್ನು ರಾಜಕಾರಣವೂ ಸೇರಿದಂತೆ ತನ್ನ ಸಾರ್ವಜನಿಕ ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಪ್ರತಿಪಾದಿಸುವುದು ಮೊದಲಿನದಕ್ಕಿಂತ ಹೆಚ್ಚು ಅಪಾಯಕಾರಿಯಾಗಿದೆ. ಉದಾಹರಣೆಗೆ ಈ ಆಷಾಢಭೂತಿತನವನ್ನು ವೈಯಕ್ತಿಕವಾಗಿ ದೇವರ ಅಸ್ತಿತ್ವ ನಂಬದವನು ಸಾರ್ವಜನಿಕವಾಗಿ ಧಾರ್ಮಿಕನಂತೆ ಬಿಂಬಿಸಿ ಕೊಳ್ಳುವುದರಲ್ಲಿ ನೋಡಬಹುದು. ಆದರೆ ಆಲೂರರು ಖಂಡಿತ ಆಷಾಢಭೂತಿಗಳಾಗಿರಲಿಲ್ಲ. ನಿಸ್ಸಂಶಯವಾಗಿ ಆಲೂರರ ವೈಯಕ್ತಿಕ ನಂಬಿಕೆಗಳು ಅವರ ಸಾರ್ವಜನಿಕ ಬದುಕನ್ನು ಪ್ರಭಾವಿಸಿವೆ. ಇದಕ್ಕೆ ಆಲೂರರ 'ಕರ್ನಾಟಕತ್ವ'ದ ಸೂತ್ರಗಳೇ ಲಿಖಿತ ಸಾಕ್ಷಿ. ಆಲೂರರು ಮಂಡಿಸುವ ಕರ್ನಾಟಕತ್ವದ ಸೂತ್ರಗಳು ಯಾವುವೆಂದರೆ ವಿಶ್ವಬಂಧುತ್ವ, ಭಾರತೀಯ ಸಂಸ್ಕೃತಿ (ಸನಾತನ ಸಂಸ್ಕೃತಿ), ರಾಷ್ಟ್ರೀಯತ್ವ ಮತ್ತು ಕರ್ನಾಟಕತ್ವ.

ಆಲೂರರ ಭಾರತೀಯ ಸಂಸ್ಕೃತಿ ಅಥವಾ ಸನಾತನ ಸಂಸ್ಕೃತಿಯಿಂದ ಹಿಂದುತ್ವ ರೂಪು ಗೊಳ್ಳುತ್ತದೆ. ಹಿಂದುತ್ವದ ಒಂದು ಭಾಗವೇ ಕರ್ನಾಟಕತ್ವ. ಕರ್ನಾಟಕ ಏಕೀಕರಣ ಚಳುವಳಿ ಸಂದರ್ಭದಲ್ಲಿ ಆಲೂರರು ಮಾಡುವ ಚರ್ಚೆಗಳಲ್ಲಿ ಸದಾ ಎರಡು ಜನವರ್ಗಗಳು ಮಾತ್ರ ಬರುತ್ತವೆ. ಅವುಗಳೆಂದರೆ ಹಿಂದೂಗಳು ಮತ್ತು ಮುಸ್ಲಿಮರು.



ಮತ್ತೆ ಹಿಂದೂಗಳ ವಿಚಾರಕ್ಕೆ ಬಂದರೆ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು. ಕರ್ನಾಟಕತ್ವ ಕೃತಿಯಲ್ಲಿ ಬರುವ ಕೆಲವು ಮಾತುಗಳನ್ನು ಇದಕ್ಕೆ ನಿದರ್ಶನವಾಗಿ ನೋಡಬಹುದು. 'ಆಗಿನ ಕಾಲದಲ್ಲಿ ಶ್ರೀ ಹಳಕಟ್ಟಿ, ಶ್ರೀ ಜಂಗಿನ ಮುರಿಗೆಯ್ಯನವರೇ ಮುಂತಾದ ಬ್ರಾಹ್ಮಣೇತರರಷ್ಟೇ ನಮಗೆ ಅನುಕೂಲ. ಸಾಮಾನ್ಯತಃ ಇಲ್ಲಿಯ ಬ್ರಾಹ್ಮಣೇತರರು ನಮಗೆ ಅನುಕೂಲರಾಗಿದ್ದಿಲ್ಲ. ಏಕೆಂದರೆ, ಆಗ ಸರ್ಕಾರದವರ ಮರ್ಜಿ ಹಿಡಿಯುವುದರಲ್ಲಿಯೇ ಅವರಿಗೆ ಲಾಭವಿತ್ತು', 'ರಾಷ್ಟ್ರೀಯ ಪರಿಷತ್ತಿನಲ್ಲಿ ಕೆಲ ಬ್ರಾಹ್ಮಣೇತರರು ಕರ್ನಾಟಕ ಏಕೀಕರಣದ ಗೊತ್ತುವಳಿಗೆ ವಿರುದ್ಧವಾಗಿ ಗೊತ್ತುವಳಿಯನ್ನು ತಂದಿದ್ದರು', 'ಬ್ರಾಹ್ಮಣರಿಗೆ ವಸ್ತುಶಃ ಕರ್ನಾಟಕತ್ವದಿಂದ ವಿಶೇಷ ಲಾಭವಿದ್ದಿಲ್ಲ, ಲಾಭವಿಲ್ಲ ಮತ್ತು ಮುಂಚೆ ನನಗೆ ಕೆಲವರು ಆ ಪ್ರಶ್ನೆಯನ್ನು ಕೇಳಿಯೂ ಇದ್ದರು.'

ಕನ್ನಡ ಮತ್ತು ಸಂಸ್ಕೃತದ ನಡುವಿನ ಸಂಬಂಧ ಕುರಿತಂತೆ ಆಲೂರರ ಚಿಂತನೆಗಳೇನು ಎಂದು ಪರಿಶೀಲಿಸಿದರೆ ಅದು ಅವರ ಸನಾತನ ಧರ್ಮ ಮತ್ತು ಹಿಂದುತ್ವದೆಡೆಗಿನ ನಿಷ್ಠೆಗೆ ಅನುಸಾರವಾಗಿಯೇ ಇವೆ. ಸನಾತನ ಧರ್ಮ ಮತ್ತು ಹಿಂದುತ್ವಗಳು ಯಾವಾಗಲೂ ಸಂಸ್ಕೃತ ಮತ್ತು ಪ್ರಭುತ್ವದ ಪರವಾಗಿರುವ ನಿಲುವನ್ನು ಹೊಂದಿರುವಂತಹವು. ಮೈಸೂರು ಮಹಾರಾಜರಿಗೆ ಆಲೂರರು ಬರೆದ ಪತ್ರದಲ್ಲಿ ಕನ್ನಡದ ಅಸ್ಮಿತೆಯಾಗಿರುವ ವಿಜಯನಗರ ಸಾಮ್ರಾಜ್ಯ ಸಂಸ್ಥಾಪಕ ವಿದ್ಯಾರಣ್ಯರು ಸಂಸ್ಕೃತ ಧಾರ್ಮಿಕ ಗ್ರಂಥಗಳಿಗೆ ಪ್ರೋತ್ಸಾಹ ಕೊಟ್ಟದ್ದನ್ನು ನೆನೆಸಿಕೊಳ್ಳುತ್ತಾರೆ. 'ಈ ಪತ್ರದಲ್ಲಿ ನಾನು, ಅವರನ್ನು (ಮಹಾರಾಜರನ್ನು) ವಿದ್ಯಾರಣ್ಯರ ತರುವಾಯದಲ್ಲಿ ವಿದ್ಯಾರಣ್ಯರು ಸಂಸ್ಕೃತ ಧಾರ್ಮಿಕ ಗ್ರಂಥಗಳಿಗೆ ಪ್ರೋತ್ಸಾಹ ಕೊಟ್ಟಂತೆ ಕನ್ನಡ ಸಾಹಿತ್ಯಕ್ಕೆ ಪ್ರೋತ್ಸಾಹ ಕೊಟ್ಟಿರುವುದಕ್ಕಾಗಿ ಅವರನ್ನು ಅಭಿನಂದಿಸಿ, ಇಡೀ ಕರ್ನಾಟಕಕ್ಕೇನೆ ತಮ್ಮನ್ನು ಅರಸರನ್ನಾಗಿ ಮಾಡುವ (ಆಗ ಇನ್ನೂ ಸಂಸ್ಥಾನವನ್ನು ನಿಲ್ಲಿಸಿಬಿಡುವ ಕಲ್ಪನೆ ಹೊರಟಿದ್ದಿಲ್ಲ) ನಮ್ಮ ಕಲ್ಪನೆಗೆ ತಾವು ಒಪ್ಪಬೇಕೆಂದು ಬೇಡಿಕೊಂಡಿದ್ದೆ' ಎಂದು ಹೇಳಿಕೊಂಡಿದ್ದಾರೆ. ರಾಜನ ಭೂಮಿಯ 'ಆಳ್ವಿಕೆ'ಯನ್ನು ಸಮರ್ಥಿಸುವ ವರ್ಗವೇ ನೆಲವನ್ನು ಪವಿತ್ರವೆಂದು ಹೇಳಿ ಪ್ರಜೆಗಳಿಗೆ ಬದ್ಧತೆಯನ್ನು ಭಾವನಾತ್ಮಕವಾಗಿ ಒತ್ತಾಯಿಸುವ 'ರಾಜಕೀಯ'ವೊಂದು ಚರಿತ್ರೆಯುದ್ದಕ್ಕೂ ಕೆಲಸ ಮಾಡಿಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿಯೂ ಆಲೂರರ ಪತ್ರವನ್ನು ಅವಲೋಕಿಸಬೇಕಾಗಿದೆ.

'ಕರ್ನಾಟಕತ್ವವು ಅತ್ಯಂತ ಪರಿಶುದ್ಧವಾದ ಭಾವನೆ. ಅತ್ಯಂತ ವಿಶಾಲವಾದ ಭಾವನೆ. ಅದು ಕರ್ನಾಟಕದ ಹಿತಗಳೆಲ್ಲವನ್ನೂ ತನ್ನಲ್ಲಿ ಅಡಗಿಸಿಕೊಂಡಿದೆ. ಕರ್ನಾಟಕತ್ವದಲ್ಲಿ ಧರ್ಮದ್ವೇಷಕ್ಕೆ ಇರವಿಲ್ಲವು. ಅವುಗಳಿಗೆ ಹೃದಯದಲ್ಲಿ ಯತ್ ಕಿಂಚಿತ್ತಾದರೂ ಸ್ಥಾನ ಕೊಡುವವನು ಕರ್ನಾಟಕ ದ್ರೋಹಿಯೂ' ಎಂದೇನೋ ಆಲೂರರು ದಾರ್ಶನಿಕನಂತೆ ಮಾತಾಡುತ್ತಾರೆ. ಆದರೆ, ಆಲೂರರ ಕೃತಿ 'ಕರ್ನಾಟಕತ್ವದ ವಿಕಾಸ'ದ ಕೊನೆಯಲ್ಲಿ ಬರುವ ಈ

## ಹೊಸತು – ೨೦೨೦ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೨೦ಕ್ಕೆ ನಿಮ್ಮ 'ಹೊಸತು' ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **'ಅಭಿವೃದ್ಧಿ' (ಅಭಿವೃದ್ಧಿಯ ಮಾನದಂಡಗಳೇನು? ಪ್ರಸ್ತುತ ಭಾರತ ಅಭಿವೃದ್ಧಿಯ ಪಥದಲ್ಲಿದೆಯೇ?)**

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೫ ಡಿಸೆಂಬರ್ ೨೦೧೯ರೊಳಗೆ **'ಹೊಸತು'** ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

– ಸಂ.

ಮಾತುಗಳು ವಿಶ್ವಾಸಾರ್ಹತೆಯ ಕೊರತೆಯಿಂದ ಬಳಲುತ್ತವೆ. ಆಲೂರರ ಕರ್ನಾಟಕತ್ವವೆಂದರೆ ಭಾರತೀಯ ಸಂಸ್ಕೃತಿ. ಭಾರತೀಯ ಸಂಸ್ಕೃತಿ ಎಂದರೆ ಸನಾತನ ಧರ್ಮ. ಸನಾತನ ಧರ್ಮ ಎಂದರೆ ಹಿಂದುತ್ವ. ಹಿಂದುತ್ವ ಎಂದರೆ ಬ್ರಾಹ್ಮಣತ್ವ. ಸಾರಾಂಶದಲ್ಲಿ ಆಲೂರರ ಕರ್ನಾಟಕತ್ವವೆಂದರೆ ಬ್ರಾಹ್ಮಣತ್ವ. ಆಲೂರರ ವೈಯಕ್ತಿಕ ನಂಬಿಕೆಗಳು ಹುಟ್ಟಿಸಿದ ಚಿಂತನೆಗಳು ಅವರು ನಡೆಸಿದ ಕರ್ನಾಟಕ ಏಕೀಕರಣ ಚಳುವಳಿಯ ಮೇಲೆ ಒಳ್ಳೆಯ ಅಥವಾ ಕೆಟ್ಟ ಅಥವಾ ಎರಡೂ ಬಗೆಯ ಪರಿಣಾಮಗಳನ್ನು ಉಂಟುಮಾಡಿರಬಹುದು. ಆದರೆ ಮರೆಯಲಾಗದ ಸಂಗತಿ ಎಂದರೆ ಪ್ರಭಾವವನ್ನಂತೂ ಬೀರಿವೆ ಎನ್ನುವುದು.

೧೯೩೬ರಲ್ಲಿ ಹಂಪೆ ಮತ್ತು ವಿಜಯನಗರಗಳಲ್ಲಿ ನಡೆದ 'ವಿಜಯನಗರ ಸ್ಮಾರಕೋತ್ಸವದ ಕಾಲಕ್ಕೆ ಕರ್ನಾಟಕದ ಸಂಸ್ಕೃತಿಯನ್ನು ಪೋಷಿಸುವ ಸಕಲ ತರಹದ ಚಟುವಟಿಕೆಗಳು ಇಲ್ಲಿ ನಡೆದವು. ಐತಿಹಾಸಿಕ ಸಮ್ಮೇಳನ, ಐತಿಹಾಸಿಕ ಪ್ರದರ್ಶನ, ಸಾಹಿತ್ಯೋತ್ಸವ, ಸಂಪದಭಿವೃದ್ಧಿ ಸಭೆ, ಆಯುರ್ವೇದಕ್ಕೆ ಸಂಬಂಧಿಸಿದ ೩ ಸಮ್ಮೇಳನಗಳು, ವ್ಯಾಯಾಮ ಸಮ್ಮೇಳನ, ಶಕ್ತಿ ಪ್ರದರ್ಶನ, ಸಂಗೀತ ಕಛೇರಿ, ನಾಟಕಗಳು, ರಕ್ಕಸತಂಗಡಿಯ ಕಾಳಗದ ಭಸ್ಮದ ಮೆರವಣಿಗೆ' ಎಂದು ವಿವರವಾಗಿ ಆಲೂರರು ತಮ್ಮ 'ಕರ್ನಾಟಕತ್ವದ ವಿಕಾಸ' ಕೃತಿಯಲ್ಲಿ ದಾಖಲಿಸಿದ್ದಾರೆ.

ಕವಿರಾಜಮಾರ್ಗಕಾರ ಹೇಳುವ ಕನ್ನಡಿಗರ ಜೀವಪರ ಮೌಲ್ಯಗಳು, ಪಂಪನ 'ಮನುಷ್ಯಜಾತಿ ತಾನೊಂದೆ ವಲಂ' ಎನ್ನುವ ದಾರ್ಶನಿಕತೆ, ವಚನಕಾರರ ಸಮಾಜವಾದಿ ಆದರ್ಶಗಳಿಗೆ ಬದಲಾಗಿ ಯುದ್ಧದ ಕರಾಳ ನೆನಪುಗಳನ್ನು ಮರುಕಳಿಸುವ ಭಸ್ಮದ ಮೆರವಣಿಗೆ, ಅದಕ್ಕೆ ಸೇಡು ತೀರಿಸಿ ಕೊಳ್ಳುವೆವು ಎನ್ನುವ ಸಂದೇಶ ಸಾರುವ ಶಕ್ತಿ ಪ್ರದರ್ಶನ ಕನ್ನಡ ಅಸ್ಮಿತೆಗೆ ಲಗತ್ತಿಸುವ ಗುಣಗಳ ಸ್ವರೂಪವೇನು ಎಂಬುದು ಚರ್ಚಿಸಬೇಕಾದ ಸಂಗತಿಯಾಗಿದೆ. ಕರ್ನಾಟಕ ಮತ್ತು ಕನ್ನಡಿಗರ ದೃಷ್ಟಿಯಲ್ಲಿ ನೋಡುವುದಾದರೆ ಭಸ್ಮದ ಮೆರವಣಿಗೆ ಮಾಡುವುದಾದಲ್ಲಿ ಅದು ಮೈಸೂರಿನ ದೊರೆ ಟಿಪ್ಪುಸುಲ್ತಾನರು ಬ್ರಿಟಿಷರ ವಿರುದ್ಧ ಹೋರಾಡಿ ರಣರಂಗದಲ್ಲೇ ಮಡಿದ ಶ್ರೀರಂಗಪಟ್ಟಣ ಯುದ್ಧದ ಭಸ್ಮದ ಮೆರವಣಿಗೆಯಾಗಬೇಕಿತ್ತು ಅಥವಾ ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಮಡಿದ ಸಂಗೊಳ್ಳಿ ರಾಯಣ್ಣನಂಥವರ ಹೋರಾಟಗಾರರನ್ನು ನೆನಪು ಮಾಡಿಕೊಳ್ಳುವಂತಹದ್ದಾಗಬೇಕಿತ್ತು. ಯಾಕೆಂದರೆ ವಿಜಯನಗರ ಸ್ಮಾರಕೋತ್ಸವ ನಡೆದ ಕಾಲಕ್ಕೆ (೧೯೩೬) ಡೆಕ್ಕನ್ ಸುಲ್ತಾನರು ಅಳಿದು ಕೆಲವು ಶತಮಾನಗಳೇ ಕಳೆದಿದ್ದವು. ಅವರಿಂದ ಕನಸಿನಲ್ಲಿಯೂ ಕರ್ನಾಟಕಕ್ಕೆ ಭಯವಿರಲಿಲ್ಲ. ಎದುರಿಗಿರುವ ಪ್ರಬಲ ಶತ್ರುವಿನ ವಿರುದ್ಧ ಹೋರಾಟ ರೂಪಿಸಬೇಕಾದ ಸಂದರ್ಭದಲ್ಲಿ ಎಂದೊ ಅಧಿಕಾರಕ್ಕಾಗಿ ರಾಜಪ್ರಭುತ್ವವೊಂದು ನಡೆಸಿದ ಯುದ್ಧವನ್ನು ಕನ್ನಡಿಗರ ವಿರುದ್ಧದ ಯುದ್ಧ ಎಂದು ನಿರ್ಣಯಿಸಿ ಆ ರಾಜಪ್ರಭುತ್ವ ಅಸ್ತಿತ್ವದಲ್ಲಿ ಇಲ್ಲದಿದ್ದರೂ ಯುದ್ಧದ ಭಸ್ಮದ ಮೆರವಣಿಗೆ ನಡೆಸುವುದು ವಿಚಿತ್ರವಾಗಿ ತೋರುತ್ತದೆ. ಆಗ ಕನ್ನಡಿಗರ ಎದುರಿಗಿದ್ದ ದೊಡ್ಡ ಶತ್ರುಗಳೆಂದರೆ ಬ್ರಿಟಿಷರು. ವ್ಯಂಗ್ಯವೆಂದರೆ ಬ್ರಿಟಿಷ್ ಅಧಿಕಾರಿಗಳಾದ ರಾಬರ್ಟ್ ಸಿವೆಲ್ಲರು ವರ್ಣಿಸಿದ 'ವಿಜಯನಗರದ ವೈಭವ', ಲಾರ್ಡ್ ಕರ್ಜನ್ನರು ಅಗೆದು ತೋರಿಸಿದ ಹಂಪಿಯಿಂದ ಆಲೂರರು ಪ್ರೇರಣೆ ಪಡೆಯುವುದು.

ಆಲೂರರು ವರ್ಣಿಸಿರುವ 'ವಿಜಯನಗರದ ವೈಭವ' ರೂಪ ಪಡೆಯುವ ರಾಬರ್ಟ್ ಸಿವೆಲ್ಲರ 'ಫೊರ್‌ಗೊಟನ್ ಎಂಪೈರ್' (ಕನ್ನಡ ಅನುವಾದ : ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟ ವಾಗಿರುವ 'ಮರೆತು ಹೋಗಿರುವ ಸಾಮ್ರಾಜ್ಯ : ವಿಜಯನಗರ') ಕೃತಿಯ ಬಗ್ಗೆಯೂ ನೋಡಬೇಕಿದೆ. ಈ ಬಗ್ಗೆ ಇತಿಹಾಸಕಾರ ಎಸ್. ಚಂದ್ರಶೇಖರ್ ಅವರು ತಮ್ಮ 'ವಸಾಹತುಕಾಲೀನ ಕರ್ನಾಟಕ' ಕೃತಿಯಲ್ಲಿ ವಿವರವಾಗಿ ಚರ್ಚಿಸುತ್ತಾರೆ. ಅವರು ಕಂಡುಕೊಂಡಂತೆ ಸಿವೆಲ್ಲರು ವಿಜಯನಗರದ ಅರಸರ ಮತ್ತು ಶಾಹಿ ಅರಸರ ಆಳ್ವಿಕೆಗೊಳಪಟ್ಟಿದ್ದ ರಾಜ್ಯಗಳನ್ನು ಹಿಂದೂ ಮತ್ತು ಮುಸ್ಲಿಂ ಸಾಮ್ರಾಜ್ಯ ಗಳೆಂದು ಬಣ್ಣಿಸುವುದರ ಜೊತೆಗೆ ಆ ರಾಜ್ಯಗಳ ಪ್ರಜೆಗಳನ್ನು ಸಾರಾಸಗಟಾಗಿ ಹಿಂದೂ ಮತ್ತು ಮುಸ್ಲಿಂ ಎಂದು ಸರಳೀಕರಿಸಿ ವಸಾಹತುಶಾಹಿಯ ಒಡೆದು ಆಳುವ ನೀತಿಗೆ ಬೆಂಬಲವಾಗುವ ಧೋರಣೆಯನ್ನು ಅನುಸರಿಸುತ್ತಾರೆ. ಈ ಧೋರಣೆ ಮತ್ತೆ ಮತ್ತೆ ಕೃತಿಯಲ್ಲಿ ಪ್ರಕಟವಾಗಿ ಹಿಂದೂ–ಮುಸ್ಲಿಂ ಒಡಕು ಶಾಶ್ವತವೇನೋ ಎನ್ನುವ ಅನುಮಾನಕ್ಕೆ ಆಸ್ಪದ ಮಾಡಿಕೊಡುತ್ತದೆ. ಆದರೆ ಸಿವೆಲ್ಲರು ಕೊಡುವ ವಿವರಗಳು ಅವರ ಈ ಮತೀಯ ವಿಶ್ಲೇಷಣೆಯನ್ನು ಪುಷ್ಟೀಕರಿಸುವುದಿಲ್ಲ. ಯಾಕೆಂದರೆ ಈ ಮತೀಯ ದ್ವೇಷ ಭಾರತೀಯ ಇತಿಹಾಸದಲ್ಲಿ ಕಾಣಿಸಿಕೊಂಡಿದ್ದು ವಸಾಹತುಶಾಹಿ ಯುಗದಿಂದ. ಸಿವೆಲ್ಲರು ಉದ್ಧರಿಸುವ ಯಾವುದೇ ದಾಖಲೆಯಲ್ಲೂ ಮತೀಯತೆಯನ್ನು ಬೆಂಬಲಿಸುವ ಉದಾಹರಣೆಗಳು ಇಲ್ಲ. ವಿಜಯನಗರದ ವಿವಿಧ ಅರಸು ಮನೆತನಗಳಲ್ಲಿ, ರಾಜ್ಯಕ್ಕಾಗಿ ನಡೆದ ಕುಟಿಲೋಪಾಯ, ಷಡ್ಯಂತ್ರ, ಕೊಲೆ ಮುಂತಾದವುಗಳ ಬಗ್ಗೆ ಹೇಗೆ ವಿವರ ಗಳಿವೆಯೋ, ಹಾಗೆಯೇ ಶಾಹಿ ಮನೆತನಗಳ ಬಗ್ಗೆಯೂ ವಿವರಗಳಿವೆ. ವಿಜಯನಗರದ ಅರಸರು ಹೇಗೆ ತಮ್ಮ ನೆರೆಯ ಅರಸರ ಮೇಲೆ ಹಿಂದೂ–ಮುಸ್ಲಿಮರೆನ್ನದೆ, ರಾಜ್ಯದಾಹದಿಂದ ಕದನಕ್ಕೆ ಇಳಿಯುತ್ತಿದ್ದರೋ ಹಾಗೆಯೇ ಶಾಹಿ ದೊರೆಗಳೂ ಮುಸ್ಲಿಂ ದೊರೆಗಳ ವಿರುದ್ಧ ಕದನಕ್ಕೆ ಇಳಿಯುತ್ತಿದ್ದ ಬಗ್ಗೆ ಸಿವೆಲ್ಲರು ಹೇರಳ ವಿವರಗಳನ್ನು ಕೊಡುತ್ತಾರೆ. ಹಾಗೆಯೇ ಪೂಜೆ ಸಲ್ಲಿಸುತ್ತಿದ್ದ ಸ್ಥಳಗಳ ಮೇಲಿನ ಆಕ್ರಮಣಗಳ ಬಗ್ಗೆಯೂ ವಿವರಗಳಿವೆ. ಈ ಆಕ್ರಮಣ ಗಳೆಲ್ಲಾ ಆ ಪೂಜಾಸ್ಥಳಗಳಲ್ಲಿ ಇದ್ದಿರಬಹುದಾದ ನಿಧಿಗಾಗಿ ನಡೆದವೆಂದು ಆಕರಗಳನ್ನು ಉದ್ಧರಿಸುವ ಸಿವೆಲ್ಲರು, ಅದನ್ನು ಮತೀಯ ಕಾರಣಕ್ಕಾಗಿ ಮಾಡಲಾಯಿತೆಂದು ವಿಶ್ಲೇಷಿಸುವಾಗ ಎಲ್ಲಿಯೂ ಆಕರಗಳನ್ನು ಉದ್ಧರಿಸದಿರುವುದು ಗಮನಾರ್ಹ.

ಹಿಂದೂ–ಮುಸ್ಲಿಮರನ್ನು ಒಡೆದು ತಮ್ಮ ಆಳ್ವಿಕೆ ಯನ್ನು ಸುಗಮಗೊಳಿಸಿಕೊಳ್ಳುವ ಬ್ರಿಟಿಷರ ಹುನ್ನಾರ ಅವರ ರಾಜಕಾರಣದಂತೆ ಅವರು ಇತಿಹಾಸವನ್ನು ರಚಿಸುವುದರಲ್ಲಿಯೂ ಇದೆ. ರಾಬರ್ಟ್ ಸಿವೆಲ್ಲರ 'ಫೊರ್‌ಗೊಟನ್ ಎಂಪೈರ್' ಕೃತಿಯೇ ಇದಕ್ಕೆ ನಿದರ್ಶನ. ಇಂತಹ ಕೃತಿಗಳಿಂದ ಪ್ರೇರಣೆಯನ್ನು ಪಡೆಯುವುದರ ಹಿಂದೆ ಕನ್ನಡ ಅಸ್ಮಿತೆಯನ್ನು ಮತೀಕರಣಗೊಳಿಸುವ ಉದ್ದೇಶವಲ್ಲದೆ ಬೇರೇನೂ ಇರಲು ಸಾಧ್ಯವಿಲ್ಲ. ರಕ್ಕಸತಂಗಡಿ ಯುದ್ಧ ನಡೆದಿದ್ದು ವಿಜಯನಗರ ಮತ್ತು ಡೆಕ್ಕನ್ ಸುಲ್ತಾನರ ನಡುವೆ. ವಿಜಯನಗರದ ರಾಜರನ್ನು ಹಿಂದೂ ದೊರೆಗಳೆಂದೂ,

ಸುಲ್ತಾನರನ್ನು ಮುಸಲ್ಮಾನ ದೊರೆಗಳೆಂದೂ, ಇದು ಹಿಂದೂಗಳಿಗೂ ಮುಸಲ್ಮಾನರಿಗೂ ನಡುವೆ ನಡೆದ ಯುದ್ಧವೆಂದೂ, ಸಾರಾಂಶದಲ್ಲಿ ಮುಸಲ್ಮಾನರನ್ನು ಹಿಂದೂಗಳ ಶತ್ರುಗಳೆಂದೂ ಬಿಂಬಿಸುವುದು. ಇಲ್ಲಿ ಹಿಂದೂಗಳನ್ನು ಕನ್ನಡಿಗರು ಎಂದು ಸಮೀಕರಿಸುತ್ತಿರುವುದರಿಂದ ಮುಸಲ್ಮಾನರು ಕನ್ನಡಿಗರ ಶತ್ರುಗಳೆಂದು ಬಿಂಬಿಸುವ ಉದ್ದೇಶವಷ್ಟೇ ಕಾಣುತ್ತದೆ. ರಾಜೇಂದ್ರ ಚೆನ್ನಿಯವರು ಸರಿಯಾಗಿಯೇ ಗುರುತಿಸುವಂತೆ ಗತಕಾಲದ ಪೌರುಷಗಾಥೆಗಳು, ಅನ್ಯಭಾಷಾ ಸಮುದಾಯಗಳು ಮತ್ತು ಮುಸ್ಲಿಂ ದಾಳಿಕೋರರು ಮಾಡಿದ ಚಾರಿತ್ರಿಕ ವಂಚನೆ–ಪ್ರಮಾದಗಳು ಹಾಗೂ ಕನ್ನಡತಾಯಿಯ ಬಗೆಗಿನ ಕರುಣಾಜನಕ ತ್ಯಾಗ ಬಲಿದಾನದ ಕಥೆಗಳಿಂದ ತುಂಬಿಹೋಗಿದ್ದ ಈ ಸ್ವರ್ಣಯುಗದ ನೆನಪುಗಳ ಮೂಲಕ ಕನ್ನಡದ ಅಸ್ಮಿತೆಯನ್ನು ನಿರ್ಮಿಸಬೇಕೆಂಬುದು ಆಲೂರರ ಆಗ್ರಹವಾಗಿತ್ತು. ಇದಕ್ಕೆ ಅನುಸಾರವಾಗಿಯೇ ಬ್ರಿಟಿಷ್ ಅಧಿಕಾರಿಗಳು ನೀಡಿದ ಗತಕಾಲದ ಕರ್ನಾಟಕದ 'ಸ್ವರ್ಣಯುಗದ ನೆನಪು'ಗಳನ್ನು ಅವು ಅಸಲಿಯೋ ಅಲ್ಲವೋ ಎಂಬುದರ ಬಗ್ಗೆ ತಲೆಕೆಡಿಸಿಕೊಳ್ಳದೆ ಆಲೂರರು ತಮಗೆ ಬೇಕಾದದ್ದನ್ನು ಮಾತ್ರ ಎಚ್ಚರದಿಂದ ಆಯ್ದುಕೊಳ್ಳುತ್ತಾರೆ.

ಆಲೂರರ 'ಕರ್ನಾಟಕತ್ವದ ವಿಕಾಸ' ಕೃತಿಯಲ್ಲಿ ಬರುವ ಕೆಲವು ಪರಿಭಾಷೆಗಳನ್ನು ಗಮನಿಸಬೇಕು : 'ಹಿಂದೂ ಜನರ ವೈಭವ', 'ಹಿಂದುತ್ವ', 'ಮುಸಲ್ಮಾನರನ್ನು ಹಿಮ್ಮೆಟ್ಟಿಸಿದ', 'ಮುಸಲ್ಮಾನರ ಕಾಲದಿಂದ', 'ಬ್ರಾಹ್ಮಣ', 'ಬ್ರಾಹ್ಮಣತ್ವ', 'ಬ್ರಾಹ್ಮಣೇತರರು' ಯಾಕೆ ಆಲೂರರು ಸಂಕುಚಿತ ಅರ್ಥ ಹೊಮ್ಮಿಸುವ ಈ ರೀತಿಯ ಪರಿಭಾಷೆಗಳನ್ನು ಬಳಸುತ್ತಾರೆ? ಪದಬಳಕೆಯಲ್ಲಿನ ಅಚಾತುರ್ಯವೇ? ಖಂಡಿತ ಆಲೂರರು ಪದಬಳಕೆಯಲ್ಲಿ ಖಚಿತವಿದ್ದಾರೆ. ಅವರು ಎಚ್ಚರದಿಂದ ಬಳಸುವ ಮೇಲ್ಕಂಡ ಪರಿಭಾಷೆಗಳೇ ಆಲೂರರ ಕನ್ನಡ ಅಸ್ಮಿತೆ ಕುರಿತ ಅವರ ಚಿಂತನೆಯ ನೆಲೆಯನ್ನು ಹೇಳುತ್ತಿವೆ. ಅದು ಮೂಲಭೂತವಾದಿ ನೆಲೆ. ಆಲೂರರೇನಾದರೂ ಹಿಂದೂ ಜನರ ವೈಭವದ ಜಾಗದಲ್ಲಿ 'ಕನ್ನಡಿಗರ ವೈಭವ', ಹಿಂದುತ್ವ ಮತ್ತು 'ಬ್ರಾಹ್ಮಣತ್ವ'ದ ಜಾಗದಲ್ಲಿ 'ಸರ್ವಜನಾಂಗತ್ವ', ಮುಸಲ್ಮಾನರನ್ನು ಹಿಮ್ಮೆಟ್ಟಿಸಿದ ಜಾಗದಲ್ಲಿ 'ಮುಸಲ್ಮಾನ ದೊರೆಗಳನ್ನು ಹಿಮ್ಮೆಟ್ಟಿಸಿದ', 'ಮುಸಲ್ಮಾನರ ಕಾಲದಿಂದ' ಜಾಗದಲ್ಲಿ 'ಮುಸಲ್ಮಾನ ದೊರೆಗಳ ಕಾಲದಿಂದ' ಎಂದು ಚಿಂತಿಸಲು ಸಾಧ್ಯವಾಗಿದ್ದರೆ ಅವರ ಕನ್ನಡ ಅಸ್ಮಿತೆ ಕುರಿತ ಚಿಂತನೆಗಳು ಮೂಲಭೂತವಾದಿ ನೆಲೆಯಿಂದ ಸಾಂಸ್ಕೃತಿಕ ನೆಲೆಗೆ ಜಿಗಿಯುತ್ತಿದ್ದವು. ಈ ಕಾರಣದಿಂದಲೇ 'ಕರ್ನಾಟಕದ ಸರ್ವಾಂಗೀಣ ಉನ್ನತಿ' ಎಂಬೀ ಮೂರು ಶಬ್ದಗಳಲ್ಲಿ ನನ್ನ ಜಗತ್ತೆಲ್ಲವೂ ಅಡಕವಾಗಿದೆ' ಎಂದು ಆಲೂರರು ಹೇಳುವಾಗಲೂ ಆಲೂರರ 'ಕರ್ನಾಟಕ'ದಲ್ಲಿ ಬರುವವರು ಯಾರು ಎಂಬ ಪ್ರಶ್ನೆ ಎದುರಾಗುತ್ತದೆ.

ಭಾಷಿಕರ ಬದುಕು ಸುಧಾರಿಸದೆ ಭಾಷೆ ಸುಧಾರಿಸದು ಎಂಬುದನ್ನು ಕನ್ನಡ ಅಸ್ಮಿತೆ ಮೊದಲಿಂದಲೂ ಪ್ರತಿಪಾದಿಸುತ್ತ ಬಂದಿದೆ. ಮನುಷ್ಯನ ಹಿಂಸಾ ಪ್ರವೃತ್ತಿಯನ್ನು, ಮನುಕುಲದ ಘನತೆಗೆ ಕುಂದು ತರುವ ಅಸ್ಪೃಶ್ಯತೆ, ಜಾತಿ ವ್ಯವಸ್ಥೆ, ಲಿಂಗಭೇದದಂತಹ ರೋಗರುಜಿನಗಳನ್ನು ತೊಡೆದು ಹಾಕಲು ಸಮಾಜ ಸುಧಾರಕರು, ಸಾಹಿತಿಗಳು ನಿರಂತರ ಪ್ರಯತ್ನಿಸುತ್ತಲೇ ಬಂದಿದ್ದಾರೆ. ಹತ್ತನೆಯ ಶತಮಾನದ ಪಂಪನಿಂದ ಆರಂಭವಾಗಿ ಇಪ್ಪತ್ತನೆಯ ಶತಮಾನದ ಕುವೆಂಪುವರೆಗೆ, ಹನ್ನೆರಡನೇ ಶತಮಾನದ ಬಸವಣ್ಣನಿಂದ ಆರಂಭವಾಗಿ ಇಪ್ಪತ್ತನೆಯ ಶತಮಾನದ ಕುದ್ಮುಲ್ ರಂಗರಾಯರವರೆಗೆ ಈ ಪರಂಪರೆಯಿದೆ. ಕನ್ನಡ ಅಸ್ಮಿತೆಯ ಈ ಪ್ರಧಾನ ಗುಣಕ್ಕೆ ವ್ಯತಿರಿಕ್ತವಾಗಿ ಆಲೂರರ ಚಿಂತನೆಗಳಿವೆ. ಡಿ. ಆರ್. ನಾಗರಾಜ ಅವರು ಕಂಡುಕೊಂಡಂತೆ ಅಹಿಂಸೆ ಭಾರತೀಯ ಸಂಸ್ಕೃತಿಯ ಪರಮ ಮೌಲ್ಯ ಎನ್ನುವುದನ್ನು ಹಿಂದೂ ರಾಷ್ಟ್ರೀಯವಾದಿ ಚಿಂತನೆ ಒಪ್ಪುವುದಿಲ್ಲ, ಸಹಜವಾಗಿಯೇ ಗಾಂಧಿಯವರ ಅಹಿಂಸಾತತ್ವದ ಬಗ್ಗೆ ಆಲೂರರಿಗೆ 'ತತ್ವಭೇದ'. ನಿಃಶಸ್ತ್ರವೂ ನಿರ್ವೀರ್ಯವೂ ಆದವರು ಅನುಸರಿಸುವ ತತ್ವ ಇದೆಂದು ಆಲೂರರ ಅಭಿಮತ. ಆಲೂರರ ಅಹಿಂಸಾತತ್ವದ ವಿರೋಧಕ್ಕೆ ಮುಖ್ಯ ಕಾರಣವಾಗಿರುವುದು ಇದು ಸನಾತನಧರ್ಮಕ್ಕೆ ವಿರುದ್ಧವಾದುದು ಎನ್ನುವುದು. ಈ ನೆಲೆ ಅಹಿಂಸಾತತ್ವವನ್ನು ನೇರವಾಗಿಯೇ ವಿರೋಧಿಸುತ್ತದೆ.

ಸ್ವಾತಂತ್ರ್ಯಪೂರ್ವದಲ್ಲಿಯೇ ಗಾಂಧಿಯಂತಹ ನಾಯಕರು ಅಸ್ಪೃಶ್ಯತಾ ನಿವಾರಣೆಯ ಉದ್ದೇಶದ ಸಾಮಾಜಿಕ ಚಳುವಳಿಗಳಲ್ಲಿ ಭಾಗವಹಿಸುವುದನ್ನು, ಇಂತಹ ಸಾಮಾಜಿಕ ಚಳುವಳಿಗಳಿಗೆ ಸ್ವಾತಂತ್ರ್ಯ ಚಳುವಳಿಗಳಲ್ಲಿ ಕ್ರಿಯಾಶೀಲವಾದ ರಾಜಕೀಯ ಪಕ್ಷಗಳು ವೇದಿಕೆ ಒದಗಿಸುವುದನ್ನು ಆಲೂರರು ವಿರೋಧಿಸಿದ್ದರು. ತಿಲಕರಿಂದ ಪ್ರಭಾವಿತರಾಗಿದ್ದ ಆಲೂರರು ರಾಷ್ಟ್ರೀಯ ಚಳುವಳಿಯಲ್ಲಿ ಅವರ ಅನುಯಾಯಿಯಾಗಿದ್ದರು. ಎಸ್. ಚಂದ್ರಶೇಖರ್ ಅವರು ಗುರುತಿಸುವಂತೆ ತಿಲಕರ ಅವಧಿಯ ರಾಷ್ಟ್ರೀಯವಾದಿಗಳ ಒಂದು ಪ್ರಧಾನವಾದ ಲಕ್ಷಣವೆಂದರೆ ಇವರಲ್ಲಿ ಯಾರೂ ಸಾಮಾಜಿಕ – ಧಾರ್ಮಿಕ ಸುಧಾರಣಾ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿರಲಿಲ್ಲ. ಆಲೂರರೂ ಕೂಡ ಇದಕ್ಕೆ ಹೊರತಾಗಿರಲಿಲ್ಲ. ಭಾರತೀಯ ಸಾಮಾಜಿಕ ಅಧಿವೇಶನವನ್ನು (ಇಂಡಿಯನ್ ಸೋಶಿಯಲ್ ಕಾನ್‌ಫರೆನ್ಸ್) ಕಾಂಗ್ರೆಸ್ ವೇದಿಕೆಯಲ್ಲಿ (ಮಂಟಪ್)


## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ /ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ. ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ನಡೆಸಬಾರದೆಂದು ತಿಲಕರು ೧೮೯೫ರಲ್ಲಿ ಖಡಾಖಂಡಿತವಾಗಿ ನಿರಾಕರಿಸಿದ ಬಳಿಕ ಕಾಂಗ್ರೆಸ್ಸು ಮತ್ತು ಭಾರತೀಯ ರಾಷ್ಟ್ರೀಯ ಚಳುವಳಿ ಗುಂಪಿನ ನಡುವಿನ ಸಂಬಂಧ ಕಡಿದುಹೋಯಿತು. ಕಾಂಗ್ರೆಸ್ಸು ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಳ್ಳುವುದರ ಬಗ್ಗೆ ಎಷ್ಟು ವಿರೋಧವಿತ್ತೆಂದರೆ ಗಾಂಧಿಯವರು ಸಾರ್ವಜನಿಕ ಜೀವನದಲ್ಲಿ ಕಾಣಿಸಿಕೊಂಡಾಗ ತಿಲಕರ ಕಟ್ಟಾ ಅನುಯಾಯಿಗಳು ಕಾಂಗ್ರೆಸ್ಸಿನೊಡನೆ ಸಂಬಂಧ ಕಡಿದುಕೊಂಡರು. ಕಾಂಗ್ರೆಸ್ಸು ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಳ್ಳುವುದರ ಬಗ್ಗೆ ತಿಲಕರ ಅನುಯಾಯಿಯಾದ ಆಲೂರರಿಗೂ ವಿರೋಧವಿತ್ತು. ಆಗ ಆಲೂರರು ಕಾಂಗ್ರೆಸ್ಸು ಮತ್ತು ರಾಷ್ಟ್ರೀಯ ಚಳುವಳಿಗಳಲ್ಲಿ ನೇರವಾಗಿ ಭಾಗವಹಿಸುವುದನ್ನು ಬಿಟ್ಟರು ಎಂದು ಹಂಪನಾ ಗುರುತಿಸುತ್ತಾರೆ. ತಮ್ಮ 'ಕರ್ನಾಟಕತ್ವದ ವಿಕಾಸ' ಕೃತಿಯಲ್ಲಿ ಅದನ್ನು ಸ್ಪಷ್ಟವಾಗಿಯೇ ಆಲೂರರು ದಾಖಲಿಸಿದ್ದಾರೆ. ಕಾಂಗ್ರೆಸ್ಸು ಮುಖ್ಯ ರಾಜಕಾರಣ ಸಂಸ್ಥೆಯಾಗಿದ್ದು, ಅದರಲ್ಲಿ ಸಮಾಜ ಸುಧಾರಣೆಯಂತಹ ವಿಷಯ ಗಳನ್ನು ತರುವುದು ಸರಿಯಲ್ಲವೆಂದು ಗಾಂಧಿಯ ವರಿಗೆ ಪತ್ರ ಬರೆದು ತಾನು ಕಾಂಗ್ರೆಸ್ಸಿಗೆ ರಾಜೀನಾಮೆ ನೀಡಿದೆನೆಂದು ಅವರು ದಾಖಲಿಸಿದ್ದಾರೆ. ಆಲೂರರ ಚಿಂತನೆಗಳು ಈ ಕಾರಣಕ್ಕಾಗಿ ಎಲ್ಲಿಯೂ ಸಾಮಾಜಿಕ ನೆಲೆ ಪ್ರವೇಶಿಸುವುದಿಲ್ಲ.

ಆಲೂರರು ತಮ್ಮ 'ಕರ್ನಾಟಕವು ಭರತಖಂಡದ ಸಂಸ್ಕೃತಿಯನ್ನೆಲ್ಲ ಪಚನ ಮಾಡಿಕೊಂಡಿರುವುದಲ್ಲದೆ, ತನ್ನ ವಿಶಿಷ್ಟ ಸಂಸ್ಕೃತಿಯನ್ನು ಅದರಲ್ಲಿ ಬೆರೆಸಿ, ಅದನ್ನು ಮತ್ತಷ್ಟು ಪುಷ್ಟವನ್ನಾಗಿಯೂ, ವ್ಯಾಪಕವನ್ನಾಗಿಯೂ ಮಾಡಿರುವುದು, ಅದು ಭರತಖಂಡದ ಧರ್ಮಕ್ಕೆ ಹೆಚ್ಚು ಉಜ್ವಲವಾದ ಸ್ವರೂಪವನ್ನು ಕೊಟ್ಟಿರುವುದು. ಆದ ಕಾರಣವೇ ನಾವು ನಮ್ಮ ಕರ್ನಾಟಕವು ಭರತಖಂಡಕ್ಕಿಂತ, ವಿಶ್ವಕ್ಕಿಂತ ವ್ಯಾಪಕವಾಗಿರುತ್ತದೆಂದೆನ್ನುತ್ತೇವೆ' ಎನ್ನುತ್ತಾರೆ. ಆಲೂರರ ಕರ್ನಾಟಕತ್ವದ ಮುಖ್ಯಭಾಗ 'ವಿಶ್ವಪ್ರಜ್ಞೆ'. ಈ 'ವಿಶ್ವಪ್ರಜ್ಞೆ' ಕುವೆಂಪು ಮತ್ತು ಸುಬ್ಬಣ್ಣ ಅವರ ವಿಶ್ವಮಾನವ ಪರಿಕಲ್ಪನೆಗೆ ತುಂಬ ಭಿನ್ನ. ಯಾಕೆಂದರೆ ಆಲೂರರ ಕರ್ನಾಟಕತ್ವ, 'ಹಿಂದೂ ಕ್ರೈಸ್ತ ಮುಸಲ್ಮಾನ ಜೈನರುದ್ಯಾನ' ಎಂದು ಕುವೆಂಪು ಅವರು ವ್ಯಾಖ್ಯಾನಿಸುವ ಕರ್ನಾಟಕವನ್ನಾಗಲೀ ಅಥವಾ 'ನಾವು ಕನ್ನಡಿಗರು ಜಗತ್ತಿನ ಬಹುತೇಕ ಎಲ್ಲಾ ಜನ–ಜನಾಂಗ–ಬುಡಕಟ್ಟು–ಧರ್ಮ–ಜಾತಿಗಳನ್ನೂ ಅರಗಿಸಿಕೊಂಡಿರುವ ವಿಶ್ವಮಾನವರು ಮತ್ತು ನಮ್ಮ ಕನ್ನಡವು ಜಗತ್ತಿನ ಅಸಂಖ್ಯ ಭಾಷೆಗಳನ್ನು ಅರಗಿಸಿಕೊಂಡಿರುವ ವಿಶ್ವಭಾಷೆ. ಹಾಗೆ ನಮ್ಮದು ಕನ್ನಡ ಕೂಪವಲ್ಲ, ಕನ್ನಡ ವಿಶ್ವ, ಕನ್ನಡ ಬ್ರಹ್ಮಾಂಡ' ಎಂಬ ಸುಬ್ಬಣ್ಣ ಅವರ ಕರ್ನಾಟಕವಾಗಲಿ ಅಲ್ಲ. ಆಲೂರರು ಪ್ರತಿಪಾದಿಸುತ್ತಿರುವ ಧರ್ಮ ಕುವೆಂಪು ಮತ್ತು ಸುಬ್ಬಣ್ಣ ಅವರಲ್ಲಿ ಕಾಣುವ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಪಂಪನು ಹೇಳುವ ಮಾನವಧರ್ಮವಲ್ಲ.

'ಉತ್ತರದ ಕಡೆಯಿಂದ ಒತ್ತಿ ಬಂದ ಮುಸಲ್ಮಾನರನ್ನು ಹಿಮ್ಮೆಟ್ಟಿಸಿದ ಮೊಟ್ಟ ಮೊದಲಿನ ಸಾಮ್ರಾಜ್ಯವೆಂದರೆ ಕರ್ನಾಟಕದ ಈ ವಿಜಯನಗರದ




ಸಾಮ್ರಾಜ್ಯ ಒಂದೇ! ಕರ್ನಾಟಕಸ್ಥರಿಗೆ, ಅದೇಕೆ ಇಡೀ ಭಾರತಕ್ಕೇನೆ ಇದೇನು ಕಡಿಮೆ ಅಭಿಮಾನದ ಸಂಗತಿಯೇ? ವಿದ್ಯಾರಣ್ಯರು ಹಕ್ಕ–ಬುಕ್ಕರಲ್ಲಿ ಸ್ಫೂರ್ತಿ ತುಂಬಿ ಮುಸಲ್ಮಾನರನ್ನು ಹೊಡೆದೋಡಿಸಿ ಸಾಮ್ರಾಜ್ಯವನ್ನು ಕಟ್ಟಿಸಿದರು' ಎಂದು ಆಲೂರರು ಹೆಮ್ಮೆಯಿಂದ ನೆನೆಸಿಕೊಳ್ಳುತ್ತಾರೆ. ಇಲ್ಲಿ ಆಲೂರರು ಮುಸ್ಲಿಂ ಪ್ರಭುತ್ವ ಎನ್ನುವ ಅರ್ಥದಲ್ಲಿ 'ಮುಸಲ್ಮಾನರು' ಎಂದು ಹೇಳುತ್ತಿರಬಹುದು ಎನ್ನುವ ಸಂದೇಹವೂ ಉಂಟಾಗುತ್ತದೆ. ಯಾಕೆಂದರೆ ಅವರು 'ಕರ್ನಾಟಕತ್ವದಲ್ಲಿ ಧರ್ಮದ್ವೇಷಕ್ಕೆ ಇರವಿಲ್ಲವು. ಅವುಗಳಿಗೆ ಹೃದಯದಲ್ಲಿ ಯತ್ ಕಿಂಚಿತ್ತಾದರೂ ಸ್ಥಾನ ಕೊಡುವವನು ಕರ್ನಾಟಕದ್ರೋಹಿಯೂ' ಎಂದು ಆಲೂರರು ಜಾತ್ಯತೀತತೆ ಕನ್ನಡತನದ ಪ್ರಮುಖ ಗುಣ ಎಂದು ಸಾರುತ್ತಾರೆ. ವಿಪರ್ಯಾಸವೆಂದರೆ ಅವರ 'ಕರ್ನಾಟಕದ ಗತವೈಭವ' ಮತ್ತು 'ಕರ್ನಾಟಕತ್ವದ ವಿಕಾಸ' ಕೃತಿಗಳಲ್ಲಿ ಕನ್ನಡ ಸಂಸ್ಕೃತಿಗೆ ಮುಸ್ಲಿಂ, ಕ್ರಿಶ್ಚಿಯನ್‌ನಂತಹ ಅಲ್ಪಸಂಖ್ಯಾತ ಧರ್ಮಗಳ ಕೊಡುಗೆಯ ಸ್ಪಷ್ಟ ಪ್ರಸ್ತಾಪವೇ ಇಲ್ಲ. ಆಧುನಿಕ ಪೂರ್ವಯುಗದಾಚೆಗೆ ಕರ್ನಾಟಕ ರೂಪುಗೊಂಡದ್ದೇ ಮುಸ್ಲಿಂ ಹಾಗೂ ಕ್ರೈಸ್ತಧಾರೆಗಳಿಂದ. ೨೦ನೇ ಶತಮಾನದ ಹಿಂದಿನ ಕನ್ನಡ ಸಂಸ್ಕೃತಿಯ ಸಮೃದ್ಧತೆಗೆ, ಶಕ್ತಿಗೆ, ವೈವಿಧ್ಯತೆಗೆ ನಿಸ್ಸಂದೇಹವಾಗಿ ಇಸ್ಲಾಂ ಹಾಗೂ ಕ್ರೈಸ್ತ ಸಂವೇದನೆ, ಆಶಯಗಳ ಕೊಡುಗೆಯೇ ಅತ್ಯಂತ ಮಹತ್ವದ್ದು. ಈ ಹಿನ್ನೆಲೆಯಲ್ಲಿ ಡಿ. ಆರ್. ನಾಗರಾಜ್ ಅವರು ಗಮನಿಸುವಂತೆ 'ಕನ್ನಡ ಸಂಸ್ಕೃತಿಗೆ ಹಿಂದುವೇತರ ಜನಾಂಗಗಳ ಕೊಡುಗೆಯ ಸ್ಪಷ್ಟ ಪ್ರಸ್ತಾಪ ಆಲೂರರಲ್ಲೂ ಇಲ್ಲ.'

ಆಲೂರರ ಕೃತಿಗಳಲ್ಲಿ 'ಕನ್ನಡಿಗರು' ಎನ್ನುವುದಕ್ಕೆ 'ಹಿಂದೂಗಳು' ಎಂದು ಬಳಕೆಯಾಗುವುದೇ ಹೆಚ್ಚು. ಇದಕ್ಕೆ ಪೂರಕವಾಗಿ ಅವರ ಈ ನುಡಿಗಳನ್ನು ಗಮನಿಸಬಹುದು. 'ವಿಜಯನಗರಕ್ಕೆ ಈಗಲೂ ಹೋಗಿ ಬರ್ರಿ. ಅಲ್ಲಿ ನಿಮಗೆ ಕಾಣುವ ಭವ್ಯ ಕಟ್ಟಡಗಳೂ, ವಿಶಾಲವಾದ ಕಲ್ಲು ಅಂಗಡಿ ಸಾಲುಗಳೂ, ಅರಸು ಮನೆಗಳೂ, ಕೋಟೆ ಕೊತ್ತಲಗಳೂ ಇವೆಲ್ಲವುಗಳು ಹಿಂದೂ ಜನರ ವೈಭವದ ಹಾಗೂ ವಿದ್ವತ್ತೆಯ ಸಾಕ್ಷಿಯನ್ನು ಕೊಡುವುದು' ಇಲ್ಲಿ ಹಿಂದೂಗಳ ಪ್ರಧಾನ ಶತ್ರುಗಳು ಎಂದರೆ ಕನ್ನಡದ ಪ್ರಧಾನ ಶತ್ರುಗಳು 'ಮುಸಲ್ಮಾನರು'. ಅದು ಚರಿತ್ರೆಯಿಂದಲೇ ಆರಂಭವಾಗುತ್ತದೆ. 'ಶಾಲೆಯಲ್ಲಿ ನಾವು ಕಲಿತ ಇತಿಹಾಸದುದ್ದಕ್ಕೂ 'ಕರ್ನಾಟಕ'ದ ಹೆಸರು ಶೂನ್ಯ. ಪರದಾಸ್ಯದಲ್ಲಿ ಸಿಕ್ಕಾಗಿನಿಂದ ಅಂದರೆ, ಮುಸಲ್ಮಾನರ ಕಾಲದಿಂದ ಪ್ರಾರಂಭವಾದ ಇತಿಹಾಸ ಇದು' ಎಂದು ಆಲೂರರು ವ್ಯಥೆಪಡುತ್ತಾರೆ. 'ಕೊಡಗು ಮುಸಲ್ಮಾನರ ಸಂಸ್ಕೃತಿ ಮತ್ತು ಆಡಳಿತದಿಂದ ಬದ್ಧವಾದ ಪ್ರದೇಶ. ಅಲ್ಲಿಯ ಕನ್ನಡಿಗರಿಗೆ ರಾಜಕಾರಣವೆಂದರೇನೆ ಗೊತ್ತಿಲ್ಲ' ಎಂದು ಮುಸಲ್ಮಾನರ ಬಗ್ಗೆ ತಮಗಿರುವ ಪೂರ್ವಗ್ರಹವನ್ನು ಹೊರಹಾಕುತ್ತಾರೆ. ಈ ಹಿನ್ನೆಲೆಯಲ್ಲಿ 'ಮುಸಲ್ಮಾನರನ್ನು ಓಡಿಸಿ ವಿಜಯನಗರ ಸ್ಥಾಪಿಸಿದ' ವಿದ್ಯಾರಣ್ಯರ ಉತ್ಸವ ಮಾಡಲಾರಂಭಿಸಿದುದರ ಹಿಂದೆ, ಮುಸ್ಲಿಂ ದೊರೆಗಳ ವಿರುದ್ಧದ ರಕ್ಕಸತಂಗಡಿಯ ಯುದ್ಧದ ಭಸ್ಮ ಪ್ರದರ್ಶನ ಕಾರ್ಯಕ್ರಮದ ಹಿಂದೆ ಆಲೂರರಿಗೆ ಮತೀಯ ಉದ್ದೇಶವಿರುವ ಗಾಢ ಅನುಮಾನಗಳನ್ನು ಹುಟ್ಟು ಹಾಕುತ್ತವೆ.

ಹಿಂದುತ್ವ ತನ್ನ ಮೊದಲ ಶತ್ರುವನ್ನಾಗಿ ಮುಸ್ಲಿಮರನ್ನು ನೋಡುತ್ತದೆ. ಕನ್ನಡ ರಾಷ್ಟ್ರೀಯತೆಯ ಪರಿಕಲ್ಪನೆಗೆ ಮೊದಲಿನಿಂದಲೂ ಹಿಂದುತ್ವ ಅಥವಾ ಹಿಂದೂ ರಾಷ್ಟ್ರೀಯತೆಯ ಜೊತೆಗೆ ಸಾವಯವ ಸಂಬಂಧ ಇದ್ದೇ ಇದೆ. ಭಾರತದಲ್ಲಿ ರಾಷ್ಟ್ರೀಯತೆ ಎಂದರೇನೇ ಹಿಂದೂ ರಾಷ್ಟ್ರೀಯತೆ ಎಂಬ ನಂಬಿಕೆ ಒಂದು ಘಟ್ಟದಲ್ಲಿ ತುಂಬ ಪ್ರಬಲವಾಗೇ ಬೆಳೆದು ಬಂದಿತ್ತು. ಆಲೂರರಲ್ಲೂ ಕೂಡ ಈ ಹಿಂದುತ್ವ ಮತ್ತು ಕನ್ನಡ ರಾಷ್ಟ್ರೀಯತೆಗಳ ಸಾವಯವ ಸಂಬಂಧದ ಪ್ರಸ್ತಾಪವಿದೆ. ಆದರೆ, ಡಿ. ಆರ್. ನಾಗರಾಜ ಅವರು ಗಮನಿಸುವಂತೆ, ಆಲೂರರ ಮುಖ್ಯ ಗುಣವೆಂದರೆ ತಮ್ಮ ಉಳಿದ ವಿಶಾಲ ಹಾಗೂ ಸೂಕ್ಷ್ಮ ಪರಿಕಲ್ಪನೆಗಳ ಮೂಲಕ ಆ ಹಿಂದುತ್ವವನ್ನು ಮುಚ್ಚಲು ಪ್ರಯತ್ನಿಸುತ್ತಾರೆ. ಅವರಲ್ಲಿ ಹಿಂದುತ್ವ ಎಂಬುದು ವಿಶಿಷ್ಟ ವ್ಯಕ್ತಿತ್ವದ ಒಂದು ರೂಪವೇ ಹೊರತು, ಏಕಮಾತ್ರ ರೂಪವಲ್ಲ. ಇಷ್ಟಾದರೂ ಕನ್ನಡ ರಾಷ್ಟ್ರೀಯತೆ ಮತ್ತು ಹಿಂದುತ್ವಗಳ ನಡುವಿನ ಸಂಬಂಧ ಅಪಾಯಕಾರಿ ನೆಲೆಗಳಿಗೆ ತಿರುಗುವುದನ್ನು ಆಲೂರರಲ್ಲೇ ಗುರುತಿಸುವುದು ಸಾಧ್ಯ.

ಆಲೂರರು ಹಿಂದೂಯೇತರ ಧರ್ಮಗಳು ಕನ್ನಡ ಸಂಸ್ಕೃತಿಗೆ ಕೊಟ್ಟ ಕೊಡುಗೆಯನ್ನು ಪರಿಗಣಿಸದೇ ನಿರ್ಲಕ್ಷಿಸುತ್ತಾರೆ. ಹಾಗೆಂದು ಆಲೂರರು ಹಿಂದೂ ಧರ್ಮ ಕನ್ನಡ ಸಂಸ್ಕೃತಿಗೆ ಕೊಟ್ಟ ಕೊಡುಗೆಯನ್ನು ಪರಿಗಣಿಸುತ್ತಾರೆ ಎಂದರೆ ಅದು ಕೂಡ ಅವಾಸ್ತವವಾದದ್ದು. ಯಾಕೆಂದರೆ ಆಲೂರರ ಹಿಂದೂಧರ್ಮ ಎಂದರೆ ಹಿಂದುತ್ವ. ಹಿಂದುತ್ವ ಪ್ರತಿಪಾದಿಸುವುದು ಹಿಂದೂ ಮೇಲ್ಜಾತಿಗಳ ಸಂಸ್ಕೃತಿಯನ್ನು ಮಾತ್ರ. ಆಲೂರರೂ ಇದಕ್ಕೆ ಹೊರತಲ್ಲ. ಹಿಂದೂ ಧರ್ಮದ ಅಸಂಖ್ಯಾತ ಜಾತಿ ಜನಾಂಗಗಳು ಕನ್ನಡ ಸಂಸ್ಕೃತಿಗೆ

ಕೊಟ್ಟ ಕೊಡುಗೆಯ ಪ್ರಸ್ತಾಪ ಆಲೂರರಲ್ಲಿ ಬರುವುದಿಲ್ಲ.

"ಕೊಲಂಬಸನು ಅಮೇರಿಕೆಯನ್ನು ಹುಡುಕಿ ತೆಗೆದಂತೆ, ನಾನೂ "ಕರ್ನಾಟಕ"ವನ್ನು ಹೊಸದಾಗಿ ಹುಡುಕಿ ತೆಗೆಯಬೇಕಾಯಿತು. ದೀರ್ಘ ವಿಚಾರ ಮಾಡಿ ಮತ್ತು ಅಭ್ಯಾಸ ಮಾಡಿ ಹುಡುಕಿ ತೆಗೆದೆ" ಎಂದು ಆಲೂರರು ತಮ್ಮನ್ನು ಕೊಲಂಬಸನಿಗೆ ಹೋಲಿಸಿಕೊಳ್ಳುತ್ತಾರೆ. ಆಲೂರರ ಈ ಹೋಲಿಕೆಯನ್ನು ಉಲ್ಲೇಖಿಸುತ್ತ ಡಿ. ಆರ್. ನಾಗರಾಜ್ ಅವರು 'ಆಲೂರರ ಈ ಮಾತುಗಳಿಗೆ ದೊಡ್ಡಕಾವ್ಯದಲ್ಲಿ ಬರುವ ರೂಪಕದ ಶಕ್ತಿ ಮತ್ತು ನಿಗೂಢತೆಗಳಿವೆ. ಚಾರಿತ್ರಿಕ ಸತ್ಯವೊಂದನ್ನು ಧಿಗ್ಗನೆ ಹೊಳೆಯಿಸುವ ಶಕ್ತಿ ಈ ಮಾತುಗಳಿಗೆ ಇದೆ' ಎಂದು ಅಭಿಪ್ರಾಯಪಡುತ್ತಾರೆ.

ಕನ್ನಡ ಚಿಂತನೆಯಲ್ಲಿ ಕೊಲಂಬಸ್‌ನ ಹೋಲಿಕೆ ಮತ್ತೊಂದು ಕಡೆ ಬರುತ್ತದೆ. ಹಿರಿಯ ಸಂಶೋಧಕ ಮಂಜೇಶ್ವರ ಗೋವಿಂದ ಪೈಗಳು ಶಂಬಾ ಅವರನ್ನು 'ಕೋಲಂಬಸ್' ಎಂದು ಕರೆಯುತ್ತಾರೆ. ನಮಗೆ ತಿಳಿಯದ ಇನ್ನೊಂದು ಕರ್ನಾಟಕವನ್ನು ನಿಮಗಿಂತ ಹೆಚ್ಚು ಆಳವಾಗಿ ಸಂಶೋಧನೆ ಮಾಡಿದವರನ್ನು ನಾನು ಅರಿಯೆ ಎನ್ನುತ್ತ ಶಂಬಾ ಅವರ ಸಂಶೋಧನೆಯನ್ನು 'ಕೋಲಂಬಸ್'ನ ಸಂಶೋಧನೆಗೆ ಪೈಗಳು ಹೋಲಿಸುತ್ತಾರೆ. 'ಪಾತಳಿ' ಕೃತಿಯಲ್ಲಿ ಉಲ್ಲೇಖವಾದಂತೆ ಅದು ಮುಂದಿನಂತಿದೆ : "So far I know, no spade else than yours has yet dived deeper into the dark and unknown part of Karnataka. Yours have been the greatest pains to reach the other side of that unknown past and I promise yours will be the glory of Columbus erelong" ಏಕೀಕರಣ ಚಳುವಳಿಯ ಮೂಲಕ ಭೌಗೋಳಿಕ ಕರ್ನಾಟಕವನ್ನು ಕಂಡುಹಿಡಿದಿದ್ದರ ಶ್ರೇಯಸ್ಸಿನಲ್ಲಿನ ಸಿಂಹಪಾಲು ನಿಸ್ಸಂಶಯವಾಗಿ ಆಲೂರರಿಗೆ ಸೇರಬೇಕು. ಆದರೆ ಈ ಭೌಗೋಳಿಕ ಕರ್ನಾಟಕದ ಮೇಲೆ ಅವರು ಕಟ್ಟಬಯಸಿದ್ದು ಸನಾತನ ಧರ್ಮ, ಹಿಂದುತ್ವ, ಬ್ರಾಹ್ಮಣತ್ವದಂತಹ ತರತಮಗಳನ್ನು ಪೋಷಿಸುವ ಮೌಲ್ಯಗಳ ಕರ್ನಾಟಕವನ್ನೇ ಹೊರತು ಸಾವಿರಾರು ವರ್ಷಗಳಿಂದ ಕನ್ನಡದ ಸಾಹಿತಿಗಳು, ವಚನಕಾರರು, ತತ್ವಪದಕಾರರು ಕಟ್ಟಿಟ್ಟಂತಹ ಜೀವಪರ ಮೌಲ್ಯಗಳುಳ್ಳ ಕರ್ನಾಟಕವನ್ನಲ್ಲ. ಇಂತಹ ಪರಂಪರೆಯ ವಾರಸುದಾರರು ವೈಚಾರಿಕವಾಗಿ ಕನ್ನಡ ಪ್ರಜ್ಞೆಯನ್ನು ರೂಪಿಸಲು ಯತ್ನಿಸಿದ ಶಂಬಾ ಜೋಶಿಯವರು. ಆಲೂರು ಮತ್ತು ಶಂಬಾ ಕಂಡುಹಿಡಿದು ಕೊಟ್ಟ ಎರಡು 'ಕರ್ನಾಟಕಗಳಲ್ಲಿ' ಯಾವ ಕರ್ನಾಟಕವನ್ನು, ಯಾವ ಕರ್ನಾಟಕದ ಯಾವ ಅಂಶಗಳನ್ನು ಸ್ವೀಕರಿಸುತ್ತೇವೆ, ಯಾವ ಅಂಶಗಳನ್ನು ತ್ಯಜಿಸುತ್ತೇವೆ, ಒಟ್ಟಾರೆ ಯಾವ ಕರ್ನಾಟಕವನ್ನು ಮಾದರಿಯನ್ನಾಗಿ ಸ್ವೀಕರಿಸುತ್ತೇವೆ ಎನ್ನುವುದು ನಾವು ಕಟ್ಟಬಯಸುವ ಕರ್ನಾಟಕದ ಸ್ವರೂಪವನ್ನು ನಿರ್ಧರಿಸುವ ಸಂಗತಿಯಾಗಿದೆ.

'ಕನ್ನಡದ ಏಕೀಕರಣದ್ದು ಅಸಾಮಾನ್ಯ ಸಾಹಸ. ಸ್ಥಳೀಯವಾಗಿರುವಂತಹ ಹಲವಾರು ತುಂಡುಗಳು, ಹಲವು ಸಂಸ್ಕೃತಿಗಳು, ಹಲವು ಇತಿಹಾಸಗಳು ಎಲ್ಲವನ್ನೂ ಸೇರಿಸಿಕೊಳ್ಳುವಂತಹ ಏಕೀಕರಣವದು. ಯಾವುದನ್ನು ಕುವೆಂಪು 'ಮೂಕ ಆಶಯ', ಯಾವುದನ್ನು ಸುಬ್ಬಣ್ಣ 'ಇನ್ನೂ ಮೂಡದ ಆಕೃತಿ' ಅಂತ ಗುರುತಿಸಿದ್ದರೋ ಅದಕ್ಕೆ ಮೂರ್ತ, ರಾಜಕೀಯ ಶರೀರವನ್ನು ಕೊಡುವ ಬಹುದೊಡ್ಡ ವೈಚಾರಿಕ ಸಾಹಸ. ಇವತ್ತು ಕರ್ನಾಟಕ ಇದೆ, ಕರ್ನಾಟಕದ ಗಡಿಗಳಿವೆ, ಕರ್ನಾಟಕದ ಮ್ಯಾಪ್‌ಗಳಿವೆ. ಅವು ಸುಲಭ ಸಾಧ್ಯವಾಗಿ ಕಾಣುತ್ತವೆ. ಆದರೆ ಏಕೀಕರಣಕ್ಕಾಗಿ ಹಲವಾರು ನೂರು ವರ್ಷಗಳವರೆಗೆ ತಮ್ಮದೇ ಸ್ವಂತ ಇತಿಹಾಸ ಸ್ಥಳೀಯ ಸಂಸ್ಕೃತಿಗಳು ಸೇರಿಕೊಂಡು ಕರ್ನಾಟಕ ಅಸ್ತಿತ್ವಕ್ಕೆ ಬರಬೇಕಾಗಿತ್ತು. ಏಕೀಕರಣವು ಇದನ್ನು ಸಾಧಿಸಿತು'. ಎಂದು ತಮ್ಮ 'ಅಸಮಗ್ರ' ಕೃತಿಯಲ್ಲಿ ರಾಜೇಂದ್ರ ಚೆನ್ನಿ ಅವರು ಅಭಿಪ್ರಾಯ ಪಡುತ್ತಾರೆ. ಇಂತಹ ಸಂಕೀರ್ಣವಾದ, ಸವಾಲಿನ, ದೀರ್ಘಕಾಲೀನ ಏಕೀಕರಣ ಚಳುವಳಿಯನ್ನು ಮುನ್ನಡೆಸಿದ ನಾಯಕರಲ್ಲಿ ಮುಂಚೂಣಿಯಲ್ಲಿದ್ದ ಆಲೂರರ ಕೊಡುಗೆ ಬಹಳ ಮಹತ್ವವಾದದ್ದು. ಆಲೂರರ ಇಂತಹ ಅಮೂಲ್ಯವಾದ ಕೊಡುಗೆಯನ್ನು ಏಕೀಕರಣಗೊಂಡ ಕರ್ನಾಟಕ ಉದ್ದಕ್ಕೂ ಗೌರವಿಸುತ್ತಲೇ ಬಂದಿದೆ. ಮುಂದೆಯೂ ಅವರಿಗೆ ಈ ಗೌರವ ಅಗತ್ಯ ಸಲ್ಲಲೇಬೇಕು. ಹೀಗೆ ಆಲೂರರನ್ನು ಗೌರವಿಸುವುದೂ, ಗೌರವಿಸುವ ಹೊತ್ತಿನಲ್ಲಿಯೂ ಅವರ ಕನ್ನಡ ಅಸ್ಮಿತೆ ಕುರಿತ ಚಿಂತನೆಗಳ ಮಿತಿಗಳನ್ನೂ, ಅವು ಕನ್ನಡ ಬದುಕಿನ ಮೇಲೆ ಉಂಟುಮಾಡಿದ, ಉಂಟುಮಾಡುತ್ತಿರುವ ಪರಿಣಾಮಗಳನ್ನೂ ಅರಿಯುವುದೂ ಕರ್ನಾಟಕದ ಜವಾಬ್ದಾರಿಯಾಗಿದೆ.


**ಡಾ॥ ಸರ್ಜಾಶಂಕರ ಹರಳಿಮಠ**
ದೇಸಿ ಸಂಸ್ಕೃತಿ, ಮೈಲಾರೇಶ್ವರ ದೇವಸ್ಥಾನ ಸಂಕೀರ್ಣ
ಬಿ. ಎಚ್. ರಸ್ತೆ, ಶಿವಮೊಗ್ಗ – ೫೭೭ ೨೦೧
email : desisamskruthi1@gmail.com


# ಭ್ರೂಣ ಬೇಟೆ

**ಸೀ**ತೆ ಸಾವಿತ್ರಿ ದ್ರೌಪದಿ ಮತ್ತೆ ಬರದಂತೆ
ಧ್ವನಿಯ ಅಡಗಿಸುವ ಹುನ್ನಾರದ ಬೇಟೆ
ಹೆಣ್ಣು ಕುಲದ ಬೇರ ಕಡಿಯುವ ಹೊತ್ತು
ಮರುಕವಿಲ್ಲದ ಮಾನಿನಿಯರ
ಮಂಗಲಗೀತ
ಯಾವ ದೇವನಿಗೆ ಬೇಕು?

ಕತ್ತಲು ಹರಿದು ಬೆಳಕಾಗುವ ಮುನ್ನ
ಬೇಟೆ ಮುಗಿಸುವರು
ಕತ್ತಿ ಕೊಡಲಿ ಭರ್ಚಿ ಬಂದೂಕಿಲ್ಲದೆ
ಗರ್ಭಚೀಲ ಹರಿಯುವರು
ಮುದ್ದಿನ ಗಿಳಿಯ ಕತ್ತ ಕೊಯ್ಯುವ
ಏನಿದು ಹುನ್ನಾರ ?

ಧರ್ಮ ಅಧರ್ಮದ ತರತಮವಿಲ್ಲ
ಶಾಸ್ತ್ರ ಪುರಾಣಗಳ ತರ್ಕವು ಇಲ್ಲ
ಕರುಳ ಕತ್ತರಿಸಿ ಭ್ರೂಣ ನೈವೇದ್ಯ
ನಿರಾತಂಕ
ಯಾವ ಮಾರಿ ಮುನಿದಳೋ?

ಮೌಢ್ಯಕೂಪದ ಮಾರಣ ಹೋಮ
ಪ್ರಾಣಿ ಬಲಿ ನಿಷೇಧಿಸಿದೆ
ಹಿತ್ತಲದ ತಿಪ್ಪೆಯ ತುಂಬೆಲ್ಲ
ಹೆಣ್ಣು ಭ್ರೂಣದ ರಾಶಿ ರಾಶಿ
ಎರೆಹುಳುವಿಗೆ ಭೂರಿ ಭೋಜನ





**ಡಾ॥ ವಿಷ್ಣು ಎಂ. ಶಿಂದೆ**
ಶಿಕ್ಷಣ ಅಧ್ಯಯನ ವಿಭಾಗ, ಕರ್ನಾಟಕ ರಾಜ್ಯ
ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ
ವಿಜಯಪುರ – ೫೮೬ ೧೦೫
email : vishnushinde1973@gmail.com

# ಶಿಕ್ಷಣದ ಸಾರ್ವತ್ರೀಕರಣದಲ್ಲಿ ಶಿಕ್ಷಣ ಹಕ್ಕಿನ ಹೆಜ್ಜೆ ಗುರುತುಗಳು



ಮೈಸೂರು ಮಹಾರಾಜರು ೧೮೫೭ರಲ್ಲಿ ಮೈಸೂರು ರಾಜ್ಯಕ್ಕಾಗಿ ಶಿಕ್ಷಣ ಯೋಜನೆಯೊಂದನ್ನು ಸಿದ್ಧಪಡಿಸಿ ಭಾರತ ಸರಕಾರದ ಅನುಮೋದನೆ ಪಡೆದುಕೊಂಡಿದ್ದರು. ಅವರು ೧೮೬೬ರಲ್ಲಿ ಶಿಕ್ಷಣ ಇಲಾಖೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ತಂದು ಮೈಸೂರು ರಾಜ್ಯದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿದರು. ೧೯೧೧ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಉಚಿತವೆಂದು ಸಾರುವ ಒಂದು ರಾಜಾಜ್ಞೆ "ರಾಯಲ್ ಆರ್ಡಿನೆನ್ಸ್"ನ್ನು ಹೊರಡಿಸಲಾಯಿತು. ಮುಂದೆ ೧೯೩೪ರಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸುವ ಕಾಯಿದೆಯನ್ನು ಜಾರಿಗೊಳಿಸಲಾಯಿತು.

**ಸದಾನಂದ**

**ಶಿ**ಕ್ಷಣದ ಸಾರ್ವತ್ರೀಕರಣದ ಬಗೆಗಿನ ಚರ್ಚೆ ಇಂದು ನಿನ್ನೆಯದಲ್ಲ. ಸುಮಾರು ೧೩೫ ವರ್ಷಗಳಷ್ಟು ಹಿಂದಿನಿಂದಲೇ ಈ ಬಗ್ಗೆ ಚರ್ಚೆ ಆರಂಭವಾಗಿತ್ತು. ಮಹಾತ್ಮಾ ಜ್ಯೋತಿಬಾ ಫುಲೆಯವರು ೧೮೮೨ರಲ್ಲಿ ಹಂಟರ್ ಆಯೋಗದ ಮುಂದೆ ಶಿಕ್ಷಣಕ್ಕೆ ಸಂಬಂಧಿಸಿದ ಒಂದು ಮನವಿಯನ್ನು ಸಲ್ಲಿಸಿ ಬ್ರಿಟಿಷ್ ಸರ್ಕಾರ ಶಿಕ್ಷಣಕ್ಕೆ ನೀಡುತ್ತಿರುವ ಹಣಕಾಸಿನ ನೆರವು ಹೇಗೆ ಮೇಲುಪದರದ ಮತ್ತು ಮೇಲುಜಾತಿಗಳಿಗೆ ಹೆಚ್ಚಿನ ಅನುಕೂಲ ಒದಗಿಸುತ್ತಿದೆ ಹಾಗೂ ಬಹುಸಂಖ್ಯಾತರು ಹೇಗೆ ಅಜ್ಞಾನ ಮತ್ತು ಬಡತನದಲ್ಲಿ ಇರುವಂತಾಗಿದೆ, ಬ್ರಿಟಿಷ್ ಸರ್ಕಾರಕ್ಕೆ ಬರುತ್ತಿದ್ದ ಕಂದಾಯ ಮತ್ತು ತೆರಿಗೆಯ ಬಹುಪಾಲು ಹೇಗೆ ಬಡ ಕಾರ್ಮಿಕ ವರ್ಗದಿಂದಲೇ ಉತ್ಪತ್ತಿಯಾಗುತ್ತದೆ ಎಂದೂ ವಿಶ್ಲೇಷಿಸಿದರು. ಬ್ರಿಟಿಷ್ ಸರ್ಕಾರವು ಬಡ ಕಾರ್ಮಿಕ ವರ್ಗದವರಿಂದ ತೆರಿಗೆಯನ್ನು ಸಂಗ್ರಹಿಸಿ ಕೇವಲ ಒಂದು ಕುಲೀನ ವರ್ಗಕ್ಕೆ ಮಾತ್ರ ಶಿಕ್ಷಣದ ಅವಕಾಶ ನೀಡುತ್ತಿರುವುದು ಸರಿಯಾದ ಕ್ರಮವಲ್ಲವೆಂದು ಅವರು ಅಂದೇ ವಿರೋಧಿಸಿದರು.

ಅದೇ ಸಂದರ್ಭದಲ್ಲಿ ಜ್ಯೋತಿಬಾ ಫುಲೆಯವರ ಪತ್ನಿ ಸಾವಿತ್ರಿಬಾಯಿ ಸ್ವತಃ ತಾವೇ ಪೂನಾದಲ್ಲಿ ಶಾಲೆಯೊಂದನ್ನು ತೆರೆದು ಬ್ರಿಟಿಷ್ ಸರ್ಕಾರಕ್ಕೆ ಶಾಲಾ ಶಿಕ್ಷಣದ ಅಗತ್ಯತೆಯ ಕುರಿತು ಗಮನ ಸೆಳೆದರು. ಮುಂದೆ ೧೮೮೩ರಲ್ಲಿ ಬರೋಡಾದ ಮಹಾರಾಜ ಗಾಯಕ್ವಾಡ್ ಮೊದಲು ತನ್ನ ರಾಜ್ಯದ ಅಮರಾಲಿಯಲ್ಲಿ ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿ, ಕ್ರಮೇಣ ೧೯೦೬ರಲ್ಲಿ ಬರೋಡಾದಾದ್ಯಂತ ಅದನ್ನು ವಿಸ್ತರಿಸಿದರು.

೧೯೧೧ರಲ್ಲಿ ಗೋಪಾಲಕೃಷ್ಣ ಗೋಖಲೆಯವರು ಆಗಿನ ಇಂಪೀರಿಯಲ್ ಅಸೆಂಬ್ಲಿಯಲ್ಲಿ ತಮ್ಮ ಉಚಿತ ಮತ್ತು ಕಡ್ಡಾಯ ಶಿಕ್ಷಣ ಮಸೂದೆಯನ್ನು ಮಂಡಿಸಿದಾಗ ಅವರಿಗೆ ಪ್ರಬಲವಾದ ವಿರೋಧವನ್ನು ಒಡ್ಡಲಾಯಿತು. ಈ ಮಸೂದೆಯನ್ನು ಬೆಂಬಲಿಸುವ ಬದಲಾಗಿ ಪ್ರತಿಭಟನೆಯನ್ನು ಎದುರಿಸಬೇಕಾಯಿತು. ಈ ವಿಧಾನಮಂಡಲವನ್ನು ಪ್ರತಿನಿಧಿಸುತ್ತಿದ್ದ ಪ್ರತಿಷ್ಠಿತ ವರ್ಗದವರಾದ ರಾಜರು, ಸಾಮಂತ ಆಡಳಿತಗಾರರು, ಭೂಮಾಲೀಕರು, ಸಾಂಸ್ಥಿಕ ರಾಜ್ಯಗಳ ರಾಜಕುಮಾರರು ಹಾಗೂ ಈಗಾಗಲೇ ವಿಶೇಷ ಸೌಲಭ್ಯಗಳನ್ನು ಪಡೆದ ಪ್ರತಿಷ್ಠಿತರ ಗುಂಪು "ಈ ದೇಶದ ಸಂವಿಧಾನ ಸರ್ವರಿಗೂ ಶಿಕ್ಷಣ ಮಸೂದೆಯನ್ನು ಜಾರಿಗೆ ತರಲು ಪೂರಕವಾದ ವಾತಾವರಣ ಇಲ್ಲವೆಂದು ಆತುರಾತುರವಾಗಿ ಮಸೂದೆಯನ್ನು ಒಪ್ಪಿಕೊಳ್ಳುವ ಪ್ರಕ್ರಿಯೆಯನ್ನು ವಿರೋಧಿಸಿತು. ಮತ್ತು ಇದನ್ನು ಅಂಗೀಕರಿಸಬಾರದೆಂದು ಒತ್ತಾಯಿಸಿತು" ಅಂದಿನ ಬಿಹಾರ ರಾಜ್ಯದ ದರ್ಬಾಂಗ ಪ್ರಾಂತ್ಯದ ಮಹಾರಾಜನಂತೂ ಈ ಮಸೂದೆಯನ್ನು ವಿರೋಧಿಸಿ ಬರೆದ ತನ್ನ ಮನವಿಗೆ ೧೧೦೦೦ ಪ್ರತಿಷ್ಠಿತ ವರ್ಗದವರ ಹಾಗೂ ಜಮೀನುದಾರರ ಸಹಿ ಸಂಗ್ರಹಿಸಿ "ನಮ್ಮ ಪ್ರದೇಶದ ಎಲ್ಲಾ ಜಾತಿಯ ಎಲ್ಲಾ ಮಕ್ಕಳು ಶಾಲೆಗೆ ಹೋದರೆ ನಮ್ಮ ಹೊಲಗದ್ದೆಗಳಲ್ಲಿ ಕೃಷಿ ಚಟುವಟಿಕೆ ನಿಂತು ಹೋಗುತ್ತದೆ ಎಂದು ಈ ಮಸೂದೆಯನ್ನು ಒಪ್ಪಿಕೊಳ್ಳಬಾರದು" ಎಂದು ಬ್ರಿಟಿಷ್ ಸರಕಾರವನ್ನು ಕೋರಿದ. ಇದು ಶಿಕ್ಷಣದ ಸಾರ್ವತ್ರೀಕರಣಕ್ಕೆ ಆ ಸಂದರ್ಭದ ವಿರೋಧವಾಗಿತ್ತು.

ಮೈಸೂರು ಮಹಾರಾಜರು ೧೮೫೭ರಲ್ಲಿ ಮೈಸೂರು ರಾಜ್ಯಕ್ಕಾಗಿ ಶಿಕ್ಷಣ ಯೋಜನೆಯೊಂದನ್ನು ಸಿದ್ಧಪಡಿಸಿ ಭಾರತ ಸರಕಾರದ ಅನುಮೋದನೆ ಪಡೆದುಕೊಂಡಿದ್ದರು. ಅವರು ೧೮೬೬ರಲ್ಲಿ ಶಿಕ್ಷಣ ಇಲಾಖೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ತಂದು ಮೈಸೂರು ರಾಜ್ಯದಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಜಾರಿಗೊಳಿಸಿದರು. ೧೯೧೧ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಉಚಿತವೆಂದು ಸಾರುವ ಒಂದು ರಾಜಾಜ್ಞೆ "ರಾಯಲ್ ಆರ್ಡಿನೆನ್ಸ್"ನ್ನು ಹೊರಡಿಸಲಾಯಿತು. ಮುಂದೆ ೧೯೩೪ರಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸುವ ಕಾಯಿದೆಯನ್ನು ಜಾರಿಗೊಳಿಸಲಾಯಿತು.

೧೯೩೭ರಲ್ಲಿ ಮಹಾರಾಷ್ಟ್ರದ ವಾರ್ಧದಲ್ಲಿ ನಡೆದ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಹಾತ್ಮ ಗಾಂಧೀಜಿಯವರು ಆಗ ತಾನೆ ಏಳು ಪ್ರಾಂತ್ಯಗಳಲ್ಲಿ ಚುನಾಯಿತರಾದ ಕಾಂಗ್ರೆಸ್ ಸರಕಾರಗಳಿಗೆ ಪ್ರಥಮ ಏಳು ವರ್ಷಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂದು ಅದಕ್ಕೆ ಬೇಕಾಗುವ ಅನುದಾನವನ್ನು ಸರಕಾರವೇ ಭರಿಸಬೇಕೆಂದು ಒತ್ತಾಯಿಸಿದರು. ಆದರೆ ಪ್ರಾಂತೀಯ ಸರಕಾರದ ಮಂತ್ರಿಗಳು ಶಿಕ್ಷಣಕ್ಕೆ ಬೇಕಾಗುವ ಸಂಪನ್ಮೂಲ ಸಾಕಷ್ಟು ಇಲ್ಲವೆಂದು ಪ್ರತಿವಾದಿಸುತ್ತಾ ಗಾಂಧೀಜಿಯವರ ಒತ್ತಾಯವನ್ನು ಕಡೆಗಣಿಸಿದರು.

ಸ್ವಾತಂತ್ರ್ಯಾನಂತರ ೧೯೪೭–೪೮ರ ಸಂವಿಧಾನ ರಚನಾ ಸಭೆಯಲ್ಲಿ ಚರ್ಚಿಸಿದಂತೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ೧೪ ವಯಸ್ಸಿನವರೆಗೂ ನೀಡುವ ಕುರಿತು ಅದಕ್ಕೆ ಬೇಕಾಗಿರುವ ಸಂಪನ್ಮೂಲಗಳು ಹಾಗೂ ಮೂಲಭೂತ ಸೌಲಭ್ಯಗಳು ಭಾರತದಲ್ಲಿ ಕೊರತೆ ಇರುವುದರಿಂದ ಶಿಕ್ಷಣವನ್ನು ೧೧ನೇ ವಯಸ್ಸಿನವರೆಗೆ ಸೀಮಿತಗೊಳಿಸುವುದು ಉಚಿತ ಎಂಬ ನಿರ್ಧಾರಕ್ಕೆ ಬರಲಾಯಿತು.

ಆ ಸಮಯದಲ್ಲಿ ಅಂಬೇಡ್ಕರ್‌ರವರು ಸರ್ದಾರ ವಲ್ಲಭಭಾಯಿ ಪಟೇಲ್ ಅವರ ಅಧ್ಯಕ್ಷತೆಯ ಉಪ ಸಮಿತಿಯ ಮುಂದೆ ತಮ್ಮ ವಾದ ಮಂಡಿಸಿ "ಭಾರತದಲ್ಲಿ ಮಕ್ಕಳು ೧೧ನೇ ವಯಸ್ಸಿನಲ್ಲಿಯೇ ಹೆಚ್ಚಾಗಿ ಬಾಲಕಾರ್ಮಿಕರಾಗಿಬಿಡುವ ಸಂಭವವಿರುವುದರಿಂದ ಈ ಯೋಜನೆ ಸೂಕ್ತವಲ್ಲ" ಎಂದು ವಾದಿಸುತ್ತಾ "ಈ ವಯಸ್ಸಿನಲ್ಲಿ ಮಕ್ಕಳು ಬೇರೆಯವರ ಹೊಲಗದ್ದೆಗಳಲ್ಲಿ, ಕೈಗಾರಿಕೆಗಳಲ್ಲಿರದೆ, ಶಾಲೆಗಳಲ್ಲಿರಬೇಕು" ಎಂದು ಬಲವಾಗಿ ವಾದಿಸಿದರು. ಈ ವಾದ ವಿವಾದಗಳ ಫಲವಾಗಿ ೧೪ ವಯಸ್ಸಿನವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಕೊಡಬೇಕೆಂಬ ಚಿಂತನೆ ಹುಟ್ಟಿ ಕೊಂಡಿತು. ಹಾಗೆ ಇದು ೧೯೫೦ರಲ್ಲಿ ಭಾರತ ಸಂವಿಧಾನದ ಅವಿಭಾಜ್ಯ ಅಂಗವಾಗಿ ರೂಪುಗೊಂಡಿತು.


**ಗೋಪಾಲಕೃಷ್ಣ ಗೋಖಲೆ**

ಸ್ವಾತಂತ್ರ್ಯಾನಂತರ ಪ್ರಜಾಪ್ರಭುತ್ವ ವ್ಯವಸ್ಥೆ ಬಲಗೊಳ್ಳುವ ಅಗತ್ಯತೆಯನ್ನು ಮನಗಂಡ ಸಂವಿಧಾನ ರಚನಾಕಾರರು ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡುವುದಕ್ಕೆ ೧೯೪೯ರ ಸಂವಿಧಾನ ರಚನಾ ಸಭೆಯಲ್ಲಿ ಅನುಮೋದನೆ ನೀಡಲಾಯಿತಾದರೂ ಸಂವಿಧಾನ ರಚನಾ ಸಭೆಯಲ್ಲಿ ಮೇಲ್ಜಾತಿಯ ಮತ್ತು ಮೇಲ್ವರ್ಗದ ಬಹಳಷ್ಟು ಸದಸ್ಯರು ಸಂವಿಧಾನದ ಮೂರನೇ ಭಾಗದಲ್ಲಿ ಕಲಂ ೪೫ನ್ನು ಸೇರಿಸುವ ಅಂಬೇಡ್ಕರ್‌ರ ಮನವಿಯನ್ನು ನಿರ್ಲಕ್ಷಿಸಿ ಅದನ್ನು ಸಂವಿಧಾನದ ಭಾಗ ೪ರಲ್ಲಿ ರಾಜ್ಯ ನಿರ್ದೇಶಕ ತತ್ವಗಳ ಅಡಿಯಲ್ಲಿ ೪೫ನೇ ಕಲಂ ಆಗಿ ಸೇರಿಸಲಾಯಿತು. ಇದರಿಂದ ಆಧುನಿಕ ಭಾರತದಲ್ಲಿ ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಪರಿವರ್ತಿಸುವ ಮಹತ್ವದ ಅವಕಾಶವನ್ನು ಕಳೆದುಕೊಳ್ಳಲಾಯಿತು. ಈ ಕಲಂ ಕೇವಲ ಶಾಲಾ ಶಿಕ್ಷಣವನ್ನು ಮಾತ್ರ ಹೇಳದೇ ೦-೩ ವರ್ಷದವರೆಗಿನ ಮಕ್ಕಳಿಗೆ ಉತ್ತಮ ಪೌಷ್ಟಿಕ ಆಹಾರ, ೩-೬ ವರ್ಷದ ಮಕ್ಕಳಿಗೆ ಪೂರ್ವ ಪ್ರಾಥಮಿಕ ಶಾಲಾ ಶಿಕ್ಷಣ ಹಾಗೂ ೬-೧೪ ವರ್ಷದವರೆಗಿನ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಪ್ರಾಥಮಿಕ ಶಿಕ್ಷಣ ಮಾತ್ರವಲ್ಲದೆ ಎಲಿಮೆಂಟರಿ ಶಿಕ್ಷಣವನ್ನು ಕೂಡ ಕೊಡಬೇಕೆಂದು ನಮ್ಮ ಸಂವಿಧಾನವು ಸ್ಪಷ್ಟವಾಗಿ ಹೇಳುತ್ತದೆ. ಹೀಗೆ ನಮ್ಮ ಸ್ವತಂತ್ರ ಭಾರತದ ನೂತನ ಸಂವಿಧಾನವು ಹುಟ್ಟಿದ ಎಲ್ಲಾ ಮಕ್ಕಳಿಗೆ ರಕ್ಷಣೆ ನೀಡುವುದರೊಂದಿಗೆ ೬ ರಿಂದ ೧೪ ವಯಸ್ಸಿನ ಎಲ್ಲಾ ಮಕ್ಕಳಿಗೂ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ೧೦ ವರ್ಷಗಳಲ್ಲಿ ಸಾಧಿಸುವ ಗುರಿಯನ್ನು ನಿಗದಿಪಡಿಸುತ್ತದೆ. ಆದರೆ ಅಂದಿನ ಸಂದರ್ಭದಲ್ಲಿ ಸಂಪನ್ಮೂಲದ ಕೊರತೆ ಇದ್ದರೂ ಶಿಕ್ಷಣವು ಆದ್ಯತೆಯ ಕ್ಷೇತ್ರವಾಗಿರದ ಕಾರಣ ನಿರ್ದಿಷ್ಟ ಗುರಿಯನ್ನು ನಿಗದಿತ ಅವಧಿಯಲ್ಲಿ ಸಾಧಿಸಲಾಗುವುದಿಲ್ಲ.

ನಂತರ ೧೯೬೮ರಲ್ಲಿ ಜಾರಿಯಾದ ರಾಷ್ಟ್ರೀಯ ಶಿಕ್ಷಣ ನೀತಿಯು ಪ್ರಾಥಮಿಕ ಶಿಕ್ಷಣವನ್ನು ನೀಡುವ ಬಗ್ಗೆ ಸರಕಾರದ ಬದ್ಧತೆಯನ್ನು ವಿವರಿಸಿತು ಹಾಗೂ ೧೯೮೬ರಲ್ಲಿ ಜಾರಿಯಾದ ರಾಷ್ಟ್ರೀಯ ಶಿಕ್ಷಣ ನೀತಿಯು ಶಿಕ್ಷಣದ ಹಕ್ಕನ್ನು ಸಾಂವಿಧಾನಿಕ ಮೂಲಭೂತ ಹಕ್ಕನ್ನಾಗಿ ಪರಿಗಣಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಿತು.

ಜಾಮ್‌ಟಿನ್‌ನಲ್ಲಿ "ಎಲ್ಲರಿಗೂ ಶಿಕ್ಷಣ" ಎಂಬ ಜಾಗತಿಕ ಸಮಾವೇಶ ೧೯೯೦ ಮಾರ್ಚ್‌ನಲ್ಲಿ ನಡೆಯಿತು. ಈ ಸಮಾವೇಶವನ್ನು ವಿಶ್ವಸಂಸ್ಥೆಯ ಪ್ರಮುಖ ಅಂಗಸಂಸ್ಥೆಗಳಾದ ಯುನೆಸ್ಕೋ, ಯುನಿಸೆಫ್, ವಿಶ್ವಬ್ಯಾಂಕ್ ಮತ್ತು ಯು.ಎನ್.ಡಿ.ಪಿ.ಗಳ ಸಹಯೋಗದೊಂದಿಗೆ ಸಂಘಟಿಸಲಾಗಿತ್ತು. ಈ ಸಮಾವೇಶವು ಪ್ರಾಥಮಿಕ ಶಾಲಾ ಶಿಕ್ಷಣದಲ್ಲಿ "ಮೂಲಕಲಿಕಾ ಅಗತ್ಯ"ಗಳನ್ನು ಗುರುತಿಸಿ ಅಳವಡಿಸಿ ಕೊಳ್ಳುವುದಾಗಿತ್ತು. ಭಾರತವು ಈ ಸಮಾವೇಶದಲ್ಲಿ ಭಾಗವಹಿಸಿ "ಎಲ್ಲರಿಗೂ ಶಿಕ್ಷಣ" ನೀಡುವ ಒಪ್ಪಂದಕ್ಕೆ ತನ್ನ ಸಹಿ ಹಾಕಿತು. ಆದರೆ ಆ ಒಪ್ಪಂದದ ಪ್ರಕಾರ ಸರ್ಕಾರದ ಸಾಂವಿಧಾನಿಕ ಕರ್ತವ್ಯವಾದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣಕ್ಕಾಗಿ ಸಂಪನ್ಮೂಲವನ್ನು ಕಾರ್ಪೊರೇಟ್ ಸಂಸ್ಥೆಗಳು, ಎನ್.ಜಿ.ಒ.ಗಳು ಹಾಗೂ ಧಾರ್ಮಿಕ ಸಂಸ್ಥೆಗಳಿಂದ ಒಗ್ಗೂಡಿಸಬೇಕಾಗಿತ್ತು.

ಮುಂದೆ ೧೯೯೩ರಲ್ಲಿ ಸುಪ್ರೀಂ ಕೋರ್ಟ್ ಉನ್ನಿಕೃಷ್ಣನ್ ವರ್ಸಸ್ ಆಂಧ್ರಪ್ರದೇಶ ಸರಕಾರ ಎಂಬ ಕೇಸ್‌ನಲ್ಲಿ ಆರ್ಟಿಕಲ್ ೨೧ (ಭಾಗ-೩)ನ್ನು ಒಳಗೊಂಡಂತೆ ಆರ್ಟಿಕಲ್ (ಭಾಗ-೪)ನ್ನು ಉಲ್ಲೇಖಿಸುತ್ತಾ ಶಿಕ್ಷಣವಿಲ್ಲದಿದ್ದರೆ ಬದುಕುವ ಹಕ್ಕು ತನ್ನ ಅರ್ಥವಂತಿಕೆಯನ್ನು ಕಳೆದುಕೊಳ್ಳುವುದರಿಂದ ಸಹಜವಾಗಿಯೇ ಶಿಕ್ಷಣವು ಮೂಲಭೂತ ಹಕ್ಕಾಗಿರುತ್ತದೆ ಎಂಬ ಮಹತ್ವದ ತೀರ್ಪನ್ನು ನೀಡಿತು. ಈ ತೀರ್ಪಿನಲ್ಲಿ ಹುಟ್ಟಿನಿಂದ ೧೪ ವಯಸ್ಸಿನವರೆಗೆ ಮಕ್ಕಳು ಶಿಕ್ಷಣದ ಮೂಲಭೂತ ಹಕ್ಕನ್ನು ಹೊಂದಿದ್ದಾರೆಂದು ಸಾರಿತು. ಈ ತೀರ್ಪಿನ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಿ ಸಂವಿಧಾನಕ್ಕೆ ಸೂಕ್ತ ತಿದ್ದುಪಡಿ ತರುವ ಪ್ರಯತ್ನವನ್ನು ೧೯೯೭ರಲ್ಲಿ ಮುಹಿರಾಮ್ ಸೈಕಿಯಾ ಸಮಿತಿಗೆ ನೀಡಲಾಗಿತ್ತು. ಇದನ್ನೇ ಸಂವಿಧಾನದ ೮೩ನೇ ತಿದ್ದುಪಡಿ ಮಸೂದೆ ಎಂದು ಕರೆಯಲಾಯಿತು. ಈ ಮಸೂದೆ ಬಹುಮತದ ಕೊರತೆಯಿಂದ ಕಾಯಿದೆಯಾಗುವಲ್ಲಿ ವಿಫಲವಾಯಿತು. ಮುಂದೆ ೨೦೦೧ರಲ್ಲಿ ಈ ಮಸೂದೆಯು ಕೆಲವು ಬದಲಾವಣೆಗಳೊಂದಿಗೆ ಸಂವಿಧಾನದ ೯೩ನೇ ತಿದ್ದುಪಡಿ ಮಸೂದೆಯಾಗಿ ಸಂಸತ್‌ನಲ್ಲಿ ಮಂಡಿಸಿ ಮುಂದೆ ೨೦೦೧ರಲ್ಲಿ ಕೆಲವು ಬದಲಾವಣೆಗಳೊಂದಿಗೆ ಪುನಃ ಮಂಡಿಸಿ ೨೦೦೨ರಲ್ಲಿ ಸಂವಿಧಾನದ ೮೬ನೇ ತಿದ್ದುಪಡಿ ಕಾಯಿದೆಯಾಗಿ ಹೊರಹೊಮ್ಮಿತು. ಈ ತಿದ್ದುಪಡಿಯಂತೆ ಸಂವಿಧಾನದ ಪರಿಚ್ಛೇದ ೨೧ಕ್ಕೆ 'ಎ' ಯನ್ನು ಸೇರಿಸುವುದರ ಮೂಲಕ ಶಾಲಾ ಶಿಕ್ಷಣಕ್ಕೆ ಈಗಾಗಲೇ ಸಂವಿಧಾನದಲ್ಲಿದ್ದ ಶಿಕ್ಷಣದ ಹಕ್ಕನ್ನು ಮೂಲಭೂತ ಹಕ್ಕು ಎಂದು ಹೇಳುವ ಮೂಲಕ ಹೆಚ್ಚಿನ ಶಕ್ತಿ ತುಂಬಲಾಯಿತು.

ಇದನ್ನು ಶಾಸನಬದ್ಧವಾಗಿ ಜಾರಿಗೆ ತರಲು ಅನುಕೂಲವಾಗುವಂತೆ ೨೦೦೩ ಮತ್ತು ೨೦೦೪ರಲ್ಲಿ ಎನ್.ಡಿ.ಎ. ಸರಕಾರ ನಂತರ ೨೦೦೫ರಿಂದ ೨೦೦೮ರ ವರೆಗೆ ಯುಪಿಎ ಸರಕಾರಗಳು ಹಲವು ಹಂತಗಳಲ್ಲಿ ಪರಿಷ್ಕರಿಸಿ ೨೦೦೯ರಲ್ಲಿ ಎರಡೂ ಸದನಗಳಲ್ಲಿ ಮಸೂದೆಯನ್ನು ಮಂಡಿಸಿ ೨೦೧೦ರಲ್ಲಿ ರಾಷ್ಟ್ರಪತಿಗಳ ಅಂಗೀಕಾರ ಪಡೆದರೂ ಮಕ್ಕಳ ಉಚಿತ ಹಾಗೂ ಕಡ್ಡಾಯ ಪ್ರಾಥಮಿಕ ಶಿಕ್ಷಣ ಹಕ್ಕು ಕಾಯಿದೆ ೨೦೦೯ ಎಂಬ ಹೆಸರಿನಲ್ಲಿ ಭಾರತ ದೇಶದಲ್ಲಿ ಜಾರಿಗೆ ಬಂದಿತು. ಆರ್‌ಟಿಇ ೨೦೦೯ ಇದು ಕೇವಲ ೬ ರಿಂದ ೧೪ ವಯಸ್ಸಿನ ಮಕ್ಕಳಿಗೆ ಮಾತ್ರ ಶಿಕ್ಷಣ ಮೂಲಭೂತ ಹಕ್ಕು ಎಂದು ಹೇಳುತ್ತಾ ೦-೬ರ ವರೆಗಿನ ಮಕ್ಕಳ ಬಗ್ಗೆ ಏನನ್ನೂ ಹೇಳದೆ ಶಿಕ್ಷಣ ಸಾರ್ವತ್ರೀಕರಣದ ಮೂಲ ಆಶಯಗಳನ್ನು ನಿರ್ಲಕ್ಷಿಸಿತು.

ಗೋಖಲೆಯವರು ಅಂದು ಉಚಿತ ಮತ್ತು ಕಡ್ಡಾಯ ಶಿಕ್ಷಣ ಮಸೂದೆಯನ್ನು ಮಂಡಿಸಿದಾಗ ವಿರೋಧಿಸಿದ ಶ್ರೀಮಂತ ವರ್ಗ, ಅದೇ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಇಂದು ಮಾರುಕಟ್ಟೆಯ ವಸ್ತುವಾಗಿ ಮಾರಾಟ ಮಾಡುವ ತಂತ್ರಗಳಾಗಿ ಬಳಸುತ್ತಿದ್ದಾರೆ. ಬಂಡವಾಳಶಾಹಿಗಳು ಬಹುರಾಷ್ಟ್ರೀಯ ಕಂಪನಿಗಳು ಇದೇ ಅವಕಾಶವೆಂದು ಶಿಕ್ಷಣವನ್ನು ಒಂದು ಉದ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಶಿಕ್ಷಣದ ಸಾರ್ವತ್ರೀಕರಣದ ಪ್ರಯತ್ನದಲ್ಲಿ ಎಷ್ಟೇ ಕಾನೂನು, ಕಾಯಿದೆ, ಮಸೂದೆಗಳು ಬಂದರೂ ಏನೂ ಪ್ರಯೋಜನವಾಗದು. ಸಮುದಾಯದ ಮನೋಭಾವ, ಪ್ರಗತಿಪರವಾದ ಆಲೋಚನೆಗಳು ಹಾಗೂ ರಾಜಕೀಯ ಇಚ್ಛಾಶಕ್ತಿ ಒಗ್ಗೂಡಿದಾಗ ಮಾತ್ರ ಇದು ಸಾಧ್ಯ.

ನವ ಉದಾರವಾದ ತನ್ನ ಬಾಹುಗಳಲ್ಲಿ ಇಡೀ ಜಗತ್ತನ್ನು ಬಂಧಿಸುತ್ತಿರುವ ಯುಗದಲ್ಲಿ ನಾವೆಲ್ಲ ಬದುಕುತ್ತಿದ್ದೇವೆ. ನೇರವಾಗಿ ಅಥವಾ ಪರೋಕ್ಷವಾಗಿ ಭಾರತದಂತಹ ತೃತೀಯ ಜಗತ್ತಿನ ರಾಷ್ಟ್ರಗಳು ದೊಡ್ಡ ಬಂಡವಳಿಗ ದೇಶಗಳಿಗೆ ಮತ್ತೆ ವಸಾಹತುಗಳಾಗುತ್ತಿರುವ ಈ ಸಂದರ್ಭದಲ್ಲಿ ಜನರು ನೆಲ ಜಲದ ಮೇಲಿನ ತಮ್ಮ ಹಕ್ಕಿಗಾಗಿ, ಬದುಕುವ ಹಕ್ಕಿಗಾಗಿ ಅಷ್ಟೇ ಏಕೆ ಶಿಕ್ಷಣ, ಆರೋಗ್ಯದಂತಹ ಮೂಲಭೂತ ಅಗತ್ಯಗಳಿಗಾಗಿಯೂ ಹೋರಾಡಲೇಬೇಕಾದ ಅನಿವಾರ್ಯತೆ ಇಂದು ಒದಗಿದೆ. ಈ ಹಿನ್ನೆಲೆಯಲ್ಲಿ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಮಾಡುವ ಪ್ರತೀ ಪ್ರಯತ್ನವೂ ಇಡೀ ದೇಶದ ಜನ ಸಮುದಾಯವನ್ನು ಒಗ್ಗೂಡಿಸುವ ಅವರ ಪ್ರಜ್ಞೆಯನ್ನು ಮುಂದಕ್ಕೊಯ್ಯುವ ಸಾಧನವೇ ಆಗಿರುತ್ತದೆ ಅಂದರೆ ಇಡೀ ಸಮಾಜದ ಪ್ರಜಾತಾಂತ್ರೀಕರಣದ ಪ್ರಯತ್ನದ ಒಂದು ಮುಖ್ಯ ಹೆಜ್ಜೆ ಇದಾಗಿದೆ.

**ಸದಾನಂದ**
'ಶ್ರೀ ವಿಜಯಶ್ರೀ' ಮಾರ್ಕೋಡು, ಕೋಟೇಶ್ವರ ಅಂಚೆ-೫೭೬ ೨೨೨
ಕುಂದಾಪುರ, ಉಡುಪಿ ಜಿಲ್ಲೆ
email : sadabyndoor@gmail.com



ಕುವೆಂಪು ಅವರಿಗೆ ಬ್ರಾಹ್ಮಣ ಮತ್ತು ಶೂದ್ರ ಎಂಬ ಎರಡು ವಿರುದ್ಧ ಅಂಚುಗಳ ಸಮುದಾಯಗಳು ಎದುರಿಗಿವೆ. ಶೂದ್ರಸಮುದಾಯವು ಬೆವರನ್ನು ಹರಿಸಿ, ಚರಿತ್ರೆಯನ್ನು ಕಟ್ಟಿದ್ದರೂ ಅವರಿಗೆ ಸೂಕ್ತ ಸ್ಥಾನಮಾನ ಸಿಕ್ಕಿಲ್ಲ ಎಂಬ ಸಾತ್ವಿಕ ಸಿಟ್ಟು ಇವರಿಗಿದೆ. ಆದರೆ ದಲಿತ – ಬಂಡಾಯದವರಿಗೆ ಈ ವರ್ಣ ಕಲ್ಪನೆಗಿಂತ ಮಿಗಿಲಾಗಿ ವರ್ಗಪ್ರಜ್ಞೆ ಕಾಡಿದೆ. ಅತ್ಯಂತ ಕೆಳಸ್ತರದ ಜನ ಚರಿತ್ರೆಯನ್ನು ಕಟ್ಟಿದ್ದಾರೆ. ಆದರೆ ಅದರ ಬಹುತೇಕ ಫಲಿತವನ್ನು ಭೋಗಿಸಿದವರು ಯಾವುದೇ ಜಾತಿಗಳ ಮೇಲ್ವರ್ಗದ ಜನರೇ ಆಗಿದ್ದಾರೆ ಎಂಬುದು ಕಾಣುತ್ತದೆ. ಈ ನೆಲೆಯಲ್ಲಿ ಹಸಿವಿನಿಂದ ಸತ್ತೋರು ಎಂದು ಮೊದಲಾಗುವ ಸಿದ್ಧಲಿಂಗಯ್ಯನವರ ಹಾಗೂ ರಂಜಾನ್ ದರ್ಗಾ ಅವರ ಕವಿತೆಗಳನ್ನು ಗಮನಿಸಬೇಕು.

# ಕುವೆಂಪು ಕಾವ್ಯ ಮತ್ತು ದಲಿತ–ಬಂಡಾಯ ಕಾವ್ಯ

ಕುವೆಂಪು ಕಾವ್ಯಕ್ಕೂ ದಲಿತ–ಬಂಡಾಯ ಕಾವ್ಯಕ್ಕೂ ಅನೇಕ ನೆಲೆಗಳಲ್ಲಿ ಸಾಮ್ಯತೆಯಿದೆ. ಅವುಗಳಲ್ಲಿ ಮುಖ್ಯವಾದುದು ವೈಚಾರಿಕತೆ. ಇದನ್ನು ಇನ್ನೂ ಒಂದು ಮಾತಿನಲ್ಲಿ ಹೇಳುವುದಾದರೆ ದಲಿತ–ಬಂಡಾಯದವರಿಗೆ ಹೆಚ್ಚು ಹತ್ತಿರದ ನವೋದಯ ಕವಿ ಕುವೆಂಪು ಮಾತ್ರ. ಹೀಗೆ ಕುವೆಂಪು ಮತ್ತು ದಲಿತ–ಬಂಡಾಯದ ಲೇಖಕರ ಚಿಂತನೆಗಳ ನಡುವೆ ಸಾಮ್ಯತೆಯಿದೆ. ಇದು ಪ್ರಧಾನ ನೆಲೆ. ಇದೇ ಆತ್ಯಂತಿಕ ನೆಲೆಯೂ ಅಲ್ಲ.

ಕುವೆಂಪು ಅವರು ಶೂದ್ರತ್ವದ ಹಿನ್ನೆಲೆಯಲ್ಲಿ ಬಂದವರು. ಅಂತೆಯೇ ದಲಿತ–ಬಂಡಾಯದವರು ಸಹ ಪ್ರಧಾನವಾಗಿ ಇದನ್ನೂ ಒಳಗೊಂಡು ದಲಿತ, ಸ್ತ್ರೀ ಮುಂತಾದ ಇನ್ನೂ ಅನೇಕ ಶೋಷಿತ ನೆಲೆಗಳಿಂದ ಬಂದವರು. ಹಾಗಾಗಿಯೇ ಇಬ್ಬರೂ ಸಹಜವಾಗಿ ತಮ್ಮ ಸಮುದಾಯವನ್ನು ಶೋಷಿಸುತ್ತ ಬಂದ ಶತ್ರುವನ್ನು ಕುರಿತು ಮಾತನಾಡಬೇಕಾಗುತ್ತದೆ. ಅಂತಹ ಮಾತುಗಳು ಸಹಜವಾಗಿಯೇ ಚಾರಿತ್ರಿಕ ಪ್ರಜ್ಞೆಯನ್ನು ಇಟ್ಟುಕೊಂಡು ಸಾತ್ವಿಕ ಸಿಟ್ಟನ್ನು ಪ್ರಕಟಪಡಿಸುವಂಥವೇ ಆಗಿರುತ್ತವೆ. ಇವರಿಗೆ ಕಲೆ ಎಂಬುದು ಮುಖ್ಯವಾಗಿ ಸಾಮಾಜಿಕ ವ್ಯಾಪಾರವಾಗಿರುತ್ತದೆಯೇ ವಿನಾ ಲೋಲುಪತೆಯ ವ್ಯಾಪಾರವಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ 'ಗೊಬ್ಬರ' ಕವಿತೆಯನ್ನು ಜಂಬಣ್ಣ ಅಮರಚಿಂತ ಅವರ ಈ ಕೆಳಗಿನ ಪದ್ಯದೊಂದಿಗೆ ಇಟ್ಟು ನೋಡಬಹುದಾಗಿದೆ.

*ಕವಿತೆ ಅಂದರೆ –*
*ಜಾಡಮಾಲಿಯ ಪೊರಕೆಯ ಹಾಗೆ*
*ಬಟ್ಟೆಯೊಗೆಯುವ ಅಗಸ್ಯನ ಹಾಗೆ*
*ಕುಂಬಾರ ಗುಂಡಪ್ಪನ ತಿಗುರಿಯ ಹಾಗೆ*
*ಹೊಲೇರ ಮೂಕಪ್ಪನ ಡಪ್ಪಿಯ ಹಾಗೆ*
*ಕೊರವರ ಕುರಿಮ್ಯಾನ ಬಿಜಲಿಯ ಹಾಗೆ...*

ಇಲ್ಲಿ ಕುವೆಂಪು ಕವಿತೆಯ ಹಾಗೂ ದಲಿತ–ಬಂಡಾಯ ಕಾವ್ಯದ ಮುಖ್ಯ ಆಶಯ ದೊರಕಿಬಿಡುತ್ತದೆ. ಕಾವ್ಯಾತ್ಮಕತೆಯೊಡನೆ ಕೆಲವೊಮ್ಮೆ ರಾಜಿಯೆನಿಸಿದರೂ ಚಿಂತನಾತ್ಮಕತೆ ಅಥವಾ ತಾವು ಒಪ್ಪಿದ ವೈಚಾರಿಕತೆಯೊಂದಿಗೆ ಎಂದಿಗೂ ರಾಜಿಯಿಲ್ಲ ಎಂಬ ನಡೆ ಇವರಿಬ್ಬರ ಕಾವ್ಯಸಮುದಾಯದಲ್ಲಿ ಕಾಣುತ್ತದೆ. ಅದನ್ನು ಕುವೆಂಪುರವರೆ ಒಂದೆಡೆ ಪದ್ಯವನ್ನಾಗಿ ಸಹ ಮಾಡುತ್ತಾರೆ.

*ನನ್ನ ಕೃತಿ ಕಲೆಯಲ್ಲ*
*ನಾನು ಕವಿಯಲ್ಲ*
*ಕಲೆಗಾಗಿ ಕಲೆಯೆಂಬ*
*ಹೊಳ್ಳು ನೆಲೆಯಿಲ್ಲ*
..............................
*ಮೆಚ್ಚುಗೆಯೆ ನನಗೆ ಕೊಲೆ*
*ಬದುಕುವುದೆ ನನಗೆ ಬೆಲೆ*
*ಸಾಧನೆಯ ಛಾಯೆ ಕಲೆ*
*ವಿಶ್ವಾತ್ಮವದಕೆ ನೆಲೆ*
*ನಿನಗದು ಚಮತ್ಕಾರ*
*ನನಗೋ ಸಾಕ್ಷಾತ್ಕಾರ*
*ಮೌನದಿಂದನುಭವಿಸು*
*ಕೋ ನಮಸ್ಕಾರ*
*ಕಲೆಯೆಂದು ಹೊಗಳುವೊಡೆ*
*ಕೋಟಿ ಧಿಕ್ಕಾರ*

ಈ ನೆಲೆಯಲ್ಲಿ ಚಿಂತಿಸಿದ ಕವಿ ಅದನ್ನು ತಮ್ಮ ಬಹುಪಾಲು ಸಾಹಿತ್ಯ ಕೃತಿಗಳಲ್ಲಿ ಸಾಕ್ಷಾತ್ಕರಿಸಿದ್ದಾರೆ.

ವಾಸ್ತವವಾಗಿ ನವೋದಯದ ಚಿಂತನೆ ಗಿಡ–ಮರದ ಹಸಿರು, ಚಿಗುರು, ಮೊಗ್ಗು, ಹೂವು, ಚೆಲುವಿಗೆ ಪ್ರಧಾನವಾಗಿ ಸಂಬಂಧಿಸಿದೆ. ಇದು ಸಾಂಕೇತಿಕ ಮಾತೂ ಹೌದು. ಆದರೆ ಅಂತಹ ಸಂದರ್ಭದಲ್ಲಿ ಇದ್ದ ಕುವೆಂಪುರವರು ಈ ಹೊರಫಲಿತಗಳಿಗೆ ಕಾರಣವಾದ ಅಥವಾ ಪೋಷಣೆ ನೀಡಿದ ಗೊಬ್ಬರದ ಬಗೆಗೆ ಚಿಂತಿಸಿದ್ದಾರೆ. ಇದು ಇವರ ಒಂದು ವಿಶಿಷ್ಟ ನೆಲೆ. ಇಲ್ಲಿ ಗೊಬ್ಬರ ಎಂಬುದು ಸಾಹಿತ್ಯ ಪ್ರತಿಮೆ. ಇದು ಬೆವರಿನ ಮೂಲಕ ಪರಂಪರೆಯನ್ನು ಕಟ್ಟಿ, ನಿರ್ಲಕ್ಷ್ಯಕ್ಕೆ ಒಳಗಾದ ಸಮುದಾಯವನ್ನು ಕುರಿತದ್ದಾಗಿದೆ. ಇಂತಹ ಪೋಷಕ ಶಕ್ತಿಗೆ ಸೃಜನಶೀಲ ವ್ಯಾಪಾರದಲ್ಲಿ, ಚರಿತ್ರೆಯ ಪುಟಗಳಲ್ಲಿ ನೆಲೆ ಇಲ್ಲ. ಇದು ಕವಿ ಪ್ರಜ್ಞೆ ಚಾರಿತ್ರಿಕ ನೆಲೆಯಲ್ಲಿ ಗ್ರಹಿಸಿದ್ದಾಗಿದೆ. ವರ್ತಮಾನದಲ್ಲಿ ಅದಕ್ಕೆ ಘನತೆಯನ್ನು ತರುವ ಛಲವನ್ನು ಹೊತ್ತಿದೆ. ಆದ್ದರಿಂದಲೇ ಗೊಬ್ಬರ ಎಂಬುದು ಕುವೆಂಪು ಮತ್ತು ದಲಿತ – ಬಂಡಾಯದವರ ಮುಖ್ಯ ಕವನ ಮತ್ತು ಆಶಯವಾಗಿ ಅನುರಣಿತವಾಗುವುದು.

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ

ಕುವೆಂಪು ಅವರಲ್ಲಿ ಗೊಬ್ಬರ ಎಂಬುದು ಶೂದ್ರ ಸಮುದಾಯಕ್ಕೆ ಒಡ್ಡಿದ ಪ್ರತಿಮೆಯಾಗಿ ಬಂದಿದೆ. ಆದರೆ ಇದೇ ಪ್ರತಿಮೆಯ ಭಾಗವಾಗಿ ದಲಿತ – ಬಂಡಾಯದವರಲ್ಲಿ ದಲಿತರು, ಸ್ತ್ರೀಯರು, ಬೆವರನ್ನು ಹರಿಸಿ ಬಡತನದ ಬಿಸಿಲಲ್ಲಿ ಬೆಂಡಾಗಿ ಹೋದ ಎಲ್ಲರೂ ಕಾಣುತ್ತಾರೆ. ಈ ನೆಲೆಯಲ್ಲಿ ಇವರಲ್ಲಿ ಇದು ವರ್ಗಪ್ರಜ್ಞೆಯಾಗಿ ಕಾಣುತ್ತದೆ. ಆದರೆ ಇದು ಕುವೆಂಪು ಅವರಲ್ಲಿ ವರ್ಣಪ್ರಜ್ಞೆಯಾಗಿ ಮಾತ್ರ ಕಾಣುತ್ತದೆ.

ಕುವೆಂಪು ಅವರಿಗೆ ಬ್ರಾಹ್ಮಣ ಮತ್ತು ಶೂದ್ರ ಎಂಬ ಎರಡು ವಿರುದ್ಧ ಅಂಚುಗಳ ಸಮುದಾಯಗಳು ಎದುರಿಗಿವೆ. ಶೂದ್ರಸಮುದಾಯವು ಬೆವರನ್ನು ಹರಿಸಿ, ಚರಿತ್ರೆಯನ್ನು ಕಟ್ಟಿದ್ದರೂ ಅವರಿಗೆ ಸೂಕ್ತ ಸ್ಥಾನಮಾನ ಸಿಕ್ಕಿಲ್ಲ ಎಂಬ ಸಾತ್ವಿಕ ಸಿಟ್ಟು ಇವರಿಗಿದೆ. ಆದರೆ ದಲಿತ – ಬಂಡಾಯದವರಿಗೆ ಈ ವರ್ಣ ಕಲ್ಪನೆಗಿಂತ ಮಿಗಿಲಾಗಿ ವರ್ಗಪ್ರಜ್ಞೆ ಕಾಡಿದೆ. ಅತ್ಯಂತ ಕೆಳಸ್ತರದ ಜನ ಚರಿತ್ರೆಯನ್ನು ಕಟ್ಟಿದ್ದಾರೆ. ಆದರೆ ಅದರ ಬಹುತೇಕ ಫಲಿತವನ್ನು ಭೋಗಿಸಿದವರು ಯಾವುದೇ ಜಾತಿಗಳ ಮೇಲ್ವರ್ಗದ ಜನರೇ ಆಗಿದ್ದಾರೆ ಎಂಬುದು ಕಾಣುತ್ತದೆ. ಈ ನೆಲೆಯಲ್ಲಿ ಹಸಿವಿನಿಂದ ಸತ್ತೋರು ಎಂದು ಮೊದಲಾಗುವ ಸಿದ್ಧಲಿಂಗಯ್ಯನವರ ಹಾಗೂ ರಂಜಾನ್ ದರ್ಗಾ ಅವರ ಕವಿತೆಗಳನ್ನು ಗಮನಿಸಬೇಕು.

ಹೀಗೆ ಕುವೆಂಪು ಅವರಲ್ಲಿ ಸಾಮಾಜಿಕ ಸಂಘರ್ಷದ ಭಾಗವಾಗಿ ವರ್ಣಪ್ರಜ್ಞೆ ಹೆಚ್ಚು ಕಾಡಿದರೆ ದಲಿತ – ಬಂಡಾಯದವರಿಗೆ ವರ್ಗ ಮತ್ತು ಜಾತಿಪ್ರಜ್ಞೆ ಹೆಚ್ಚು

ಕಾಡುತ್ತದೆ. ಇಲ್ಲಿ 'ಹೆಚ್ಚು' ಎಂಬ ಪದವು ಇದೇ ಸಂಗತಿಗಳು ಇವರಿಗೆ ಹೊರತಾದವರಲ್ಲಿಯೂ ಇವೆ ಎಂಬುದು ಸ್ಪಷ್ಟ.

ಒಟ್ಟಾರೆ ಸಾಮಾಜಿಕ ಸಂಘರ್ಷ ಎಂಬುದು ಕುವೆಂಪು ಮತ್ತು ದಲಿತ-ಬಂಡಾಯದವರಲ್ಲಿ ಅತ್ಯಂತ ಪ್ರಧಾನ ನೆಲೆಯಾಗಿದೆ. ನವೋದಯದಲ್ಲಿ ಮೂಡಿದ ಕವಿಗೆ ಇದು ಹೇಗೆ ಸಾಧ್ಯವಾಯಿತು ಎಂಬುದು ಕುತೂಹಲಕರ ಪ್ರಶ್ನೆ. ಇವರ ಸಮಕಾಲೀನರಾದ ಬರಹಗಾರರನ್ನು ಅಷ್ಟಾಗಿ ಕಾಡಿಸದ ಈ ನೆಲೆ ಇವರಿಗೆ ಹೇಗೆ ಪ್ರಧಾನವಾಯಿತು ಎಂಬುದು ಈ ಪ್ರಶ್ನೆಯ ಸಾರ. ಇನ್ನೂ ದಲಿತ - ಬಂಡಾಯದವರಿಗಂತೂ ಇದು ಸಹಜವಾದುದೇ ಸರಿ. ಆದ್ದರಿಂದ ಕುವೆಂಪು ಸಂದರ್ಭದ ಹಿನ್ನೆಲೆಯಲ್ಲಿ ಈ ಪ್ರಶ್ನೆಯನ್ನು ಸ್ವಲ್ಪ ವಿವರಿಸಿಕೊಳ್ಳಬೇಕಿದೆ.

ಕುವೆಂಪು ಅವರು ಸಾಮಾಜಿಕ ಶ್ರೇಣೀಕರಣದ ವ್ಯವಸ್ಥೆಯಲ್ಲಿ ತೀರಾ ಅಧೋಜಗತ್ತು ಅಲ್ಲದಿದ್ದರೂ ಕೆಳಸ್ತರದಿಂದಲೇ ಬಂದವರು. ಓದು ಮತ್ತು ಅನುಭವದಿಂದ ಅರಿವನ್ನು ವಿಸ್ತರಿಸಿಕೊಂಡವರು. ಹಾಗಾಗಿ ಸಾಮಾಜಿಕ ವಿವೇಕ ಮತ್ತು ಪ್ರಜ್ಞೆಯೆಂಬುದು ಸಹಜವಾಗಿಯೇ ಅಲ್ಲಿ ಗರಿಗೆದರುತ್ತದೆ. ಅದರ ದಮನ ಸಾಧ್ಯವಿಲ್ಲ. ಎಷ್ಟೇ ಸವಾಲುಗಳು ಬಂದರೂ ಕಲ್ಲು ಚಪ್ಪಡಿಗೆ ಸಿಕ್ಕಿದ ಗರುಕೆ ಹುಲ್ಲು ಅದರ ಪಕ್ಕದಿಂದ ತಲೆಯೆತ್ತಿ ನಿಲ್ಲುವ ಹಾಗೆ ಆ ಪ್ರಜ್ಞೆ ಹೊರಚೆಲ್ಲಿ ಬರುತ್ತದೆ. ಹೀಗೆ ಸಾಮಾಜಿಕ ಪ್ರಜ್ಞೆಯನ್ನು ಇಟ್ಟುಕೊಂಡಿದ್ದ ಕವಿ ತನ್ನ ಕಾಲದ ಸಾಮಾಜಿಕ ಜಗತ್ತನ್ನು ಗ್ರಹಿಸಿದ್ದಾರೆ ಮತ್ತು ಅದಕ್ಕೆ ಪ್ರತಿಕ್ರಿಯಿಸಿದ್ದಾರೆ. ಅಲ್ಲದೇ ಈ ಬಗೆಯ ಸಾಮಾಜಿಕ ಕಳಕಳಿ ಇರುವವರಿಗೆ ರಾಜ್ಯ, ಭಾಷೆ, ದೇಶ ಮುಂತಾದ ಯಾವುದೇ ರಾಜಕೀಯ ಮತ್ತು ಸಾಂಸ್ಕೃತಿಕ ಗಡಿಗಳು ಬೇಲಿಗಳಾಗುವುದಿಲ್ಲ. ಅವುಗಳಾಚೆಗೆ ಪ್ರಜ್ಞೆ ಬೆಳೆದು ನಿಲ್ಲುತ್ತದೆ. ಅದು ವಾಸ್ತವವಾಗಿ ಅಂತರರಾಷ್ಟ್ರೀಯ ಪ್ರಜ್ಞೆ. ಅಂಥಲ್ಲಿ ಲೆನಿನ್, ಸಾಕ್ರೆಟಿಸ್, ಬುದ್ಧ, ಸ್ಟಾಲಿನ್, ಗಾಂಧಿ, ಅಂಬೇಡ್ಕರ್ ಮುಂತಾದವರು ಕುವೆಂಪು ಅವರಲ್ಲಿಯೇ ಅಲ್ಲದೆ ದಲಿತ - ಬಂಡಾಯದವರಲ್ಲಿ ಆಪ್ತವಾಗಿ ಒಡಮೂಡುತ್ತಾರೆ.

ಕುವೆಂಪು ಕವಿತೆಗಳ ಸಾಮಾಜಿಕ ನೆಲೆ ಎಂದಾಗ ಅದು ನವೋದಯದ ಇತರ ಬರಹಗಾರರಲ್ಲಿ ಇರಲಿಲ್ಲವೆಂದಲ್ಲ; ಅದು ಇತ್ತು. ಆದರೆ ಅದು ಸಾಮಾಜಿಕ ಕಳಕಳಿ ಎಂಬ ನೆಲೆಯಲ್ಲಿ. ಆದರೆ ಅದು ಕುವೆಂಪುರವರಿಗೆ ಸಾಮಾಜಿಕ ಪ್ರಜ್ಞೆಯಾಗಿ ಇದ್ದದ್ದು. ಈ ಸಾಮಾಜಿಕ ಪ್ರಜ್ಞೆ ಇರುವಾತನಿಗೆ ವಿವಿಧ ಸಾಮಾಜಿಕ ನೆಲೆಗಳ ಆಳವಾದ ಅರಿವು ಇರುತ್ತದೆ. ಅದು ಕೇವಲ ಅನುಕಂಪೆ, ಸಹಾನುಭೂತಿ ಮುಂತಾದ ನೆಲೆಗಳಲ್ಲಿ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಕುವೆಂಪುರವರ ಸಾಮಾಜಿಕ ಪ್ರಜ್ಞೆ ಕೆಲಸ ಮಾಡಿದೆ. ಹಾಗಾಗಿಯೇ ಇವರ ಎದುರು ಪುರೋಹಿತಶಾಹಿ ನಗ್ನವಾದದ್ದು. ಅದರ ಹುನ್ನಾರಗಳು ಬೆತ್ತಲಾದದ್ದು. ಈ ಕೆಲಸವನ್ನು ಕುವೆಂಪುರವರು ಕಾವ್ಯೇತರ ಪ್ರಕಾರಗಳಲ್ಲಿಯೂ ಹರಿತವಾಗಿಯೇ ಮಾಡಿದ್ದಾರೆ.

ಹೀಗೆ ಗಾಢ ಸಾಮಾಜಿಕ ಪ್ರಜ್ಞೆಯನ್ನು ಹೊಂದಿದ್ದ ಕುವೆಂಪು ತಮಗಿಂತ ಕೆಳಸ್ತರದ ಜನರು ಇದೇ ಶತ್ರುವನ್ನು ಗುರುತಿಸಿಕೊಂಡಾಗ ಸಹಜವಾಗಿಯೇ ಹೆಚ್ಚು ನಿಕಟರಾಗುತ್ತಾರೆ.

ಈಗಾಗಲೇ ಪ್ರಸ್ತಾಪಿಸಿದಂತೆ ಕುವೆಂಪುರವರು ಭಾರತದ ನವೋದಯದ ಸಂದರ್ಭದಲ್ಲಿ ಸಾಹಿತ್ಯ ರಚನೆಯನ್ನು ಆರಂಭಿಸಿದವರು. ಇಲ್ಲಿ ಹೆಚ್ಚೆಂದರೆ ಮಾನವತಾವಾದಿಯ ಸಾಮಾಜಿಕ ನೆಲೆಗೆ ಸಂಬಂಧಿಸಿ ಇತ್ತು. ಇದನ್ನು ಮೀರಿ ಬೆಳೆದ, ಬರೆದ ಕುವೆಂಪು ಅವರಿಗೆ ಹಿನ್ನೆಲೆಯಾಗಿ ಎರಡು ಕಾರಣಗಳು ಇದ್ದಿರಬಹುದೆಂದು ಭಾವಿಸಿದ್ದೇನೆ. ಒಂದು - ಡಾ॥ ಬೈರಮಂಗಲ ರಾಮೇಗೌಡ ಅವರು ತಮ್ಮ 'ರಸಸಿದ್ಧಿ' ಕೃತಿಯಲ್ಲಿ ಪು. ೧೦೪ರಲ್ಲಿ ಹೇಳುವಂತೆ "ಸಾಮಾಜಿಕ ಪ್ರಜ್ಞೆಯಿಂದ ಜಾಗೃತನಾಗಿರುವ ಸಂವೇದನಾಶೀಲನಾದ ಕವಿಯ ಸೂಕ್ಷ್ಮ ದೃಷ್ಟಿಯಿಂದ ಯಾವ ಸಾಮಾಜಿಕ ಸಮಸ್ಯೆಯೂ ತಪ್ಪಿಸಿಕೊಳ್ಳಲಾರದು. ಹಾಗಾಗಿ ಇವರಿಗೆ ತಮ್ಮ ಸಾಮಾಜಿಕ ಜಗತ್ತಿನ ಹಾಗೂ ಇಂತಹುದೇ ಸಾಮಾಜಿಕ, ರಾಜಕೀಯ ಸವಾಲುಗಳನ್ನು ಎದುರಿಸುತ್ತಿದ್ದ ಯಾವುದೇ ಜಾಗತಿಕ ಸನ್ನಿವೇಶವು ತಮ್ಮದೇ ಆಗುತ್ತದೆ. ಅಂತಹ ವಿಶ್ವಾತ್ಮಕ ಪ್ರಜ್ಞೆ ಇವರಲ್ಲಿದೆ." ಇದು ಒಂದು ಕಾರಣ. ಇನ್ನೊಂದು - ಕುವೆಂಪುರವರು ಸಾಮಾಜಿಕ ಚಲನ - ವಲನಗಳ ಬಗೆಗೆ ಹೆಚ್ಚು ಜಾಗೃತರಾಗಿದ್ದ ಕಾರಣ ತಮ್ಮ ವಯಸ್ಸು ಪ್ರಯಾಣಿಸುತ್ತ, ಸಂಧಿಸಿದ ೩೦-೪೦ರ ದಶಕದ ರಷ್ಯನ್ ಸಾಹಿತ್ಯ, ಮಾರ್ಕ್ಸ್‌ವಾದ, ಭಾರತದ ಪ್ರಗತಿಶೀಲ ಮುಂತಾದ ನೆಲೆಗಳು ಕಾಡಿವೆ. ಇದರ ಪ್ರಭಾವದಲ್ಲಿಯೇ ಈ ಕಾಲಘಟ್ಟದಲ್ಲಿ ಗೊಬ್ಬರ, ಕಲ್ಕಿ, ಯಾವ ಕಾಲದ ಶಾಸ್ತ್ರವೇನು ಹೇಳಿದರೇನು? ನೂರು ದೇವರನ್ನೆಲ್ಲ ನೂಕಾಚೆ ದೂರ - ಮುಂತಾದ ಕವನಗಳನ್ನು ಒಳಗೊಂಡ "ಕೋಗಿಲೆ ಮತ್ತು ಸೋವಿಯತ್ ರಷ್ಯಾ" ಸಂಕಲನವನ್ನು ಬರೆಯಲು ಸಾಧ್ಯವಾದದ್ದು. ಈ ನೆಲೆಯಲ್ಲಿ ಕುವೆಂಪುರವರ ನವೋದಯ ಕಾವ್ಯ ಪ್ರಗತಿಶೀಲ ಆಯಾಮವನ್ನು ಪಡೆಯುತ್ತದೆ. ಹಾಗೆಂದು ಇವರು ಈ ಸಿದ್ಧಾಂತದ ಭಾಗವಾದ ಸಮತಾವಾದಿ ಪ್ರಭುತ್ವಕ್ಕೆ ತಮ್ಮ ಮನಸ್ಸನ್ನು ತೆರಲಿಲ್ಲ. ಇಲ್ಲಿ ಅವರು ಪ್ರಜಾಪ್ರಭುತ್ವವಾದಿ ರಾಷ್ಟ್ರವ್ಯವಸ್ಥೆಯನ್ನೇ ಒಪ್ಪುತ್ತಾರೆ. ಇಲ್ಲಿಯೇ ಇವರು ಪ್ರಗತಿಶೀಲರಿಗಿಂತ ಭಿನ್ನವಾದುದು.

ಏನೇ ಆದರೂ ತಮ್ಮ ಜೀವಮಾನದ ಪ್ರಗತಿಶೀಲ ನಿಲುಗಡೆಯಲ್ಲಿ ಸ್ವಲ್ಪ ಕಾಲ ತಂಗಿ ಇವರು ಮುಂದಕ್ಕೆ ಹೋಗಿದ್ದಾರೆ. ದಲಿತ - ಬಂಡಾಯ ಸಾಹಿತ್ಯದ ಮುಖ್ಯ ನೆಲೆಗಳಲ್ಲಿ ಸಮತಾವಾದವೂ ಒಂದಾಗಿದೆ. ಸಿದ್ದಲಿಂಗಯ್ಯ, ಬರಗೂರು, ರಂಜಾನ್ ದರ್ಗಾ, ಸಿದ್ಧನಗೌಡ ಪಾಟೀಲ ಮುಂತಾದವರ ಹಲವು ಕವಿತೆಗಳು ಇಲ್ಲಿ ಮಾತಾಡುತ್ತವೆ. ಈ ನೆಲೆಯಲ್ಲಿ ಕುವೆಂಪುರವರ ಕಲ್ಕಿ, ಹೊಸಬಾಳಿನ ಗೀತೆ ಮುಂತಾದ ಕವಿತೆಗಳೊಡನೆ ಸಿದ್ಧಲಿಂಗಯ್ಯನವರ ಸಾವಿರಾರು ನದಿಗಳು, ದಲಿತರು ಬರುವರು ದಾರಿಬಿಡಿ, ನಲ್ಲೂರು ಪ್ರಸಾದ್ ಅವರ ಸಂಭವಾಮಿ ಮುಂತಾದ ಕವಿತೆಗಳನ್ನು ಇಟ್ಟು ನೋಡಬಹುದಾಗಿದೆ.

ಇಲ್ಲಿ ಕುವೆಂಪುರವರು ಪ್ರಭುತ್ವದ ನೆಲೆಯಿಂದಾಚೆಗಿನ ಜನತೆಯ ನೆಲೆಯಲ್ಲಿ ನಿಂತು ಚರಿತ್ರೆಯನ್ನು ನೋಡಿ ಅದನ್ನು ಕಂಡರಿಸುತ್ತಾರೆ. ಇಲ್ಲಿ ಜನತೆಯ ಚರಿತ್ರೆ ಅನಾವರಣಗೊಳ್ಳುತ್ತದೆ. ಸಂಭ್ರಮದ ಇನಿದನಿಗಳಿಗೆದುರಾಗಿ ಸಂಕಟದ ಧ್ವನಿಗಳು ಇಲ್ಲಿ ಕೇಳಿಬರುತ್ತವೆ. ಇದು ಜನತೆಯ ಚರಿತ್ರೆಯೂ ಹೌದು ಮತ್ತು ಜನರಿಗೆ ಕಂಡ ಚರಿತ್ರೆಯೂ ಹೌದು. ಇದು ಭಾರತದ ಅಷ್ಟೇ ಏಕೆ ಮನುಕುಲದ ಚರಿತ್ರೆಯ ದೊಡ್ಡ ಭಾಗ. ಇದಕ್ಕಿಂತ ಭಿನ್ನ ಚರಿತ್ರೆ ಇದ್ದರೆ ಅದು ಬೂರ್ಷ್ವಾ ಅಥವಾ ಪ್ರತಿಷ್ಠಿತ ಜನವರ್ಗದ ಚರಿತ್ರೆ ಮಾತ್ರ. ಈ ನೆಲೆಯಲ್ಲಿ ಸಮಕಾಲೀನ ಸಂದರ್ಭದ ಚರಿತ್ರೆಯ ಪಾಠಗಳನ್ನು ಅದರ ಕೃತಿಗಳ ಹುನ್ನಾರಗಳನ್ನು ಮರ್ಮಾಘಾತುಕವಾಗಿ ಬಯಲಿಗೆಳೆಯುತ್ತಾರೆ. ಈ ನೆಲೆಯಲ್ಲಿ ಕುವೆಂಪುರವರ ರೈತನ ದೃಷ್ಟಿ, ಕ್ರಾಂತಿಕಾಳಿ, ಅವತಾರ, ಮಾದಿಗರ ಹುಡುಗಿ; ಇಂದೂಧರ ಹೊನ್ನಾಪುರ ಅವರ ಕಪ್ಪು ಜನರ ಇಂಡಿಯವ್ವ ಮತ್ತು ದಲಿತ, ಜಂಬಣ್ಣ ಅಮರಚಿಂತ ಅವರ ಪೆಟ್ರೋಮ್ಯಾಕ್ಸ್ ಹೊತ್ತ ಕೊರವರು, ಆರ್. ವಿ. ಭಂಡಾರಿ ಅವರ ಇತಿಹಾಸ, ಕೆ. ಎಸ್. ನಿಸಾರ್ ಅಹಮದ್ ಅವರ ಹೆಣಗಳೆದ್ದು ಹಾಡಿದವು - ಮುಂತಾದ ನೂರಾರು ಕವಿತೆಗಳು ಮಾತಾಡುತ್ತವೆ. ಇಲ್ಲಿ ಅನಾವರಣವಾಗುವ ಚರಿತ್ರೆ ಶೋಷಿತ ಸಮುದಾಯಗಳ ಮೂಲದ್ದು. ಶೋಷಕರ ಚರಿತ್ರೆಯನ್ನೇ ಚರಿತ್ರೆ ಎನ್ನುತ್ತಿರುವವರಿಗೆ ಶೋಷಿತರ ಚರಿತ್ರೆ ಅನೇಕ ಒಳನೋಟಗಳೊಂದಿಗೆ ಇಲ್ಲಿ ಕಾಣುತ್ತದೆ. ಇಲ್ಲೆಲ್ಲಾ ಪರಂಪರೆಯ ಬಗ್ಗೆ ತೀವ್ರ ಪ್ರಜ್ಞೆ ಇದೆ. ಈ ಪ್ರಜ್ಞೆಯ ಸ್ಫೋಟದಲ್ಲಿ ಸಾತ್ವಿಕ ಸಿಟ್ಟಿದೆ. ಇಂತಹ ಚರಿತ್ರೆಯ ಅನಾವರಣದಲ್ಲಿ ವಿಷಾದವೂ ಮಡುಗಟ್ಟಿದೆ. ಇದರೊಂದಿಗೆ ಬದಲಾಗಬೇಕಾದ ಆಶಯವೂ ಅರಳುತ್ತಿದೆ.

ಕುವೆಂಪು ಮತ್ತು ದಲಿತ - ಬಂಡಾಯದವರು ಜನತೆಯ ನೆಲೆಯಲ್ಲಿ ನಿಂತು ಮಾತಾಡಿದರು. ಆದ್ದರಿಂದಲೇ ಪುರೋಹಿತಶಾಹಿ, ಊಳಿಗಮಾನ್ಯ ಶಕ್ತಿಗಳ ಆಪ್ತರಿಗೆ ಇವರು ಅಪಥ್ಯವಾದದ್ದು.

ಒಟ್ಟಾರೆ ಇವರಲ್ಲಿ ಜನಕೇಂದ್ರಿತ ಪ್ರಜ್ಞೆ, ಸಮಕಾಲೀನತೆ, ಸಾಮಾಜಿಕತೆ ಹರಳುಗಟ್ಟಿದೆ. ಆದ್ದರಿಂದಲೇ ಇವರ ಕವಿತೆ ಆಕಾಶ, ನಕ್ಷತ್ರ, ಹಸಿರು, ಹೊಳೆಯನ್ನು ಅರಸಿ ಊರಾಚೆಗೆ ಹರಿಯಲಿಲ್ಲ. ಬದಲಿಗೆ ಜನರ ಬದುಕಿನ ಸಮಕಾಲೀನ ನೆಲೆಗಳು ಅನಾವರಣಗೊಂಡದ್ದು. ಈ ನೆಲೆಯಲ್ಲಿ ಸಾಂಪ್ರದಾಯಿಕ ಸಂವೇದನೆಗೆ ಹೊರತಾದ ವಾಸ್ತವವಾದಿ ಪ್ರಜ್ಞೆ ಸಮಕಾಲೀನತೆಯಲ್ಲಿ ಅರಳುತ್ತದೆ. ಆದ್ದರಿಂದಲೇ ತತ್ವದ ಗಾಂಧಿ ಮತ್ತು ಆಡಂಬರಗಳ ಆಚರಣೋತ್ಸವಗಳ ಗಾಂಧಿಯ ನಡುವೆ ಅಲ್ಲಮಪ್ರಭು ಬೆಟ್ಟದೂರು ಅವರು 'ಗಾಂಧಿ' ಪದ್ಯ ಮುಖೇನ ವ್ಯತ್ಯಾಸವನ್ನು ಕಂಡದ್ದು. ಈ ನೆಲೆಯಲ್ಲಿ ಕೃಷ್ಣಮೂರ್ತಿ ಹಿಚಕಡ ಅವರ 'ಕೋಗಿಲೆ ಅಳುತ್ತಿದೆ', ಕೃಷ್ಣಮೂರ್ತಿ ಬಿಳಿಗೆರೆ ಅವರ 'ಪಂಜಾಬು', ಗವಿಸಿದ್ಧ ಎನ್. ಬಳ್ಳಾರಿ ಅವರ 'ಆಗಸ್ಟ್ ಹದಿನೈದರ ಹಾಡು', ಗುಡಿಹಳ್ಳಿ ನಾಗರಾಜ್ ಅವರ 'ಸಾವು', ಗುಜ್ಜನಡು ಅವರ 'ಸ್ವಾತಂತ್ರ್ಯೋತ್ಸವ', ಚಂಪಾ ಅವರ 'ಗಾಂಧಿ ಸ್ಮರಣೆ' ಮುಂತಾದ ಕವನಗಳು ಪ್ರಸ್ತುತವಾಗುವುದು.

ಇಲ್ಲೆಲ್ಲಾ ಕಾಣುವುದು ಸಮಾಜದ ಕಟ್ಟಕಡೆಯ ಮನುಷ್ಯ, ಅವನ ಸಂವೇದನೆ, ಅವನ ಆಶೋತ್ತರ,

ಅವನ ಕಾಣ್ಕೆ ಮತ್ತು ಗ್ರಹಿಕೆ ಇತ್ಯಾದಿ. ಇಂತಹ ಸಾಮಾನ್ಯ ಶ್ರೀಸಾಮಾನ್ಯನಾಗಬೇಕು. ಆಗಲೇ ಭಾರತದ ರಿಪಬ್ಲಿಕ್‌ಗೆ ಅರ್ಥ. ಇದರಡಿಯಲ್ಲಿ ಮಂತ್ರಿ, ಕುಂಬಾರ, ಅಧಿಕಾರಿ, ಚಮ್ಮಾರ ಎಲ್ಲರೂ ಒಂದೇ. ಯಾರ ಬೆನ್ನು ಬಾಗಬೇಕಿಲ್ಲ, ಅಂಬಾರಿ ಮೇಲೇರಬೇಕಿಲ್ಲ, ಪರಾಕು ಬೇಕಿಲ್ಲ. ಈ ನೆಲೆಯಲ್ಲಿ ಕುವೆಂಪು ಅವರ ಶ್ರೀಸಾಮಾನ್ಯನ ದೀಕ್ಷಾಗೀತೆಯನ್ನು ಲಕ್ಷಿಸಬೇಕು. ಅವರೇ ಇಲ್ಲಿ ಹೇಳುವಂತೆ ಇದು ಗರ್ವರ ಕಾಲವಲ್ಲ; ಸರ್ವರ ಕಾಲ.

ಶೋಷಿತರಿಗೆ ನಿಕಟ ಶತ್ರು ಆರ್ಥಿಕವಾಗಿ ಶೋಷಣೆ ಮಾಡುವವನೇ ಆಗುತ್ತಾನೆ. ಆನಂತರದಲ್ಲಿ ಇತರೆ ಶತ್ರುಗಳು ಪ್ರಸ್ತುತರಾಗುತ್ತಾರೆ. ಈ ನೆಲೆಯಲ್ಲಿ ದಲಿತರಿಗೆ ಮೊದಲ ಶತ್ರು ಜಮೀನ್ದಾರನೇ ಸರಿ. ಆದರೆ ಈ ವ್ಯವಸ್ಥೆಗೆ ತಸ್ಸೆಯನ್ನು ಹಾಕುತ್ತ ಬಂದ ಪುರೋಹಿತಶಾಹಿಯನ್ನು ನಿರ್ಲಕ್ಷಿಸಲು ಸಾಧ್ಯವಿಲ್ಲ. ಜೀತಗಾರರಿಗೆ ಪಡಿಯನ್ನು ನಿರಾಕರಿಸುವುದು ಕಾನೂರು ಹೆಗ್ಗಡಿತಿಯ ಒಂದು ಘಟನೆಯಾಗಿದೆ. ಇಲ್ಲಿ ಊಳಿಗಮಾನ್ಯ ಒಡೆಯ ಮತ್ತು ಪುರೋಹಿತಶಾಹಿ ವಕ್ತಾರ ಇಬ್ಬರೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಕ್ರಿಯಾಶೀಲವಾಗುತ್ತಾರೆ. ಆದ್ದರಿಂದ ಇದರ ದಮನಕ್ಕೆ ಗುರಿಯಾದವನು ಯಾವುದೇ ಸಾಮಾಜಿಕ ಸ್ತರದಲ್ಲಿ ಇದ್ದರೂ ಅಲ್ಲಿಂದಲೇ ತನ್ನ ಪ್ರತಿಭಟನೆಯನ್ನು ತೋರುತ್ತಾನೆ ಮತ್ತು ಅದರ ಹುನ್ನಾರವನ್ನು ಬಯಲಿಗೆಳೆಯಲು ಪ್ರಯತ್ನಿಸುತ್ತಾನೆ.

ಹೀಗೆ ಮುಖ್ಯವಾಗಿ ಪುರೋಹಿತಶಾಹಿಯ ಹುನ್ನಾರವನ್ನು ಬಯಲಿಗೆಳೆಯುವಲ್ಲಿ ಕುವೆಂಪುರವರು ವಿಶೇಷ ಉತ್ಸಾಹವನ್ನು ತೋರುತ್ತಾರೆ. ಇದು ಚಾರಿತ್ರಿಕ ಅನಿವಾರ್ಯವೇ ಆಗಿದೆ. ಈ ನೆಲೆಯಲ್ಲಿ ಯಾವ ಕಾಲದ ಶಾಸ್ತ್ರವೇನು ಹೇಳಿದರೇನು, ನೂರು ದೇವರನೆಲ್ಲ ನೂಕಾಚೆ ದೂರ, ಅವತಾರ, ಮಹದೇಶ್ವರನ ಬೆಟ್ಟಕಂತೆ, ಧ್ರಾಂ ಧ್ರೀಂ ಧ್ರೂಂ ಮುಂತಾದ ಕವಿತೆಗಳೊಡನೆ ನಾವು ಮಾತಾಡಬೇಕು. ಇದೇ ನೆಲೆಯಲ್ಲಿ ಸಂಸ್ಕೃತ ಭಾಷೆಯನ್ನು ಗುತ್ತಿಗೆ; ಅಲ್ಲಲ್ಲ ಪೇಟೆಂಟ್ ಪಡೆದವರು ಮಾಡಿದ ಭಾಷಿಕ ಮತ್ತು ಬೌದ್ಧಿಕ ಅನಾಚಾರಗಳನ್ನು ಲಕ್ಷಿಸಬೇಕಿದೆ. ಈ ತೆರೆಯನ್ನು ಸರಿಸಿ ಚರಿತ್ರೆಯನ್ನು ತೋರುವ ಕವಿತೆ ಅಲ್ಲಮಪ್ರಭು ಬೆಟ್ಟದೂರು ಅವರ 'ಸಂಸ್ಕೃತ' ಆಗಿದೆ.

ಇದೇ ಬಗೆಯಲ್ಲಿ ಸ್ತ್ರೀವಾದಿ ನೆಲೆಯಲ್ಲಿ ಕುವೆಂಪು ಅವರ 'ಊರ್ಮಿಳಾ', 'ಮನೆ ಮನೆಯ ತಪಸ್ವಿನಿಗೆ' ಪದ್ಯಗಳನ್ನು ಗಮನಿಸಬಹುದು. ಇದಕ್ಕೆ ಸಂವಾದಿ ನೆಲೆಯಲ್ಲಿ ಬಿ. ಟಿ. ಲಲಿತಾನಾಯಕ್, ಕಮಲಾ ಹಂಪನಾ, ಪ್ರತಿಭಾನಂದಕುಮಾರ್ ಮುಂತಾದವರ ಅನೇಕ ಪದ್ಯಗಳನ್ನು ನೋಡಬಹುದು.

ಈಗಾಗಲೇ ನಡೆದಿರುವ ಚರ್ಚೆಯಂತೆ ಕುವೆಂಪುರವರು ಉಳ್ಳವರ ಪರವಾದ ವ್ಯವಸ್ಥೆಯನ್ನು ಪೋಷಿಸುತ್ತಾ ಬಂದ ಯಥಾಸ್ಥಿತಿವಾದಕ್ಕೆ ಕೊಡಲಿ ಪೆಟ್ಟು ಹಾಕಿದವರು. ಈ ಯಥಾಸ್ಥಿತಿವಾದ ಪೋಷಕ ಶಕ್ತಿಗಳಾದ ದೈವ, ಧರ್ಮ, ದೇಗುಲ, ಮೌಢ್ಯ, ಜಾತಿ ಮುಂತಾದವುಗಳ ಎದುರಿನಲ್ಲಿ ಪಾಂಚಜನ್ಯ ಮೊಳಗಿಸಿದವರು. ಇದು ದಲಿತ – ಬಂಡಾಯದವರ ಧ್ವನಿಗಿಂತ ಹೆಚ್ಚು ಕಠೋರ ಮತ್ತು ಶಕ್ತಿಯುತವಾಗಿದೆ. ಇಲ್ಲಿ ತಮಿಳುನಾಡಿನಲ್ಲಿ ಮೊಳಗಿದ ಅಷ್ಟೇ ಅಲ್ಲದೆ ವ್ಯಾಪಿಸಿದ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಧ್ವನಿಯನ್ನು ಸಹ ನೆನಪಿಸಿಕೊಳ್ಳಬೇಕು.

ಹೀಗೆ ಕುವೆಂಪು ಅವರು ಹೊಸ ಸಮಾಜ ರಚನೆಯ ಕನಸನ್ನು ಹೊತ್ತು, ಅದಕ್ಕೆ ಮಾರಕವಾಗಿ ಪರಿಣಮಿಸಿದ್ದ ಸಾಂಸ್ಥಿಕ ಶಕ್ತಿಗಳ ವಿರುದ್ಧ ಬಂಡಾಯವನ್ನು ಹೂಡಿದವ ರಾಗಿದ್ದಾರೆ. ಆದ್ದರಿಂದಲೇ ಅವರ ಸಮಾಜಮುಖಿ ಕವನಗಳ ಭಾಷೆ ಕತ್ತಿಯಷ್ಟೇ ಮೊನಚು. ಇದಕ್ಕೆ ಹತ್ತಿರದ ನೆಲೆಯಲ್ಲಿ ಮಾತನಾಡುವ ದಲಿತ – ಬಂಡಾಯದ ದನಿಯಲ್ಲಿ ವಿಷಾದವು ಹೆಚ್ಚಾಗಿದೆ.

ಒಟ್ಟಾರೆ ಆಧುನಿಕ ಸಂದರ್ಭದಲ್ಲಿ ಕುವೆಂಪು, ಪ್ರಗತಿಶೀಲ ಮತ್ತು ದಲಿತ – ಬಂಡಾಯದ ಗೆಳೆಯರು ಸಮಪಾತಳಿಯಲ್ಲಿ ಕಾಣುತ್ತಾರೆ. ಅದಕ್ಕೆ ಕಾರಣವಾದ ಸಾಮಾಜಿಕತೆ ಮತ್ತು ಜನ ರಾಜ್ಯದ ಕನಸು ಅವರನ್ನು ನಮ್ಮೊಂದಿಗೆ ಇರಿಸಿದೆ. ಅಂತಹ ಸಮಾಜ ಸ್ಥಾಪನೆಯಾಗುವವರೆಗೂ ಇವರಂತೆ ನುಡಿದ – ದುಡಿದ ಯಾವುದೇ ಕಾಲದ, ಯಾವುದೇ ಲೋಕದ ಜನರೂ ನಮ್ಮವರೇ ಆಗುತ್ತಾರೆ. ಆ ನೆಲೆಯಲ್ಲಿ ಪ್ರಧಾನವಾಗಿ ಕುವೆಂಪು ಮತ್ತು ದಲಿತ – ಬಂಡಾಯದವರನ್ನು ಮಾತ್ರ ಇಲ್ಲಿ ಸದ್ಯಕ್ಕೆ ಲಕ್ಷಿಸಲಾಗಿದೆ.

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**
'ಅಕ್ಷರ', ನಂ. ೯೬೫, ೧ನೇ ಮುಖ್ಯರಸ್ತೆ
ಚೆನ್ನಣ್ಣ ಬಡಾವಣೆ, ಕಾವಲು ಭೈರಸಂದ್ರ
ಬೆಂಗಳೂರು – ೫೬೦ ೦೩೨
email : kaavem@gmail.com

# ಮತ್ತೊಮ್ಮೆ ಬಾಳನೆಡೆಗೆ...

ಇಲ್ಲಿಯವರೆಗೆ,
ನಿದ್ದೆಯಲಿದ್ದು ನಿರಾಳವಾಗಿರುವೆನೆಂದಿದ್ದೆ..
ಈಗ ದಿಢೀರನೆ ಎಚ್ಚರ.
ಅರೆನಿದ್ದೆಗಾಗಿಯೋ.
ಏನೇನೋ ಕನಸು ಹಳವಂಡಗಳಿಗಾಗಿಯೋ..
ಹೇಳಲಸದಳವಾದ ಚಡಪಡಿಕೆ.
ಹಸಿರನರಿಯದ ಮರದಡಿಯಲಿ ಕೂತಂತೆ..
ಸದಾ ಸುಡುವ ಮೈ ಮನಗಳು..
ಚೈತ್ರ ಬರುವದು ಯಾವಾಗ?
ಬರಬಹುದೇ? ವಸಂತನೊಲಿಯುವ ಯೋಗ..
ಅನುದಿನವೂ ಇದೇ ಚಡಪಡಿಕೆ.
ಸದಾ ಕಂಪಿಸುವ
ನೆಲದ ಮೇಲಿನ ಬದುಕಿಗೆ
ಆಸರೆಗಾಗಿ ತಡಕಾಟ, ನರಳಾಟ.
ಬದುಕನ್ನು ಕಟ್ಟಿ, ಭಾವದೊಳಗೆ ಹೊಕ್ಕು
ಪ್ರೀತಿಗೆ ಬಣ್ಣ ಬಳಿಯುವ
ಇರಾದೆಯೂ ಕಾಣುತ್ತಿಲ್ಲ.

ಬದಲಿಗೆ..
ದೇವನಿಗೆ ಮನೆ ಕಟ್ಟುವ,
ಅದರೊಳಗೆ ಪ್ರವೇಶಿಸುವ
ಗೋಜಲುಗಳ ಕೀರಲು
ದನಿಯ ಅಬ್ಬರದಲ್ಲಿ
ಗಿಳಿ ಕೋಗಿಲೆಗಳಿಗೆ
ದಿಗ್ಬಂಧನ..
ಈಗ ಕೋವಿಗಳು
ಧರ್ಮ ದಂಡವಾಗಿ
ಮೈದಳೆದು
ಅಗ್ನಿಯೇ ದಂಗಾಗುವಂತೆ
ಬೆಂಕಿಯುಗುಳುತ್ತ
ಜುಳುಜುಳು ನದಿಯನ್ನೇ
ಆಪೋಶನ ಪಡೆದಾಗ..
ತಣಿಸುವ ಮಳೆಯ ಕನಸಾಗಿ
ಮತ್ತೇ ಮತ ಪೆಟ್ಟಿಗೆ
ಮೈದಾಳುತ್ತಿದೆ.
ಆರು ಹಿತವರು ನನಗೆ..?
ಅನ್ನ ಇಡುವವರಾರು ನನಗೆ..?
ಹೂವು ತರುವವರಾರು ನನಗೆ..?
ಎಂಬಿವೇ ಇತ್ಯಾದಿ ಉತ್ತರವನರಿಯದ
ಪ್ರಶ್ನೆಗಳಿಗೆ ತಡಕಾಡುತ್ತ..
ಮತ್ತೇ ಮತ ಪೆಟ್ಟಿಗೆಯನ್ನು
ಭದ್ರವಾಗಿಸುತ್ತಿದ್ದೇವೆ..
ಹೆಳವನ ಹೆಗಲ ಮೇಲೆ
ಕುರುಡ ಕುಳಿತಿದ್ದಾನೆ
ದಾರಿ ಸಾಗುವುದೆಂತೋ...
ನೋಡಬೇಕು.



**ಕೆ. ಶಶಿಕಾಂತ**
email : dr.smkadlur@gmail.com



## ‘ಆರ್‌ಸಿಇಪಿ’ ಒಪ್ಪಂದಕ್ಕೆ ಸಹಿ ನಿರಾಕರಿಸಿದ ಭಾರತ

**ಬಾಂ**ಕಾಕ್‌ನಲ್ಲಿ ಜರುಗಿದ ೧೫ ರಾಷ್ಟ್ರಗಳ ಸಭೆಯಲ್ಲಿ ಭಾಗವಹಿಸಿದ್ದ ಭಾರತ ‘ಆರ್‌ಸಿಇಪಿ’ ಒಪ್ಪಂದಕ್ಕೆ ಸಹಿ ಹಾಕದೆ ಹಿಂದಿರುಗಿತು. ಇದು ರೈತರಿಗೆ, ಸಣ್ಣ ಉದ್ಯಮಿಗಳಿಗೆ, ವ್ಯಾಪಾರಸ್ಥರಿಗೆ ದೊರೆತ ವಿಜಯ. ಒಪ್ಪಂದಕ್ಕೆ ಸಹಿ ಹಾಕಕೂಡದು ಎಂದು ರಾಷ್ಟ್ರಾದ್ಯಂತ ನಡೆಸಿದ ಹೋರಾಟಕ್ಕೆ ಸಿಕ್ಕ ಫಲ. ಭಾಜಪದವರು ಹೇಳಿಕೊಳ್ಳುವಂತೆ ಮೋದಿ ಸರಕಾರದ ದೃಢ ನಿಲುವಲ್ಲ. ಮೊದಲೇ ಆರ್ಥಿಕ ಮಂದಗತಿಯ ಸುಳಿಯಲ್ಲಿ ಬಳಲುತ್ತಿರುವ ಆರ್ಥಿಕಕ್ಕೆ ‘ಆರ್‌ಸಿಇಪಿ’ ಇಂದ ಸದ್ಯಕ್ಕೆ ಬಚಾವು. ಏನಿದು ‘ಆರ್‌ಸಿಇಪಿ’ ಒಪ್ಪಂದ? ಪ್ರಾದೇಶಿಕ ಸಮಗ್ರ ಆರ್ಥಿಕ ಪಾಲುದಾರಿಕೆ (ರೀಜನಲ್ ಕಾಂಪ್ರಿಹೆನ್ಸಿವ್ ಎಕನಾಮಿಕ್ ಪಾರ್ಟ್‌ನರ್‌ಷಿಪ್), ೧೫ ರಾಷ್ಟ್ರಗಳ ಪ್ರಾದೇಶಿಕ ಸಂಘಟನೆ. ಇದರಲ್ಲಿ ಆಸಿಯಾನ್ ಸದಸ್ಯ ರಾಷ್ಟ್ರಗಳೂ ಇವೆ. ಮುಂದಿನ ೧೫ ವರ್ಷಗಳಲ್ಲಿ ಯಾವುದೇ ಸುಂಕವಿಲ್ಲದೆ ವಹಿವಾಟು ನಡೆಸುವುದು ಗುರಿ. ಭಾರತ ಈಗ ಹೈನುಗಾರಿಕೆಗೆ ಸಂಬಂಧಿಸಿದಂತೆ ವಿಧಿಸಿರುವ ಸುಂಕದ ದರ ಶೇ. ೬೩.೮, ಇತರ ಸರಕುಗಳ ಮೇಲೆ ಶೇ. ೩೪.೮.

ಒಪ್ಪಂದಕ್ಕೆ ಭಾರತ ಸಹಿ ಹಾಕಿದ್ದಲ್ಲಿ ಹೈನುಗಾರಿಕೆಯಲ್ಲಿ ತೊಡಗಿರುವ ಲಕ್ಷಾಂತರ ರೈತರು ಬೀದಿ ಪಾಲಾಗುತ್ತಿದ್ದರು, ಇನ್ನಷ್ಟು ಸಣ್ಣ ಉದ್ದಿಮೆದಾರರು ದಿವಾಳಿಯಾಗುತ್ತಿದ್ದರು. ಬಳಕೆದಾರರಿಗೆ ಹಾಲು, ಹಾಲಿನ ಉತ್ಪನ್ನಗಳು, ಇತರೆ ವಸ್ತುಗಳು ಅಗ್ಗದ ದರದಲ್ಲಿ ದೊರೆಯುತ್ತಿತ್ತು. ಆಸ್ಟ್ರೇಲಿಯದಿಂದ ಹಾಲು, ಮೊಸರು, ಕ್ಷೀರೋತ್ಪನ್ನಗಳ ಬೆಲೆ ಅರ್ಧಕ್ಕಿಂತ ಕಡಿಮೆ ದರದಲ್ಲಿ ಚೀಣಾದಿಂದ ಸರಕುಗಳು ಅಗ್ಗದ ದರದಲ್ಲಿ ದೊರೆಯುತ್ತಿತ್ತು. ಭಾರತದ ಸರಕುಗಳು ಹಿಂದಿನಿಂದಲೂ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿಯಲ್ಲಿ ಸರಿಸಾಟಿಯಾಗಿ ನಿಲ್ಲುವ ಸಾಮರ್ಥ್ಯ ಹೊಂದಿಲ್ಲ. ಇದಕ್ಕೆ ಹಲವು ಕಾರಣಗಳಿವೆ. ಅತಿ ಮುಖ್ಯವಾದದ್ದು ಗುಣಮಟ್ಟ ಕಾಪಾಡಿಕೊಳ್ಳುವುದರಲ್ಲಿ ಭಾರತ ಹಿಂದೆ ಬಿದ್ದಿದೆ. ಎರಡನೆಯದಾಗಿ ಸುಂಕವೂ, ಬೆಲೆಯೂ ಜಾಸ್ತಿ. ಅಲ್ಲದೆ ಮುಕ್ತ ವಾಣಿಜ್ಯ ಒಪ್ಪಂದ ಮಾಡಿಕೊಂಡಿರುವ ದೇಶಗಳೊಂದಿಗೆ ವ್ಯವಹಾರಗಳು ಹಿತಕರವಾಗಿಲ್ಲ. ಚೀಣಾ ಎಲ್ಲ ಬಗೆಯ ವಸ್ತುಗಳನ್ನು ತಯಾರಿಸಿ ಮಾರುಕಟ್ಟೆಯಲ್ಲಿ ಯಶಸ್ಸು ಕಂಡಿದೆ. ಸದ್ಯಕ್ಕೆ ಅದು ಅಮೆರಿಕದೊಂದಿಗೆ ಸುಂಕದ ಸಮರದಲ್ಲಿ ನಿರತವಾಗಿದೆ. ದ್ವಿಪಕ್ಷೀಯ ಆರ್ಥಿಕ ವಹಿವಾಟಿನಲ್ಲಿ ಭಾರತ ಚೀಣಾದ ವಿಚಾರದಲ್ಲಿ ತೀವ್ರವಾದ ಕೊರತೆ ಅನುಭವಿಸುತ್ತಿದೆ. ಅದರ ವಾಣಿಜ್ಯ ಶಿಲ್ಕು ೫೩ ಬಿಲಿಯ ಡಾಲರುಗಳಿಗೂ ಅಧಿಕವಾಗಿದೆ.

ಮೋದಿ ಸರಕಾರದ ನೀತಿ ಆಯೋಗದ ಪ್ರಕಾರ ಜಪಾನ್, ದಕ್ಷಿಣ ಕೊರಿಯ ಹಾಗೂ ಆಸಿಯಾನ್ ದೇಶಗಳೊಂದಿಗೆ ರಫ್ತು ವ್ಯಾಪಾರ ಅಧಿಕಗೊಂಡಿದ್ದರೂ ಆ ದೇಶಗಳಿಂದ ಆಮದು ಅಧಿಕಗೊಂಡಿದೆ. ಅಲ್ಲದೆ, ‘ಆರ್‌ಸಿಇಪಿ’ ದೇಶಗಳೊಂದಿಗೆ ವಾಣಿಜ್ಯ ವ್ಯವಹಾರದಲ್ಲಿ ಭಾರತ ಈಗಾಗಲೇ ಕೊರತೆ ಅನುಭವಿಸುತ್ತಿದೆ. ಅಂದರೆ ರಫ್ತಿನ ಪ್ರಮಾಣಕ್ಕಿಂತ ಆಮದು ಅಧಿಕಗೊಂಡಿದೆ. ಈ ದೇಶಗಳಿಗೆ ಭಾರತದ ರಫ್ತಿನ ಪ್ರಮಾಣ ಶೇ. ೧೫ ರಷ್ಟಾಗಿದ್ದರೆ, ಆಮದಿನ ಪ್ರಮಾಣ ಶೇ. ೩೫ ರಷ್ಟಿದೆ. ದೇಶೀ ಮಾರುಕಟ್ಟೆಯ ವಿಸ್ತರಣೆಯೊಂದೇ ಭಾರತದ ಮುಂದಿರುವ ಸವಾಲು.

‘ಆರ್‌ಸಿಇಪಿ’ ಮಾತುಕತೆಗಳು, ಸಂಧಾನಗಳು ಅತ್ಯಂತ ಗೋಪ್ಯ. ನಮ್ಮ ದೇಶದ ಜನರಿಗಾಗಲಿ, ಸಂಸತ್ತಿಗಾಗಲಿ ಒಪ್ಪಂದವನ್ನು ಕುರಿತು ಚರ್ಚಿಸಲು ಅವಕಾಶವೇ ಇಲ್ಲ. ಒಪ್ಪಂದವನ್ನು ಅನುಮೋದಿಸುವ ಅಥವಾ ತಿರಸ್ಕರಿಸುವ ಹಕ್ಕು ಕೂಡ ಸಂಸತ್ತಿಗೆ ಇಲ್ಲ. ಇಂಥ ಒಪ್ಪಂದದಿಂದ ಭಾರತದ ಆರ್ಥಿಕಕ್ಕೆ ಮಾರಕವೇ ಹೊರತು ಬೇರೇನಿಲ್ಲ. ಈಗಾಗಲೇ ಭಾರತದ ಜನತೆ ಜಾಗತೀಕರಣದ ಬವಣೆ ಅನುಭವಿಸುತ್ತಿದ್ದಾರೆ. ಮುಂದೊಂದು ದಿನ ‘ಆರ್‌ಸಿಇಪಿ’ಗೆ ಸಹಿ ಹಾಕಬೇಕಾದ ಪರಿಸ್ಥಿತಿ ಬಂದೀತು ಎಂಬ ಭೀತಿ ಕಾಡುತ್ತಿದೆ.

* * *

## ಸ್ವದೇಶೀಯರಿಗಿಲ್ಲ ಅವಕಾಶ, ವಿದೇಶೀಯರಿಗೆ ಮಣೆ

**ಕಾ**ಶ್ಮೀರದ ವಿಶೇಷ ಸ್ಥಾನಮಾನ ರದ್ದುಗೊಳಿಸಿ, ರಾಜ್ಯವನ್ನು ವಿಭಜನೆ ಮಾಡಿ ಕೇಂದ್ರಾಡಳಿತ ತಂದು ನೂರು ದಿನಗಳ ಮೇಲಾಯಿತು. ಆದರೂ ಇನ್ನೂ ಅಲ್ಲಿನ ಪರಿಸ್ಥಿತಿ ಸಹಜಸ್ಥಿತಿಗೆ ಮರಳಿಲ್ಲ. ವಿಶ್ವದ ರಾಷ್ಟ್ರಗಳ ಅನುಮೋದನೆಯನ್ನು ಪಡೆಯಲು, ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಮೋದಿ ನಡೆಸಿರುವಂಥ ಪ್ರಯತ್ನಗಳು ಸಫಲಗೊಂಡಿಲ್ಲ. ಮಾನವಹಕ್ಕುಗಳ ಉಲ್ಲಂಘನೆ ಕುರಿತು ಅಂತರರಾಷ್ಟ್ರೀಯ ಸಮುದಾಯದಲ್ಲಿ ಅಸಮಾಧಾನ ಇರುವುದು ಸ್ಪಷ್ಟವಾಗಿದೆ. ಈಚೆಗೆ ಚೀಣಾದ ನಾಯಕರೊಂದಿಗೆ ನಡೆದ ಶೃಂಗಸಭೆಯಲ್ಲಿ ಪೂರ್ವ ನಿರ್ಧಾರದಂತೆ ವಿಷಯ ಪ್ರಸ್ತಾಪವಾಗಲಿಲ್ಲ, ಹಾಗೆಯೇ ಅಮೆರಿಕದ ಕಾಂಗ್ರೆಸ್ ಸದಸ್ಯರುಗಳು ವ್ಯಕ್ತಗೊಳಿಸಿರುವ ಅತೃಪ್ತಿಯನ್ನೂ ಶಮನಗೊಳಿಸಲಾಗಿಲ್ಲ.

ಜಮ್ಮು–ಕಾಶ್ಮೀರ ರಾಜ್ಯದಲ್ಲಿ ವಿಧಿಸಲಾಗಿರುವ ನಿರ್ಬಂಧಗಳು ರದ್ದಾಗಿಲ್ಲ. ಮೋದಿ ಸರಕಾರ ರಾಜ್ಯ ಸಹಜಸ್ಥಿತಿಯತ್ತ ಮರಳುತ್ತಿರುವ ಬಗ್ಗೆ ನೀಡುವ ಹೇಳಿಕೆಗಳು ಸತ್ಯಕ್ಕೆ ದೂರವಾದವು. ಸಹಸ್ರಾರು ಮಂದಿ ರಾಜಕಾರಣಿಗಳು ಇನ್ನೂ ಕಾರಾಗೃಹವಾಸಿಗಳಾಗಿದ್ದಾರೆ, ದೇಶೀಯರಿಗೆ ಈವರೆಗೆ ಜಮ್ಮು–ಕಾಶ್ಮೀರಕ್ಕೆ ಭೇಟಿ ನೀಡಲು ಅವಕಾಶವಿಲ್ಲ. ಒಂದು ವೇಳೆ ಅನುಮತಿ ದೊರೆತರೂ ಸಂಬಂಧಪಟ್ಟವರನ್ನು ಭೇಟಿಯಾಗಿ ಹಿಂದಿರುಗಬೇಕು ತುಟಿಪಿಟಕ್ಕೆನ್ನದೆ. ಅಂಥ ನಿರ್ಬಂಧ. ದೇಶೀ ಪಾರ್ಲಿಮೆಂಟ್ ಸದಸ್ಯರಿಗೆ ದೊರೆಯದ ಭಾಗ್ಯ ಅಕ್ಟೋಬರ್ ೨೯ರಂದು ಯೂರೋಪಿಯನ್ ಯೂನಿಯನ್ನಿನ ಪಾರ್ಲಿಮೆಂಟ್ ಸದಸ್ಯರಿಗೆ ಲಭಿಸಿತು. ಆಯ್ದ ೨೭ ಮಂದಿ ಎಂಪಿಗಳು ಸರ್ಪಗಾವಲಿನಲ್ಲಿ ನಿರ್ದೇಶಿತ ಪ್ರದೇಶದಲ್ಲಿ ಪ್ರವಾಸ ಮಾಡಿದರು. ಇವರೆಲ್ಲರೂ ತೀವ್ರ ಬಲಪಂಥೀಯರಾಗಿದ್ದು ಫಾಸಿಸ್ಟ್ ಮನೋಭಾವದವರಾಗಿದ್ದು ಮೋದಿ ಸರಕಾರದ ಬೆಂಬಲಿಗರಾಗಿದ್ದವರೇ. ಐರೋಪ್ಯ ದೇಶಗಳ ಅನುಮೋದನೆ ಪಡೆಯಲು ಮೋದಿ ಸರಕಾರ ನಡೆಸಿದ ಪ್ರಯತ್ನ ಇದು. ಇವರು ಪ್ರವಾಸದ ನಂತರ ನಡೆಸಿದ ಪತ್ರಿಕಾ ಗೋಷ್ಠಿಯಲ್ಲಿ ನೀಡಿದ ಹೇಳಿಕೆಯೂ ಮೋದಿ ಸರಕಾರದ ಸಮರ್ಥನೆಯೇ ಆಗಿತ್ತು. ಇದನ್ನು ಕಾರ್ಯಗತ ಮಾಡಿದ್ದು ಬ್ರಸೆಲ್ಸ್‌ನಲ್ಲಿರುವ ಮಾದಿ ಶರ್ಮ ಎಂಬ ಮಹಿಳೆ ನಡೆಸುತ್ತಿರುವ ಸರಕಾರೇತರ ಸಂಘಟನೆ ‘ವಿಮೆನ್ಸ್ ಎಕನಾಮಿಕ್ ಅಂಡ್ ಸೋಷಿಯಲ್ ಥಿಂಕ್ ಟ್ಯಾಂಕ್’. ಖರ್ಚುವೆಚ್ಚವನ್ನೆಲ್ಲ ಭರಿಸಿದ್ದು ಅಲಿಪ್ತತೆ ಅಧ್ಯಯನ ಅಂತರರಾಷ್ಟ್ರೀಯ ಸಂಸ್ಥೆ ಎಂಬ ಇನ್ನೊಂದು ಅನಾಮಧೇಯ ಸಂಸ್ಥೆ. ಭಾರತ ವಿದೇಶಾಂಗ ಇಲಾಖೆಯ ವಕ್ತಾರರ ಪ್ರಕಾರ ಐರೋಪ್ಯ ಎಂಪಿಗಳ ಭೇಟಿಗೂ ಸರಕಾರಕ್ಕೂ ಸಂಬಂಧವಿಲ್ಲ ಎಂಬುದಾಗಿ. ಆದರೆ ಈ ಎಂಪಿಗಳು ಪ್ರಧಾನಿ ಮೋದಿಯವರನ್ನು ಭೇಟಿಯಾಗಿ ಫೋಟೋ ಕ್ಲಿಕ್ಕಿಸಿಕೊಂಡದ್ದು ಹೇಗೆ ಎನ್ನುವುದು ನಿಗೂಢ. ಇಷ್ಟೆಲ್ಲ ಏರ್ಪಾಟು ಮಾಡಿದ ಮಹಿಳೆ ಮಾದಿ ಶರ್ಮ ಹಿನ್ನೆಲೆ ಏನು ಎಂಬುದೂ ತಿಳಿಯದು. ಅಂತೂ ಇಂತೂ ದೇಶೀ ಪಾರ್ಲಿಮೆಂಟ್ ಸದಸ್ಯರಿಗೆ ಇನ್ನೂ ದಕ್ಕದಿರುವ ಪ್ರವಾಸ ಯೂರೋಪಿಯನ್ ಯೂನಿಯನ್ನಿನ ಎಂಪಿಗಳಿಗೆ ದಕ್ಕಿತು. ಅಂದಹಾಗೆ ಮೂರು ದಿನಗಳ ಪ್ರವಾಸದ ಸಮಯದಲ್ಲಿ ಕಾಶ್ಮೀರದಲ್ಲಿ ಪ್ರತಿಭಟನೆ ನಡೆದದ್ದಂತೂ ನಿಜವೇ.

**ಸೀಯಾರ್ಕೆ**
‘ಸೂರ್ಯ ರೆಸಿಡೆನ್ಸಿ’, ಫ್ಲಾಟ್ ನಂ. ೧, ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫

# ರಾಷ್ಟ್ರೀಯತೆ ಮತ್ತು ಅಭಿವೃದ್ಧಿ



ತಮ್ಮ ಆಡಳಿತ ಹಾಗೂ ಅನುಕೂಲಕ್ಕಾಗಿ ಹಾಗೆ ಭಿನ್ನವಾಗಿದ್ದ ಆ ಎಲ್ಲ ಭೂ ಪ್ರದೇಶಗಳನ್ನೂ ಒಟ್ಟುಗೂಡಿಸಿ ಸಮಗ್ರತೆಯ ರೂಪು ಕೊಟ್ಟಿದ್ದು ಬ್ರಿಟಿಷರು. ಅದಾಗಲೇ ಯುರೋಪಿನಲ್ಲಿ ಹಾಗೂ ಇಂಗ್ಲೆಂಡಿನಲ್ಲಿ ರಾಷ್ಟ್ರೀಯತೆಯ ಕಲ್ಪನೆ ಮೂಡಿಯಾಗಿತ್ತು. ನಮಗೆ ಸ್ವಾತಂತ್ರ್ಯ ಬರುವ ಎಷ್ಟು ಮೊದಲೇ ಅಂದರೆ ೧೯ನೇ ಶತಮಾನದ ಆದಿ ಹಾಗೂ ೨೦ನೇ ಶತಮಾನದ ಆರಂಭದಲ್ಲೇ ಯುರೋಪ್ ಹಾಗೂ ಅಮೇರಿಕಾದಂತಹ ರಾಷ್ಟ್ರಗಳಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಹುಟ್ಟಿಕೊಂಡಿತು. ಹಾಗಾಗಿ ಒಂದನೇ ಹಾಗೂ ಎರಡನೇ ಮಹಾಯುದ್ಧಗಳು ರಾಷ್ಟ್ರ ರಾಷ್ಟ್ರಗಳ ನಡುವೆ ನಡೆಯಿತೇ ಹೊರತು ರಾಜರುಗಳ ನಡುವೆ ನಡೆದ ಯುದ್ಧವಾಗಿರಲಿಲ್ಲ.

ತಾನು, ತನ್ನದು, ತನ್ನವರೆನ್ನುವ ಎಲ್ಲ ಭಾವಗಳು ನಮ್ಮೊಳಗೆ ಎಷ್ಟು ಮಿಳಿತವೊ ಅದರಷ್ಟೇ ಆಳವಾಗಿ ಇನ್ನಷ್ಟು ಸೂಕ್ಷ್ಮವಾಗಿ ಸೇರಿಕೊಂಡಿರುವುದು ನಮ್ಮ ಊರು, ನಮ್ಮ ನೆಲ, ನಮ್ಮ ಭಾಷೆ, ನಮ್ಮ ಆಚರಣೆಗಳು ಮತ್ತು ಒಟ್ಟಾರೆಯಾಗಿ ನಮ್ಮ ಭೂಮಿಯೆಂಬ ಭಾವನೆ. ಅದನ್ನು ನೀವು ದೇಶವೆನ್ನಬಹುದು, ದೇಶಪ್ರೇಮವೆನ್ನಬಹುದು ಅಥವಾ ನಮ್ಮ ಗುರುತೆನ್ನಬಹುದು. ಒಟ್ಟಾರೆಯಾಗಿ ಈ ಭಾವನೆಯನ್ನು ರಾಷ್ಟ್ರೀಯತೆ ಎನ್ನಬಹುದು.

ಸ್ವಾತಂತ್ರ್ಯಪೂರ್ವದಲ್ಲಿ ಹೇಗಿತ್ತು ಈ ನಾಡು ಅನ್ನುವುದನ್ನು ನೋಡಿದರೆ, ಆಗೊಂದು ಸ್ಪಷ್ಟ ಭಾರತೀಯತೆಯ ಕಲ್ಪನೆಯೇ ಇರಲಿಲ್ಲ. ಆಗಿದ್ದಿದ್ದು ಚಿಕ್ಕ ಚಿಕ್ಕ ಸಂಸ್ಥಾನಗಳು, ಪ್ರಾಂತ್ಯಕ್ಕೊಂದರಂತೆ ದೊಡ್ಡ ದೊಡ್ಡ ರಾಜ್ಯಾಡಳಿತ, ಅವರಿಗೊಂದಿಷ್ಟು ಸಾಮಂತರು. ಹೀಗೆ ಅವರು ಗೆದ್ದು ರಾಜ್ಯಭಾರ ನಡೆಸಲು ಹಾಕಿಕೊಂಡ ಗಡಿಯೊಳಗಿನ ಪ್ರದೇಶವೇ ಒಂದು ರಾಷ್ಟ್ರದಂತೆ. ಅದಕ್ಕೊಂದು ವಿಶೇಷ ಸಂಸ್ಕೃತಿ, ಆ ನೆಲದ ವಿಶಿಷ್ಟತೆ, ಆ ರಾಜರ ವಿಶೇಷತೆ, ಅವುಗಳಿಂದಲೇ ಗುರುತಿಸಲ್ಪಟ್ಟು ನಾಡು ನುಡಿಯಾಗಿ ರೂಪುಗೊಂಡಿತ್ತು. ದಕ್ಷಿಣದಲ್ಲಿ ಕದಂಬರು, ಚೋಳರು, ಚಾಲುಕ್ಯರು, ರಾಷ್ಟ್ರಕೂಟರು, ವಿಜಯನಗರ ಅರಸರು, ಮೈಸೂರು ಸಂಸ್ಥಾನ, ಬಹಮನಿ ಸುಲ್ತಾನರು, ನಿಜಾಮರು, ಹೀಗೆಲ್ಲ ರಾಜ್ಯಾಡಳಿತವಿದ್ದರೆ, ಉತ್ತರದಲ್ಲಿ ಮೌರ್ಯರು, ಗುಪ್ತರು, ರಜಪೂತರು, ಪೇಶ್ವೆಗಳು, ಮೊಘಲರು ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಇವರೆಲ್ಲರ ಆಡಳಿತವೂ ಒಂದಕ್ಕಿಂತ ಒಂದು ಭಿನ್ನವಾಗಿತ್ತು ಮತ್ತು ಇವರೆಲ್ಲರೂ ನಾಡು, ನುಡಿ, ಸಂಸ್ಕೃತಿ ಮತ್ತು ಸಮಾಜಕ್ಕೆ ತನ್ನದೇ ಆದ ವಿಶಿಷ್ಟ ಛಾಪನ್ನು ಉಳಿಸಿ ಹೋಗಿರುವಂತಹವರು. ಇಷ್ಟೆಲ್ಲ ವಿಭಿನ್ನತೆಗಳಿದ್ದರೂ ಪ್ರತಿಯೊಂದು ರಾಜರ ಆಡಳಿತ ಬೇರೆ ಬೇರೆ ತೆರನಾಗಿದ್ದರೂ ಸಾಂಸ್ಕೃತಿಕವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಮ್ಯತೆ ಇತ್ತು, ಒಂದು ಬೆಸುಗೆಯಿತ್ತು. ಆಧ್ಯಾತ್ಮಿಕವಾಗಿ ಈ ಎಲ್ಲ ಪ್ರದೇಶಗಳೂ ಬೆಸೆದುಕೊಂಡಿದ್ದವು.

ತಮ್ಮ ಆಡಳಿತ ಹಾಗೂ ಅನುಕೂಲಕ್ಕಾಗಿ ಹಾಗೆ ಭಿನ್ನವಾಗಿದ್ದ ಆ ಎಲ್ಲ ಭೂ ಪ್ರದೇಶಗಳನ್ನೂ ಒಟ್ಟುಗೂಡಿಸಿ ಸಮಗ್ರತೆಯ ರೂಪು ಕೊಟ್ಟಿದ್ದು ಬ್ರಿಟಿಷರು. ಅದಾಗಲೇ ಯುರೋಪಿನಲ್ಲಿ ಹಾಗೂ ಇಂಗ್ಲೆಂಡಿನಲ್ಲಿ ರಾಷ್ಟ್ರೀಯತೆಯ ಕಲ್ಪನೆ ಮೂಡಿಯಾಗಿತ್ತು. ನಮಗೆ ಸ್ವಾತಂತ್ರ್ಯ ಬರುವ ಎಷ್ಟು ಮೊದಲೇ ಅಂದರೆ ೧೯ನೇ ಶತಮಾನದ ಆದಿ ಹಾಗೂ ೨೦ನೇ ಶತಮಾನದ ಆರಂಭದಲ್ಲೇ ಯುರೋಪ್ ಹಾಗೂ ಅಮೇರಿಕಾದಂತಹ ರಾಷ್ಟ್ರಗಳಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ ಹುಟ್ಟಿಕೊಂಡಿತು. ಹಾಗಾಗಿ ಒಂದನೇ ಹಾಗೂ ಎರಡನೇ ಮಹಾಯುದ್ಧಗಳು ರಾಷ್ಟ್ರ ರಾಷ್ಟ್ರಗಳ ನಡುವೆ ನಡೆಯಿತೇ ಹೊರತು ರಾಜರುಗಳ ನಡುವೆ ನಡೆದ ಯುದ್ಧವಾಗಿರಲಿಲ್ಲ.

ಮೂಲತಃ ರಾಷ್ಟ್ರೀಯತೆ ಅಥವಾ ನ್ಯಾಶನಲಿಸಂ ಎನ್ನುವುದು ಯುರೋಪಿನ ಪರಿಕಲ್ಪನೆ. ಯುರೋಪ್, ಅಮೇರಿಕಾ ಹಾಗೂ ಕೆನಡಾ ದೇಶದ ರಾಷ್ಟ್ರೀಯತೆಯ ಪರಿಕಲ್ಪನೆಯೂ ಒಕ್ಕೂಟ ವ್ಯವಸ್ಥೆಯ ಹಿನ್ನೆಲೆಯಲ್ಲೇ ಮೂಡಿದ್ದು. ಅಂದರೆ ಪ್ರತೀ ಪ್ರಾಂತ್ಯವೂ ತನ್ನ ಅಸ್ಮಿತೆಯನ್ನು ಉಳಿಸಿಕೊಂಡು ಒಟ್ಟೂ ಬೆಳವಣಿಗೆ ಮತ್ತು ಅಭಿವೃದ್ಧಿಯ ನಿಟ್ಟಿನಲ್ಲಿ ಒಂದುಗೂಡಿ ರಾಷ್ಟ್ರವಾಗಿ ನಿರ್ಮಾಣಗೊಂಡಿತು. ಉದಾಹರಣೆಗೆ ಒಟ್ಟಾರೆಯಾಗಿ ಅಮೇರಿಕಾ ಎಲ್ಲ ಪ್ರದೇಶಗಳ ನಡುವೆ ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಬಹಳಷ್ಟು ವ್ಯತ್ಯಾಸಗಳಿದ್ದರೂ ಪ್ರಪಂಚದ ದೃಷ್ಟಿಯಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನವಾಗಿ ಪರಿಚಿತವಾಗಿದೆ. ಹಾಗೆಯೇ ಯುರೋಪ್ ಕೂಡ.

ಈ ಹಿನ್ನೆಲೆಯಲ್ಲಿ ನಮಗೆ ೧೯೪೭ರಲ್ಲಿ ಬ್ರಿಟಿಷರ ಆಡಳಿತದಿಂದ ಮುಕ್ತಿ ಸಿಕ್ಕಾಗ ಭಾರತ ಕೂಡ ಒಕ್ಕೂಟ ವ್ಯವಸ್ಥೆಯನ್ನು ಒಪ್ಪಿಕೊಂಡಿತು. ಈ ಒಕ್ಕೂಟ ವ್ಯವಸ್ಥೆಯೊಳಗೆ ಇಲ್ಲಿನ ನೆಲವನ್ನಾಳುತ್ತಿದ್ದ ಅನೇಕ ರಾಜರುಗಳು ಹಾಗೂ ಸಂಸ್ಥಾನಗಳು ವಿಲೀನಗೊಂಡವು. ಹಾಗೆ ವಿಲೀನಗೊಂಡ ಎಲ್ಲ ಭೂಭಾಗಗಳಿಗೂ ಅದರದೇ ಆದ ರಾಷ್ಟ್ರೀಯತೆಯ ಗುರುತಿತ್ತು. ಅಂದರೆ ಪ್ರತಿಯೊಂದು ಪ್ರಾಂತ್ಯವೂ ತನ್ನದೇ ಆದ ವಿಶಿಷ್ಟತೆಗಳೊಂದಿಗೆ ತನ್ನದೇ ಆದ ರಾಷ್ಟ್ರೀಯತೆಯನ್ನು ಹೊಂದಿದ್ದವು. ಉದಾಹರಣೆಗೆ, ತಮಿಳು ರಾಷ್ಟ್ರೀಯತೆ, ಮಲೆಯಾಳಿ, ಕನ್ನಡ, ಬೆಂಗಾಳಿ, ತೆಲುಗು, ಒರಿಯಾ, ಮರಾಠಿ ರಾಷ್ಟ್ರೀಯತೆಗಳು. ಅಂತಹ ಎಲ್ಲ ರಾಷ್ಟ್ರೀಯ ಪರಿಕಲ್ಪನೆ ಹೊಂದಿದ ಪ್ರಾಂತ್ಯಗಳು ಒಗ್ಗೂಡಿ "ಭಾರತೀಯತೆ" ಎನ್ನುವ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಪ್ರಪಂಚದ ಇತರ ಭಾಗಗಳಿಗೆ ತಮ್ಮ ಗುರುತಾಗಿ ಒಪ್ಪಿಕೊಂಡವು.

ಇವೆಲ್ಲವೂ ಭಾರತವೆಂಬ ರಾಷ್ಟ್ರೀಯ ಪರಿಕಲ್ಪನೆ ಮೂಡಿದಾಕ್ಷಣ ಅದರೊಳಗಿನ

**ಡಾ॥ ಕೆ. ಎಸ್. ನಾಗೇಗೌಡ, ಪಲ್ಲವಿ ಇಡೂರು**

ರಾಜ್ಯಗಳಾಗಿ ಒಂದಕ್ಕೊಂದು ಬೆಸೆದುಕೊಂಡಿತು. ಚರ್ಚೆಯ ಮಾದರಿಯಾಗಿ ಭಾರತೀಯತೆಯನ್ನು ರಾಷ್ಟ್ರೀಯತೆಯೆಂದರೂ ವಾಸ್ತವದಲ್ಲಿ ಕನ್ನಡ, ತಮಿಳು, ತೆಲುಗು, ಮಲೆಯಾಳಿ, ಒರಿಯಾ, ಮರಾಠಿ, ಬೆಂಗಾಲಿ ಮುಂತಾದವುಗಳು ನಿಜವಾದ ರಾಷ್ಟ್ರೀಯತೆಯಾಗಿದೆ.

ಈ ಎಲ್ಲ ವಿಚಾರಗಳು ಬಂದಾಗ ಭಾರತೀಯತೆಯೊಂದಿಗಿನ ಇಷ್ಟೊಂದು ರಾಷ್ಟ್ರೀಯತೆಯ ಕುರಿತು ಗೊಂದಲಗಳೇಳುವುದು ಸಹಜ. ನಮ್ಮಲ್ಲಿನ ಸಾಮಾಜಿಕ ರಚನೆಯನ್ನು ಗಮನಿಸಿ, ನಾಗರಿಕತೆಯ ಶುರುವಿನಿಂದಲೂ ಮನುಷ್ಯ ಸಂಘಜೀವಿ. ಮೊದಮೊದಲು ಒಂದೊಂದು ಬುಡಕಟ್ಟುಗಳಿಗೆ ಸೀಮಿತವಾಗಿ ತನ್ನವರದ್ದೇ ಗುಂಪುಗಳನ್ನು ಕಟ್ಟಿಕೊಂಡು ಬದುಕುತ್ತಿದ್ದ ಮನುಷ್ಯ, ನಾಗರಿಕತೆಯ ಮಾರ್ಪಾಡಿನ ಹಾದಿಯಲ್ಲಿ ಮಾಡುವ ಕಸುಬಿನಾಧಾರದ ಮೇಲೆ ಗುಂಪುಕಟ್ಟಿಕೊಂಡ. ಅದರ ಮುಂದುವರಿದ ಭಾಗವಾಗಿ ಕುಲಕ್ಕೊಂದು ಹೆಸರಿಟ್ಟುಕೊಂಡು ಜಾತಿಯಾಧಾರದಲ್ಲಿ ಗುರುತಿಸಿಕೊಳ್ಳಲು ಪ್ರಾರಂಭಿಸಿದ. ಈಗಲೂ ನಮ್ಮ ದೇಶದಲ್ಲಿ ಪ್ರತಿಯೊಬ್ಬರಿಗೂ ಮೊದಲ ಸಾಮಾಜಿಕ ಗುರುತು ಜಾತಿ ಅಥವಾ ಪಂಗಡಗಳಿಂದ ಬರುತ್ತದೆ. ನಂತರದ ಗುರುತು ಭಾಷೆಯಿಂದಾದರೆ ಆ ನಂತರ ಕೊನೆಯಲ್ಲಿ ಬರುವುದು ದೇಶವೆಂಬ ಗುರುತು. ಅಂದರೆ ಪ್ರತಿಯೊಬ್ಬ ಭಾರತೀಯನೆನಿಸಿಕೊಂಡವನು ಮೊದಲು ಹೆಸರು, ನಂತರ ಜಾತಿ, ಅದಾದ ಮೇಲೆ ಭಾಷೆ ಹಾಗೂ ದೇಶವೆಂಬ ನಾಲ್ಕು ಸ್ತರಗಳಲ್ಲಿ ಗುರುತಿಸಲ್ಪಡುತ್ತಾನೆ. ಇವೆಲ್ಲವೂ ಕಲ್ಪಿತ ಸಮುದಾಯದ ಪರಿಕಲ್ಪನೆಗಳು. ಏಕೀಕರಣಗೊಂಡ ಕಾಲದಿಂದ ನಾವೆಲ್ಲರೂ ಈ ಗುಂಪಿನ ಪರಿಕಲ್ಪನೆಯಿಂದ ತುಸು ಮುಂದುವರಿದು ಭಾರತೀಯತೆಯ ಅಡಿಯಲ್ಲಿ ಭಾಷಾ ಸಮುದಾಯಗಳಾಗಿ ಗುರುತಿಸಲ್ಪಡುತ್ತಿದ್ದೇವೆ.

ಹೀಗೆ ಹುಟ್ಟಿಕೊಂಡ ಭಾಷಾವಾರು ಸಮುದಾಯವೆಂಬ "ರಾಷ್ಟ್ರೀಯತೆ" ದೇಶದಾದ್ಯಂತ ತಮ್ಮದೇ ಅಸ್ಮಿತೆಯೊಂದಿಗೆ ಭಾರತೀಯತೆಯಡಿಯಲ್ಲಿ ಗುರುತಿಸಿಕೊಳ್ಳಲು ಸಹಕಾರಿಯಾಗಿದೆ. ವಿಲೀನಗೊಂಡಾಗ ಪ್ರತಿಯೊಂದು ಪ್ರಾಂತ್ಯಗಳೂ ಭಾರತೀಯತೆಯನ್ನು ಒಪ್ಪಿಕೊಂಡರೂ ತನ್ನತನವನ್ನು ಬಿಟ್ಟುಕೊಡಲಿಲ್ಲ. ಈ ರೀತಿ ಎಲ್ಲ ರಾಜ್ಯಗಳಲ್ಲೂ ನಡೆಯಿತೇ ಎಂದರೆ, ಅತಿಹೆಚ್ಚು ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಉಳಿಸಿಕೊಂಡು ಬಂದಿದ್ದು ತಮಿಳುನಾಡು, ಆಂಧ್ರ, ಕರ್ನಾಟಕ, ಮಹಾರಾಷ್ಟ್ರ, ಕೇರಳ ಮತ್ತು ಬಂಗಾಳ. ಉತ್ತರದಲ್ಲಿ ಅದರಲ್ಲೂ ಹಿಂದಿ ಮಾತನಾಡುವ ಪ್ರದೇಶಗಳು ಹೀಗೆ ಭಾಷಾವಾರು ಪ್ರಾಂತ್ಯಗಳಾಗಿ ಒಕ್ಕೂಟಕ್ಕೆ ಸೇರಿದರೂ ಅಲ್ಲಿನ ರಾಷ್ಟ್ರೀಯತೆಯೆನ್ನುವುದು ಭಾರತೀಯತೆ ಎನ್ನುವ ಪರಿಕಲ್ಪನೆಯೊಂದಿಗೆ ಸೇರಿಹೋಯಿತು. ಅಲ್ಲಿನ







ಸಮಾಜದ್ದೇನಿದ್ದರೂ ಎರಡೇ ಗುರುತು, ಒಂದು ಜಾತಿಯಾದರೆ ಆಮೇಲಿನದ್ದು ಭಾರತೀಯತೆಯಷ್ಟೆ. ಆದರೆ ದಕ್ಷಿಣದ ರಾಜ್ಯಗಳಲ್ಲಿ ಹಾಗಾಗಲಿಲ್ಲ. ಇಲ್ಲಿನ ಕೇರಳಿಗರು ಸ್ವಾತಂತ್ರ್ಯಪೂರ್ವದಿಂದಲೂ ಅತೀವ ಜಾತೀಯತೆಯನ್ನು ಅನುಸರಿಸಿದ್ದಂಥವರು. ರಾಜ್ಯವಾರು ಪರಿಕಲ್ಪನೆಯೊಂದಿಗೆ ಒಕ್ಕೂಟ ವ್ಯವಸ್ಥೆಯೊಳಗೆ ಸೇರಿದಾಗಿನಿಂದ ಭಾಷಾವಾರು ಪ್ರಾಂತ್ಯವಾಗಿ ಅಭಿವೃದ್ಧಿ ಪಥದಲ್ಲಿ ತೊಡಗಿಸಿಕೊಂಡು ಜಾತೀಯತೆಗೂ ಮೀರಿ ಭಾಷಾವಾರು ಗುರುತಿನೊಂದಿಗೆ ದೇಶದೊಳಗೆ ಅಭಿವೃದ್ಧಿ ಹೊಂದಿದ ರಾಜ್ಯಗಳ ಪಟ್ಟಿಯಲ್ಲಿ ಹೆಸರು ಪಡೆದಿದೆ. ಹೀಗೆ ಪ್ರತಿಯೊಂದು ದಕ್ಷಿಣದ ರಾಜ್ಯಗಳಿಗೂ ಈ "ಪ್ರಾದೇಶಿಕ ರಾಷ್ಟ್ರೀಯತೆ" ಎನ್ನುವುದೂ ಕೂಡ ಅಭಿವೃದ್ಧಿ ಪಥದತ್ತ ಸಾಗಲು ಸಹಕಾರಿಯಾಯಿತು. ಹಾಗಾಗಿ ದಕ್ಷಿಣದ ಜನರು ಜಾತಿ, ಭಾಷೆ ಹಾಗೂ ದೇಶಿಯ ಗುರುತೆಂಬ ಮೂರು ಹಂತಗಳಲ್ಲಿ ಗುರುತಿಸಲ್ಪಡುತ್ತಾರೆ.

ಈ "ಪ್ರಾದೇಶಿಕ ರಾಷ್ಟ್ರೀಯತೆ" ಎನ್ನುವುದು ಅಭಿವೃದ್ಧಿಗೆ ಹೇಗೆ ಸಹಕಾರಿ ಎನ್ನುವುದಕ್ಕೆ ಮೇಲಿನ ಚಿತ್ರವನ್ನೊಮ್ಮೆ ಗಮನಿಸಿ. ಎಲ್ಲ ರಾಜ್ಯಗಳಲ್ಲೂ ಆಡಳಿತಕ್ಕೆ ಇರುವ ವ್ಯವಸ್ಥೆ ಒಂದೇ ಆಗಿದ್ದು, ಪ್ರಾದೇಶಿಕ ರಾಷ್ಟ್ರೀಯತೆಯಡಿಯಲ್ಲಿ ಅಭಿವೃದ್ಧಿಯನ್ನು ಗಮನಿಸುವಾಗ ಈ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ೧೯೬೦ರಿಂದ ೨೦೦೦ನೇ ಇಸವಿಯ ತನಕ ನಡೆದ ಸಮೀಕ್ಷೆಯ ಪ್ರಕಾರ ಎಲ್ಲೆಲ್ಲಿ ಭಾಷಾವಾರು ರಾಷ್ಟ್ರೀಯತೆಯ ಪರಿಕಲ್ಪನೆ ಜೀವಂತವಾಗಿದ್ದು ಉಚ್ಛ್ರಾಯ ಸ್ಥಿತಿಯಲ್ಲಿದೆಯೊ ಆ ಎಲ್ಲ ರಾಜ್ಯಗಳೂ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಯತ್ತ ಸಾಗಿದೆ. ಉದಾಹರಣೆಗೆ, ಕೇರಳ, ಕರ್ನಾಟಕ, ತಮಿಳುನಾಡು ಹಾಗೂ ಮಹಾರಾಷ್ಟ್ರ ರಾಜ್ಯಗಳು ಈ ಸಾಲಿಗೆ ಸೇರುತ್ತವೆ. ಇನ್ನು ವಿಲೀನ ಪ್ರಕ್ರಿಯೆಯಲ್ಲಿ ಪ್ರಾಂತೀಯ ಅಸ್ಮಿತೆಯೊಂದಿಗೇ ಒಕ್ಕೂಟ ವ್ಯವಸ್ಥೆಯೊಳಗೆ ವಿಲೀನಗೊಂಡು ತದನಂತರ ಭಾರತೀಯತೆಯನ್ನೇ ಒಪ್ಪಿಕೊಂಡು ರಾಷ್ಟ್ರೀಯತೆಯನ್ನು ಕಟ್ಟಿಕೊಳ್ಳದ ಉತ್ತರಪ್ರದೇಶ, ಬಿಹಾರದಂತಹ ರಾಜ್ಯಗಳು ಅಭಿವೃದ್ಧಿಯಲ್ಲಿ ಬಹಳಷ್ಟು ಹಿಂದುಳಿದಿರುವುದು ನಮ್ಮ ನಡುವಿನ ವಾಸ್ತವ.

ಇಲ್ಲಿ ಈಗ ಇನ್ನೊಂದು ಅಂಕಿ–ಅಂಶ ನಿಮ್ಮ ಮುಂದಿದೆ. ಇದರ ಪ್ರಕಾರ ಪ್ರಾದೇಶಿಕ ರಾಷ್ಟ್ರೀಯತೆಯನ್ನು ಕಟ್ಟಿಕೊಂಡ ಮತ್ತು ಕಟ್ಟಿಕೊಳ್ಳದ ರಾಜ್ಯಗಳಲ್ಲಿ ಶೈಕ್ಷಣಿಕ ಮಟ್ಟ ಹೇಗಿದೆ ಅನ್ನುವುದು ಸ್ಪಷ್ಟವಾಗಿ ಗುರುತಿಸಲಾಗಿದೆ. ಯಾವೆಲ್ಲ ರಾಜ್ಯಗಳು ಪ್ರಾದೇಶಿಕ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ಪೋಷಿಸಿಕೊಂಡು ಹೋಗುತ್ತಿವೆಯೊ ಆ ಎಲ್ಲ ರಾಜ್ಯಗಳು ಶೈಕ್ಷಣಿಕವಾಗಿ ಬಹಳ ಮುಂದುವರೆದಿದೆ. ಎಲ್ಲೆಲ್ಲ ಭಾರತೀಯತೆಯನ್ನು ಒಪ್ಪಿಕೊಂಡು ಪ್ರಾದೇಶಿಕ ರಾಷ್ಟ್ರೀಯತೆಯನ್ನು ಕಡೆಗಣಿಸಲಾಗಿದೆಯೊ ಅವೆಲ್ಲ ರಾಜ್ಯಗಳು ಶೈಕ್ಷಣಿಕವಾಗಿ ಬಹಳ ಹಿಂದುಳಿದಿವೆ. ಇಲ್ಲಿ ನಾವು ಅರ್ಥಮಾಡಿಕೊಳ್ಳಬೇಕಾದ ವಿಚಾರವೇನೆಂದರೆ, ಎಲ್ಲ ರಾಜ್ಯಗಳಲ್ಲೂ ಶೈಕ್ಷಣಿಕ, ಆರ್ಥಿಕ ಅಥವಾ ಆರೋಗ್ಯ ಕ್ಷೇತ್ರಗಳ ಮೇಲಿನ ನೀತಿ ನಿಯಮಗಳು ಒಂದೇ ಆಗಿರುತ್ತವೆ. ಹಾಗಿದ್ದು ಕೂಡ ಈ ರೀತಿಯ ವ್ಯತ್ಯಾಸಗಳು ಸಾಧ್ಯವಾಗುವುದು ನಮ್ಮ ಸಾಮಾಜಿಕ ಪರಿಕಲ್ಪನೆಗಳಿಂದ.




ಅದೇ ರೀತಿ ಆರೋಗ್ಯ ಕ್ಷೇತ್ರದಲ್ಲಿ ತೆಗೆದುಕೊಂಡರೆ ಪ್ರಾದೇಶಿಕ ರಾಷ್ಟ್ರೀಯತೆ ಹೆಚ್ಚಿರುವಲ್ಲಿ ಆರೋಗ್ಯದ ಮಟ್ಟವೂ ಸುಧಾರಿಸಿದೆ. ಜನರ ಆರೋಗ್ಯದ ಮೇಲಿನ ಕಾಳಜಿ ಹಾಗೂ ಅದಕ್ಕೆ ತೆಗೆದುಕೊಳ್ಳಬೇಕಾದ ಅಗತ್ಯತೆಗಳ ಮೇಲಿನ ಖರ್ಚುವೆಚ್ಚಗಳೂ ಅದಕ್ಕನುಗುಣವಾಗಿ ಹೆಚ್ಚಿವೆ. ಅದರರ್ಥ ಭಾರತೀಯತೆಯನ್ನು ಒಪ್ಪಿಕೊಂಡು ಮುಂದುವರಿದ ರಾಜ್ಯಗಳಿಗೆ ಹೋಲಿಸಿದರೆ ಪ್ರಾದೇಶಿಕ ರಾಷ್ಟ್ರೀಯತೆಯ

ಪರಿಕಲ್ಪನೆಯಿರುವ ರಾಜ್ಯಗಳಲ್ಲಿ ಆರೋಗ್ಯ ಕ್ಷೇತ್ರಗಳಲ್ಲೂ ಅತೀ ಹೆಚ್ಚಿನ ಸುಧಾರಣೆಗಳಾಗಿವೆ.

ಇಷ್ಟೆಲ್ಲ ವಿವರಿಸುವಾಗ ಅದು ಹೇಗೆ ಪ್ರಾದೇಶಿಕ ರಾಷ್ಟ್ರೀಯತೆಗೂ ಮತ್ತು ಅಭಿವೃದ್ಧಿಗೂ ಸಂಬಂಧ ಎನ್ನುವ ಒಂದು ಪ್ರಶ್ನೆ ಸಹಜವಾಗಿ ಹುಟ್ಟಬಹುದು. ನಮಗೆಲ್ಲ ಗೊತ್ತಿರುವ ಹಾಗೆ ದೇಶದೊಳಗಿನ ಎಲ್ಲ ರಾಜ್ಯಗಳಲ್ಲೂ ನ್ಯಾಯಾಂಗ, ಕಾರ್ಯಾಂಗ, ಶಾಸಕಾಂಗಗಳನ್ನು ಒಳಗೊಂಡ ಸರಕಾರ ಕಾರ್ಯನಿರ್ವಹಿಸುತ್ತಿರುತ್ತದೆ. ಈ ಸರಕಾರಗಳ ಎಲ್ಲ ನೀತಿ-ನಿಯಮಗಳು, ಯೋಜನೆಗಳು ಸಂವಿಧಾನದ ಅಡಿಯಲ್ಲಿ ಬರುತ್ತದೆ. ಪ್ರತಿಯೊಂದು ರಾಜ್ಯಗಳೂ ಸಾಮಾಜಿಕ ಸುಧಾರಣೆಯ ಸಲುವಾಗಿ ಪ್ರತಿಯೊಂದು ಕ್ಷೇತ್ರಗಳ ಅಭಿವೃದ್ಧಿಗೂ ಕೆಲಸ ಮಾಡಲೇಬೇಕಿರುತ್ತದೆ. ಹೀಗಿರುವಾಗ ಒಂದು ರಾಜ್ಯ ಹೆಚ್ಚು ಇನ್ನೊಂದು ಕಡಿಮೆ ಎನ್ನುವ ನೀತಿಯಂತೂ ಸಾಧ್ಯವಿಲ್ಲ. ಇಷ್ಟೆಲ್ಲ ಸರಿಸಮನಾದ ಆಡಳಿತ ವ್ಯವಸ್ಥೆಯಿದ್ದೂ ಪ್ರಾದೇಶಿಕ ರಾಷ್ಟ್ರೀಯತೆಯನ್ನು ಒಪ್ಪಿಕೊಂಡಿರುವ ರಾಜ್ಯಗಳು ಮುಂದುವರಿದಿದೆ ಎಂದರೆ ಅದಕ್ಕೆ ಅಲ್ಲಿನ ಜನರ ನಡುವಿನ ಭ್ರಾತೃತ್ವ ಭಾವ ಕೂಡ ಒಂದು ಕಾರಣವಾಗಿರಲು ಸಾಧ್ಯ. ಉದಾಹರಣೆಗೆ, ಜಾತಿ ಬಿಟ್ಟರೆ ನೇರ ಭಾರತೀಯತೆಯನ್ನು ತನ್ನ ಗುರುತೆಂದು ಒಪ್ಪಿಕೊಂಡು ನಡೆಯುತ್ತಿರುವ ಉತ್ತರಪ್ರದೇಶದಂತಹ ರಾಜ್ಯದಲ್ಲಿ ಒಬ್ಬ ವ್ಯಕ್ತಿ ತನ್ನನ್ನು ತಾನು ಅವಶ್ಯಕತೆ ಬಿದ್ದಾಗಲೆಲ್ಲ ತನ್ನ ಜಾತಿಯಿಂದ ಗುರುತಿಸಲ್ಪಡುತ್ತಾನೆ. ಅದು ಬಿಟ್ಟರೆ ಭಾರತೀಯತೆಯ ಭಾವ ಹುಟ್ಟುವುದು ಒಟ್ಟಾರೆ ದೇಶದ ವಿಚಾರವಾಗಿ ಮಾತನಾಡಬೇಕಾದ ಅಗತ್ಯತೆ ಬಿದ್ದಾಗಲಷ್ಟೆ. ಹೀಗಿರುವಾಗ ಅಲ್ಲಿ ಗ್ರಾಮ ಪಂಚಾಯತಿ ಮಟ್ಟದಲ್ಲಿ ಒಂದು ಯೋಜನೆ ಅನುಷ್ಠಾನಗೊಳಿಸುವ ಸಂದರ್ಭದಲ್ಲೂ ಕೂಡ ಆತ ತನ್ನ ಜಾತಿಯ ಜನರಿಗಷ್ಟೇ ಸೀಮಿತವಾಗುತ್ತಾನೆ ಅಥವಾ ಜಾತಿಯ ಆಧಾರದಲ್ಲಿ ಸ್ವಾರ್ಥಿಯಾಗಬಹುದು. ಜಾತಿ ಮೀರಿ ನಮಗೆಲ್ಲರಿಗೂ ಅಥವಾ ತನ್ನೂರಿನ ಜನರೆಲ್ಲರಿಗೂ ಒಳಿತಾಗಬೇಕೆನ್ನುವ ವಿಚಾರದಲ್ಲಿ ಯೋಚಿಸುವಂತಹ ಮನೋಭಾವನೆಯೇ ಹುಟ್ಟುವುದಿಲ್ಲ. ಹಾಗೊಂದು ಭಾವನೆ ಬೆಳೆಯುವಂತಹ ಪ್ರಾದೇಶಿಕತೆಯೇ ಅಲ್ಲಿರುವುದಿಲ್ಲ. ಹೀಗಾಗಿ ಒಟ್ಟಾರೆ ಅಭಿವೃದ್ಧಿಯತ್ತ ಸರಕಾರಕ್ಕೆ ಒತ್ತಡ ಹೇರಲು ಒಂದು ಶಕ್ತಿಯೇ ಇಲ್ಲದಂತಾಗಿದೆ. ಅದೇ ಪ್ರಾದೇಶಿಕ ರಾಷ್ಟ್ರೀಯತೆಯನ್ನು ಮುಂದಿಟ್ಟುಕೊಂಡಿರುವ ಕೇರಳ, ತಮಿಳುನಾಡಿನಂತಹ ರಾಜ್ಯಗಳಲ್ಲಿ ಒಟ್ಟಾರೆ ಅಭಿವೃದ್ಧಿಯ ಕಾರಣಕ್ಕೆ ಸರಕಾರವನ್ನು ಪ್ರಶ್ನಿಸಲು ನಾವೆಲ್ಲರೂ ತಮಿಳರು, ಕೇರಳಿಗರು ಅಥವಾ ಕನ್ನಡಿಗರು ಎನ್ನುವ ಭ್ರಾತೃತ್ವ ಭಾವವೊಂದಿದೆ ಮತ್ತದು ಜಾತಿ ಮೀರಿ ಅಭಿವೃದ್ಧಿಯನ್ನು ಬಯಸುತ್ತದೆ. ಆ ಕಾರಣಕ್ಕೆ ಇಲ್ಲಿನ ಸರಕಾರಗಳೂ ಆ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತರುತ್ತಿವೆ.

## ಸುಖ – ದುಃಖ

ಸುಖ ಸಿಗುವುದರಲ್ಲಲ್ಲ  
ಸಂತೋಷವಿರುವುದು,  
ಸುಖದ ಸಂತೋಷ ಕ್ಷಣಕಾಲ ಮಾತ್ರ  
ಆದರೆ ದುಃಖದ ನಂತರದ ಸಂತೋಷ  
ಅದುವೇ ಶಾಶ್ವತ

**ಶೌಕತ್ ಅಲಿ ಕಿಕ್ಕರೆ**  
ಮರ್ಕಜುಲ್ ಹಿದಾಯ ಕೊಟ್ಟಮುಡಿ

ಈಗ ಇಲ್ಲೊಂದು ಕುತೂಹಲಕಾರಿ ವಿಷಯ ನೋಡಿ. ಇದರ ಪ್ರಕಾರ ಸ್ವಾತಂತ್ರ್ಯಪೂರ್ವದಲ್ಲಿ ಅಂದರೆ ೧೮೯೧ರಿಂದ ೧೯೩೦ರ ವರೆಗಿನ ಅಂಕಿ-ಅಂಶಗಳನ್ನು ನೋಡುವುದಾದರೆ ಆಗಿನ್ನೂ ಪ್ರಾಂತ್ಯಗಳಾಗಿದ್ದ ಈಗಿನ ರಾಜ್ಯಗಳ ಅಭಿವೃದ್ಧಿಯು ಹೆಚ್ಚು ಕಡಿಮೆ ಒಂದೇ ಮಟ್ಟದಲ್ಲಿದ್ದವು. ೧೯೩೦ರ ನಂತರ ಒಕ್ಕೂಟ ವ್ಯವಸ್ಥೆಯ ಪರಿಕಲ್ಪನೆ ಹುಟ್ಟಿಕೊಂಡು ಚರ್ಚೆಗಳಾಗುತ್ತಿದ್ದ ಸಂದರ್ಭದಿಂದ ನಂತರದ ಅಂಕಿ-ಅಂಶಗಳನ್ನು ನೋಡಿದರೆ, ಪ್ರಾದೇಶಿಕ ರಾಷ್ಟ್ರೀಯತೆಯತ್ತ ಗಮನಹರಿಸಿದ ಕೇರಳದಲ್ಲಿ ಹೆಣ್ಣುಮಕ್ಕಳ ಶಿಕ್ಷಣದಲ್ಲಿ ಕ್ರಾಂತಿಯೇ ನಡೆದುಹೋಗಿದೆ. ಅಂತಹ ಕ್ರಾಂತಿಗೆ ಪ್ರಾದೇಶಿಕ ರಾಷ್ಟ್ರೀಯತೆಯೂ ಒಂದು ಕಾರಣವೆನ್ನುವುದು ಸತ್ಯ. ಅದೇ ಉತ್ತರಪ್ರದೇಶದಲ್ಲಿನ್ನೂ ಕೆಳಮಟ್ಟದಲ್ಲಿದೆ. ಇದೇ ರೀತಿ ಮಹಿಳೆ ಹಾಗೂ ಪುರುಷರ ಒಟ್ಟು ಶೈಕ್ಷಣಿಕ ಅಭಿವೃದ್ಧಿಯ ವಿಚಾರದಲ್ಲೂ ಕೇರಳ ಅತ್ಯಂತ ಮುಂದುವರಿದಿದ್ದರೆ, ಉತ್ತರಪ್ರದೇಶ ಬಹಳ ಹಿಂದುಳಿದಿದೆ. ಇನ್ನು ಭಾರತದ ಒಟ್ಟೂ ಪರಿಸ್ಥಿತಿ ಉತ್ತರಪ್ರದೇಶಕ್ಕಿಂತ ಕೊಂಚ ಮೇಲ್ಮಟ್ಟದಲ್ಲಿದೆಯಷ್ಟೆ.




Female Literacy (a)

Total Literacy (b)

ಈ ಎಲ್ಲ ಅಂಕಿ-ಅಂಶಗಳನ್ನು ವಿಶ್ಲೇಷಿಸಿದರೆ, ರಾಜ್ಯಗಳ ಬೆಳವಣಿಗೆಗೆ ಪ್ರಾದೇಶಿಕ ರಾಷ್ಟ್ರೀಯತೆ ಬಹಳವೇ ಮುಖ್ಯವಾಗುತ್ತದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲೆಲ್ಲ ಮೊದಲು ಅಭಿವೃದ್ಧಿ ಆಗಬೇಕಾದದ್ದು ಶೈಕ್ಷಣಿಕ ಮತ್ತು ಆರೋಗ್ಯ ಕ್ಷೇತ್ರಗಳಲ್ಲಿ. ಉತ್ತಮ ಶಿಕ್ಷಣ ಮತ್ತು ಆರೋಗ್ಯ ನೀತಿಗಳು ದೇಶದ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಗೆ ಪೂರಕವಾಗಿರುತ್ತವೆ ಎನ್ನುವುದು ಸಾರ್ವಕಾಲಿಕ ಸತ್ಯ. ಈ ಮೂಲಕ ದೇಶದ ಎಲ್ಲ ಸಾಮಾಜಿಕ ಅಭಿವೃದ್ಧಿಯ ನೀತಿಗಳನ್ನು ಸಶಕ್ತವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ. ಹಾಗಾಗಿ ಈ ರೀತಿಯಲ್ಲಿ ಬದಲಾವಣೆಗಳು ಆಗಬೇಕೆಂದರೆ ಪ್ರಾದೇಶಿಕ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ನಮ್ಮದಾಗಿಸಿಕೊಳ್ಳಬೇಕು. ಆ ಮೂಲಕ ಹೆಚ್ಚು ಹೆಚ್ಚು ಒಗ್ಗಟ್ಟಿನಿಂದ ಒಟ್ಟಾರೆ ಅಭಿವೃದ್ಧಿಯನ್ನು ವ್ಯವಸ್ಥೆಯಿಂದ ಕೇಳಿ ಪಡೆದುಕೊಳ್ಳುವಂತಹ ಸಶಕ್ತ ದನಿಯಾಗಬೇಕಿರುವುದು ಅತೀ ಅವಶ್ಯವೆನ್ನುವುದು ಈ ಎಲ್ಲ ಸಂಶೋಧನೆಗಳು ಮತ್ತೆ ಮತ್ತೆ ಹೇಳುತ್ತಿವೆ. ಎಲ್ಲ ಅಭಿವೃದ್ಧಿಗಳೂ ಪ್ರಾದೇಶಿಕ ರಾಷ್ಟ್ರೀಯತೆಯಿಂದಲೇ ಸಾಧ್ಯವೆನ್ನುವ ವಾದವಲ್ಲದಿದ್ದರೂ ಅಭಿವೃದ್ಧಿಯ ಪಥದತ್ತ ದಿಟವಾಗಿ ಹೆಜ್ಜೆಯಿಡಲು ಮತ್ತು ಗಟ್ಟಿ ದನಿಯಿಂದ ಕೇಳಿ ಪಡೆದುಕೊಳ್ಳಲು ಪ್ರಾದೇಶಿಕ ರಾಷ್ಟ್ರೀಯತೆ ಎನ್ನುವುದು ಅತೀ ಮುಖ್ಯವೆನ್ನುವುದು ಅಂಕಿ-ಅಂಶಗಳ ಮೂಲಕ ಸಾಬೀತಾಗಿದೆ.

ಆಕರ ಗ್ರಂಥ : How Solidarity Works for Welfare Subnationalism and Social Development in India by Prerna Singh

ಈ ಲೇಖನದಲ್ಲಿರುವ ಎಲ್ಲ ಚಿತ್ರಗಳನ್ನು ಈ ಪುಸ್ತಕದಿಂದ ಪಡೆಯಲಾಗಿದೆ.

**ಡಾ|| ಕೆ. ಎಸ್. ನಾಗೇಗೌಡ, ಪಲ್ಲವಿ ಇಡೂರು**  
ನಂ. ೧೫, ೬ನೇ ಮುಖ್ಯರಸ್ತೆ, ೨ನೇ ಬ್ಲಾಕ್, ಆರ್. ಟಿ. ನಗರ  
ಬೆಂಗಳೂರು – ೫೬೦ ೦೩೨  
email : pinmu1@gmail.com






### ಹುಲಿಯ ನೆತ್ತಿಗೆ ನೆರಳು

ನದೀಮ ಸನದಿ

**ಪುಟ : xxvi+೬೨=೮೮**
**ಬೆಲೆ : ರೂ. ೮೫/–**

**ಸಮಕಾಲಿನ ಪುಸ್ತಕ**
ಬೆಳಗಾವಿ ತಾ॥ ಮತ್ತು ಜಿ॥
೫೯೧೧೨೪

*ಇಲ್ಲಿ ಉದಯೋನ್ಮುಖ ಕವಿಯೊಬ್ಬನ ಮನದಾಳದ ಅನಿಸಿಕೆಗಳೆಲ್ಲ ಹಾಡಾಗಿ ಬಂದಂತೆ ಭಾಸವಾಗುತ್ತದೆ. ಕವಿ ಸಮಕಾಲೀನ ಸಮಾಜಕ್ಕೆ ಸ್ಪಂದಿಸುತ್ತಾನೆನ್ನುವುದು ಸತ್ಯವೆಂಬಂತೆ ನಿಖರವಾಗಿ ಇಂದಿನ ದಿನಮಾನದ ತಲ್ಲಣಗಳು ಇಲ್ಲಿ ಚಿತ್ರಿಸಲ್ಪಟ್ಟಿವೆ. ಯಾವುದಕ್ಕೆ ನಮಿಸಬೇಕು, ಯಾವುದಕ್ಕೆ ಸಿಡಿಯಬೇಕೆಂದು ಈ ಕವಿಗೆ ಗೊತ್ತು. ಇಂದಿನ ಸಮಸ್ಯೆಗಳನ್ನೆಲ್ಲ ಪ್ರಸ್ತಾಪಿಸಿ ಇದೇಕೆಂದು ಪ್ರಶ್ನಿಸುವ ಮನಸ್ಸೊಂದು ಇಲ್ಲಿದೆ. ಯಾಕೆ ಜಾತಿ – ಮತಗಳ ದ್ವೇಷ, ಏಕೆ ಹೃದಯ ವೈಶಾಲ್ಯವಿಲ್ಲ, ಕಿತ್ತಾಡುವ ಮನಸ್ಸುಗಳೇಕೆ ಸೃಷ್ಟಿಗೊಂಡಿವೆ ಎಂದೆಲ್ಲ ಪ್ರಶ್ನಿಸುತ್ತ ಯುವ ಕವಿ ಕಂಗಾಲಾಗಿದ್ದಾನೆ. ಗಿಡ ಮರಗಳು, ಬಣ್ಣಗಳು, ಪ್ರಾಣಿಪಕ್ಷಿಗಳು ಕೊನೆಗೆ ತಿಂಡಿ – ತಿನಿಸು – ಊಟ ಎಲ್ಲವೂ ಇಂದು ಮತಧಾರ್ಮಿಕ ಸಂಕೇತಗಳಾಗುತ್ತಿರುವುದನ್ನು ಗೇಲಿ ಮಾಡುತ್ತ "ಕಲ್ಲಂಗಡಿ ಹೊರಗೆ ಮುಸ್ಲಿಂ – ಒಳಗೆ ಹಿಂದೂ" ಎಂದು ಛೇಡಿಸುತ್ತ ವಿಷಯದ ಗಂಭೀರತೆಯನ್ನು ಮನಗಾಣಿಸುತ್ತಾನೆ. ಮಾನವ್ಯ ಕವಿಯೆಂದು ಹೆಸರು ಪಡೆದ ಶ್ರೀ ಬಿ. ಎ. ಸನದಿಯವರ ಕುಟುಂಬದಿಂದ ಬಂದ ಎಳೆಯ ಪ್ರತಿಭೆಯೊಂದು ಇಂತಹ ಕವಿತೆ ಬರೆದುದರಲ್ಲಿ ಆಶ್ಚರ್ಯವೇನಿಲ್ಲ; ಅದು ಜನ್ಮಜಾತ ಪ್ರತಿಭೆ. ಬದಲಿಸಲಾಗದ ಸೃಜನಶೀಲತೆ. ಕವಿತೆಗಳು ಹದಗೆಟ್ಟ ಇಂದಿನ ಸಮಾಜದ ಚಿತ್ರಣನೀಡಿ ಹೀಗೇಕಾಯ್ತೆಂದು ಮರುಗುತ್ತವೆ.*

### ಸ್ಪರ್ಧೆಯೋ ಸಹಕಾರವೋ

ಡಾ॥ ಮಹಾಬಲೇಶ್ವರ ರಾವ್

**ಪುಟ : ೬೨** **ಬೆಲೆ : ರೂ. ೮೦/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಸ್ಪರ್ಧೆ ! ಹೌದು, ಎಲ್ಲ ರಂಗಗಳಲ್ಲಿಯೂ ಇಂದು ಸ್ಪರ್ಧೆಗಳದೇ ಸಾಮ್ರಾಜ್ಯ. ಇದನ್ನು ನಾವೇ ಸೃಷ್ಟಿಸಿಕೊಂಡು ಅದರ ಕೆಟ್ಟ ಪರಿಣಾಮಗಳನ್ನು ರಾಜಕೀಯ–ಸಾಹಿತ್ಯ–ಕ್ರೀಡೆ ಮುಂತಾಗಿ ಎಲ್ಲ ಕಡೆಯೂ ಕಾಣುತ್ತಿದ್ದೇವೆ. ಇನ್ನೊಬ್ಬರ ಏಳಿಗೆ, ಸಹಜ ಪ್ರತಿಭೆ ಸಹಿಸದೆ ಅವರನ್ನು 'ಓವರ್‌ಟೇಕ್' ಮಾಡುವ ಪ್ರವೃತ್ತಿ ಹೆಚ್ಚಾಗಿದೆ. ಇನ್ನೊಬ್ಬನನ್ನು ಸೋಲಿಸಲು ಅಡ್ಡದಾರಿಗಳನ್ನು ಹಿಡಿಯಲು ಹಿಂಜರಿಯುವುದಿಲ್ಲ. ಹಿಂದಿನ ಚಕ್ರವರ್ತಿಗಳಂತೆ ಎಲ್ಲರನ್ನೂ ಮೆಟ್ಟಿ, ದಂಡಯಾತ್ರೆ ಗೈದು ಕಬಳಿಸಿ ಭೂಮಿಗೆ ತಾನೊಬ್ಬನೇ ಶ್ರೇಷ್ಠನಾಗುವ ಇಚ್ಛೆ ಅಥವಾ ದುರುದ್ದೇಶವನ್ನು ಮಹತ್ವಾಕಾಂಕ್ಷೆ ಎಂದು ಈ ದಿನಗಳಲ್ಲಿ ಕರೆಯಲಾಗಿದೆ. ಸ್ಪರ್ಧೆ ಪ್ರಾಥಮಿಕ ಶಾಲಾಹಂತದಲ್ಲಿ ಶಿಕ್ಷಣಕ್ಷೇತ್ರದಲ್ಲಿಯೇ ಇಂದು ಪೋಷಕ–ಶಿಕ್ಷಕರ ಮಾರ್ಗದರ್ಶನದಲ್ಲೇ ರಾಜಾರೋಷವಾಗಿ ನಡೆಯುತ್ತಿದೆ. ಇಂಥ ಮೌಲ್ಯಗಳನ್ನು ಎಳೆಯರ ಮನದಲ್ಲಿ ಬಿತ್ತಿದಾಗ, ನೀನು ಮೊದಲ ಸ್ಥಾನದಲ್ಲೆ ಇರಬೇಕೆಂದು ಪ್ರತಿಯೊಂದು ಮಗುವಿಗೂ ಒತ್ತಾಯಿಸಿದಾಗ ಸ್ಪರ್ಧೆ ತಾನಾಗಿಯೇ ಏರ್ಪಡುತ್ತದೆ. ಬಿತ್ತಿದಂತೆ ತಾನೇ ಬೆಳೆ ! ಸಹಪಾಠಿಗಳನ್ನೇ ಪ್ರತಿಸ್ಪರ್ಧಿಯೆಂದು ಗುರುತಿಸಿದಾಗ ಏನಾಗುತ್ತದೆ? ಸ್ನೇಹಮಯ ಸಂಬಂಧ ಎಳವೆಯಲ್ಲೇ ಕೊನೆಗೊಂಡು ಮುಂದೆ ಜೀವನದುದ್ದಕ್ಕೂ ಎಲ್ಲ ರಂಗಗಳಲ್ಲೂ ಸ್ಪರ್ಧೆಯೇ ವಿಜೃಂಭಿಸುತ್ತದೆ. ಎಂತಹ ಮುಂದಿನ ಪ್ರಜೆಗಳನ್ನು ಇಂದಿನ ಮಕ್ಕಳಲ್ಲಿ ಕಾಣಲು ನಾವು ಇಷ್ಟಪಡುತ್ತೇವೆ ಎಂಬುದನ್ನು ನಾವೇ ನಮ್ಮ ಹೆಗಲು ಮುಟ್ಟಿನೋಡಿಕೊಳ್ಳಬೇಕಷ್ಟೆ. ಸ್ನೇಹ ಸಂಬಂಧಗಳನ್ನು ಹಾಳುಗೆಡಹುವ ಇಂಥ ಸ್ಪರ್ಧೆ ಬೇಕೇ? ಆರೋಗ್ಯಕರ ಸ್ಪರ್ಧೆ ಇರಲೆಂದೂ ಸಹಕಾರಿ ಮನೋಭಾವ ಇರಲೆಂದೂ ಲೇಖಕರು ಆಶಿಸುತ್ತಾರೆ.*



### ಬುದ್ಧಿಶಕ್ತಿ ಒಂದಲ್ಲ, ಹಲವು !

ಡಾ॥ ಮಹಾಬಲೇಶ್ವರ ರಾವ್

**ಪುಟ : ೮೦** **ಬೆಲೆ : ರೂ. ೮೦/–**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಬೆಂಗಳೂರು – ೫೬೦ ೦೦೧

*ಮನುಷ್ಯನ ಬುದ್ಧಿಶಕ್ತಿಯ ಬಗೆಗೆ ಸಂಶೋಧನೆ ಮಾಡಿದ ಮನೋವಿಜ್ಞಾನಿಗಳಲ್ಲಿ ಹೊವರ್ಡ್ ಗಾರ್ಡ್ನರ್ ಹೆಸರು ಮೇಲ್ಪಂಕ್ತಿಯಲ್ಲಿ ನಿಲ್ಲುತ್ತದೆ. ಆತ ಪ್ರತಿಪಾದಿಸಿದ ಅಂಶಗಳಲ್ಲಿ ಮನುಷ್ಯರ ಬುದ್ಧಿಶಕ್ತಿ ಒಂದೇ ಅಲ್ಲ; ಬಹುವಿಧ ಬುದ್ಧಿಶಕ್ತಿಗಳಿವೆ ಎಂಬ ವಿಚಾರ ಪ್ರಧಾನವಾಗಿದ್ದು ಕೊನೆಗೆ ಒಂಬತ್ತು ಬಗೆಯ ಬುದ್ಧಿಶಕ್ತಿಗಳಿವೆಯೆಂದು ಹೆಸರಿಸಿದ್ದಾನೆ. ಮನೋವಿಜ್ಞಾನ ಕ್ಷೇತ್ರದಲ್ಲಿ ಹೊಸ ಚಿಂತನೆಯೊಂದನ್ನು ಹುಟ್ಟುಹಾಕಿ, ಹೊಸ ಅಲೆಯನ್ನೇ ಎಬ್ಬಿಸಿದ್ದಾನೆ. ಅದನ್ನು ಪ್ರಚುರಪಡಿಸಲು ಹಲವಾರು ಗ್ರಂಥಗಳನ್ನು ಬರೆದು ವಿವಿಧ ದೇಶಗಳಿಗೂ ಭೇಟಿಕೊಟ್ಟು ತನ್ನ ಸಿದ್ಧಾಂತದ ಬಗ್ಗೆ ಸಂಶಯದ ಪ್ರಶ್ನೆಗಳನ್ನೆತ್ತಿದವರಿಗೆ ಸಮರ್ಪಕ ಉತ್ತರಗಳನ್ನು ನೀಡಿದ್ದಾನೆ. ಅವೆಲ್ಲ ವಿವರಗಳು ಈ ಕೃತಿಯಲ್ಲಿವೆ. ಹಲವು ಗ್ರಂಥಗಳನ್ನು ಪರಾಮರ್ಶಿಸಿ ಗಾರ್ಡ್ನರ್ ಬಗ್ಗೆ ವಿವರವಾಗಿ ತಿಳಿದುಕೊಂಡು ಆತನ ಸಂಶೋಧನೆಯ ಬಗ್ಗೆ ನಿಜ ಸಂಗತಿಗಳನ್ನು ತಿಳಿದುಕೊಂಡು ಬರೆದಿರುವ ಈ ಕೃತಿಯು ನಮಗೆ ಹೊಸ ವಿಷಯವೊಂದನ್ನು ತಿಳಿಸುತ್ತ ಜ್ಞಾನ ವಿಸ್ತರಣೆಯ ದಿಸೆಯಲ್ಲಿ ಸಹಕಾರಿಯಾಗಿದೆ. ಬಹುವಿಧ ಬುದ್ಧಿಶಕ್ತಿಗಳಿದ್ದರೂ ಎಲ್ಲರ ಬುದ್ಧಿ ಮಟ್ಟವು (ಐಕ್ಯೂ) ಒಂದೇ ಯಾಕಿಲ್ಲ ಎಂಬ ಕುತೂಹಲಕಾರಿ ಪ್ರಶ್ನೆಗೂ ಗಾರ್ಡ್ನರ್ ಉತ್ತರಿಸಿದ್ದಾನೆ.*

### ಹೊಳಲ್ಕೆರೆಯ ನರಭಕ್ಷಕ ಮತ್ತು ಇತರ ಕೆನೆತ್ ಆಂಡರ್ಸನ್ ಕತೆಗಳು

ಅನು : ಸಾಕ್ಷಿ

**ಪುಟ : x+೨೬೪** **ಬೆಲೆ : ರೂ. ೨೬೫/–**



**ಆಕೃತಿ ಪುಸ್ತಕ**
ನಂ. ೩೧/೧, ೧೨ನೇ ಮುಖ್ಯರಸ್ತೆ, ೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು – ೫೬೦ ೦೧೦

*ಯಾವ ಕಾಲದಲ್ಲೇ ಆಗಲಿ, ನರಭಕ್ಷಕ ಹುಲಿ – ಚಿರತೆ ಎಂದರೇನೇ ಮೈ ಜುಮ್ಮೆನ್ನುವುದು ಸಹಜವೇ. ಅವನ್ನು ಕೊಲ್ಲದಿದ್ದರೆ ಮನುಷ್ಯ ಅವಕ್ಕೆ ಬಲಿಯಾಗುವುದು ನಿಶ್ಚಿತ. ಹಿಂದೆ ಬೇಟೆಗೆ ನಿಷೇಧವೇನೂ ಇರಲಿಲ್ಲ. ಇತ್ತೀಚೆಗೆ ಮೈಸೂರಲ್ಲಿ ಹಾವಳಿ ಎಬ್ಬಿಸಿದ ನರಭಕ್ಷಕವೊಂದನ್ನು ಸೆರೆಹಿಡಿಯಬೇಕಲ್ಲದೆ ಕೊಲ್ಲಬಾರದೆಂದು ಪ್ರಬಲ ವಿರೋಧವೊಂದು ವ್ಯಕ್ತವಾಗಿ ಕೊನೆಗೂ ಅದನ್ನು ಸೆರೆಹಿಡಿದರು. ಕೆನೆತ್ ಆ್ಯಂಡರ್ ಸನ್ ಎಂಬ ಪ್ರಸಿದ್ಧ ಬೇಟೆಗಾರ ನಮ್ಮ ದೇಶದಲ್ಲಿ ಸಾಕಷ್ಟು ಹುಲಿ ಚಿರತೆಗಳನ್ನು ನರಭಕ್ಷಕಗಳೆಂಬ ಕಾರಣಕ್ಕಾಗಿ ಬೇಟೆಯಾಡಿ ತನ್ನ ಬೇಟೆಯ ಅನುಭವಗಳನ್ನು ರೋಚಕವಾಗಿ ದಾಖಲಿಸಿ ಪ್ರಸಿದ್ಧ ಬರಹಗಾರನೂ ಆಗಿದ್ದಾನೆ. ಬೇಟೆಯಾಡುವುದು ಅದೂ ಹುಲಿ – ಚಿರತೆಗಳನ್ನು ಅಷ್ಟೇನೂ ಸುಲಭದ ಕೆಲಸವಲ್ಲ. ಪ್ರಾಣಾಪಾಯವಂತೂ ಅಡಿಗಡಿಗೆ ಕಾದಿರುತ್ತದೆ. ಈ ಕೃತಿಯು ಆತ ದಾಖಲಿಸಿದ ಬೇಟೆ ನೆನಪುಗಳನ್ನು ಆಂಗ್ಲಭಾಷೆಯಿಂದ ಕನ್ನಡಕ್ಕೆ ಅನುವಾದಿಸಲಾಗಿದ್ದು ಅಂದಿನ ಪರಿಸರವನ್ನು ನಿಚ್ಚಳವಾಗಿ ಕಾಣಿಸುತ್ತದೆ. ಹುಲಿಯನ್ನೆದುರಿಸಲು, ಅದೂ ಜೀವಂತವಾಗಿದ್ದಾಗ ಮೃತ್ಯುವನ್ನೆದುರಿಸಲು ಬೇಕಿದ್ದಷ್ಟು ಎಂಟೆದೆ ಬೇಕಾಗುತ್ತದೆ. ಆ ವಿವರಗಳನ್ನು ಓದುವುದೇ ಒಂದು ರೋಚಕ ಅನುಭವ. ಇಂದು ಪರಿಸರ ಪ್ರೇಮಿಗಳಿಂದಾಗಿ ಕಾಡಿನಲ್ಲಿ ಬೇಟೆಯೂ ನಿಷಿದ್ಧ, ಅಳಿವಿನಂಚಿನಲ್ಲಿರುವ ಪ್ರಾಣಿಗಳು ಸಹಜ ಸಾವನ್ನಲ್ಲದೆ ಯಾರೂ ಅವನ್ನು ಕೊಲ್ಲುವಂತಿಲ್ಲ. ಹಾಗಾಗಿ ಇನ್ನು ಮುಂದೆ ಇಂತಹ ಪುಸ್ತಕಗಳು ಬರಲಾರವು. ನಾವು ಅಂದಿನ ಕೃತಿಗಳನ್ನಷ್ಟೇ ಓದಿ ಬೇಟೆಗೆ ಬಲಿಯಾದ ಹುಲಿ – ಚಿರತೆಗಳಿಗೆ ಸಂತಾಪ ಪಡಬಹುದು.*

– **ಇಂದಿರಾ ಕುಮಾರಿ,** *ಬೆಂಗಳೂರು*

# ಗಾಂಧಿ ಗ್ರಹಿಕೆಯ ರಾಷ್ಟ್ರೀಯ ಚಳವಳಿಯೂ ರೈತರೊಂದಿಗೆ ನಡೆಸಿದ ಅನುಸಂಧಾನವೂ

ಗಾಂಧಿಯ ವಕಾಲತ್ತು ಹೆಚ್ಚು ಸ್ಫುಟಗೊಂಡುದು ೧೯೧೮ರಲ್ಲಿ ನಡೆದ ಗುಜರಾತ್‌ನ ಖೇಡಾ ಸತ್ಯಾಗ್ರಹದಲ್ಲಿ. ಬೆಳೆ ವೈಫಲ್ಯ ಮತ್ತು ಬೆಲೆ ಏರಿಕೆಯಿಂದ ಜರ್ಜರಿತರಾಗಿ ರೈತರು ಮಾಡಿದ ಕಂದಾಯ ಮಾಫಿಯ ಮನವಿಯನ್ನು ಸರ್ಕಾರ ತಿರಸ್ಕರಿಸಿದಾಗ ಪರಿಹಾರಕ್ಕೆ ಸಂವಿಧಾನಾತ್ಮಕ ಯತ್ನಗಳ ಮಾರ್ಗ ಮುಚ್ಚಿತು. ಆ ನಂತರವಷ್ಟೇ ಸತ್ಯಾಗ್ರಹದ ಪ್ರಯೋಗಕ್ಕೆ ಮುಂದಾದರು. ಹಾಗಾಗಿ ಗಾಂಧೀಜಿ ಈ ಅಸ್ತ್ರದ ಬಳಕೆಯನ್ನು ಅಗ್ಗಗೊಳಿಸದೆ ಅದರ ಮಹತ್ವ ಕಾಯ್ದುಕೊಂಡರು ಎಂಬುದು ಗಮನಾರ್ಹ. ಆದರೆ ಆಸಕ್ತಿಯ ಸಂಗತಿಯೆಂದರೆ ಖೇಡಾ ಮತ್ತು ಬಾರ್ಡೋಲಿ ರೈತರ ಹೋರಾಟಗಳಲ್ಲಿ ಗಾಂಧಿ ಸತ್ಯಾಗ್ರಹದ ಬೆನ್ನೆಲುಬಾಗಿದ್ದವರು ಸ್ಥಿತಿವಂತ ಪಟಿದಾರ ರೈತ ಮಾಲೀಕರು. ಆಸ್ತಿಯ ಮಾಲೀಕರಾಗಿ ಅವರಿಗೆ ಹಿಂಸಾ ಸ್ವಭಾವದ ಕ್ರಾಂತಿ ಒಗ್ಗುವಂತಹುದಾಗಿರಲಿಲ್ಲ.

'ನೂರೈವತ್ತು ಬಾಪು' ಮತ್ತು ವಸ್ತುಸ್ಥಿತಿಯ ಭಾರತ ಮುಖಾಮುಖಿಯಾಗಿವೆ. ವಿಷಾದವೆಂದರೆ ಇಂದು ಗಾಂಧೀಜಿಯ ನೆನಪು ಲೂಟಿಕೋರರಿಗೆ ಹಾಗೂ ಅರಾಷ್ಟ್ರೀಯವಾದಿಗಳಿಗೆ ಅಗ್ಗವಾಗಿರುವ ವರ್ತಮಾನದ ಸಂದರ್ಭ. ಈ ಹೊತ್ತು ತಾಂತ್ರಿಕ ಪ್ರಜಾತಂತ್ರದ ರಾಜಕಾರಣ ಮೇಲ್ಮೈ ಸಾಧಿಸಿದೆ. ಗಾಂಧಿ ಕನಸಿನ ಸ್ವತಂತ್ರ ಭಾರತದ ಅಧಿಕೃತ ಪಾಲುದಾರರಾದ ರೈತರ ಬದುಕು ಮೂರಾಬಟ್ಟೆಯಾಗಿದೆ. ಸಂವೇದನೆ ಕಳೆದುಕೊಂಡ ಅಧಿಕಾರಸ್ಥರು ಚರಿತ್ರೆಯೊಳಗಿನ ರೈತರು ಅನುಭವಿಸಿದ ಸಂಕಟವನ್ನೂ ಅದಕ್ಕೆ ನಾಯಕರು ತೋರಿದ ಪ್ರತಿಕ್ರಿಯೆಯನ್ನು ಓದುವ ಮೂಲಕ ಒಂದಿಷ್ಟು ವಿವೇಕ ಬೆಳೆಸಿಕೊಳ್ಳಲು ಸಾಧ್ಯವಿದೆ. ಹಾಗಾಗಿ ಈ ಲೇಖನದಲ್ಲಿ ಗಾಂಧೀಜಿ ರಾಷ್ಟ್ರೀಯ ಚಳವಳಿಗೆ ಜನಾಂದೋಲನದ ರೂಪ ತಂದುಕೊಡಲು ಯೋಚಿಸಿದಾಗ ಅವರು ಕೃಷಿ ಪ್ರಶ್ನೆಗಳೊಂದಿಗೆ ಆದ ಮುಖಾಮುಖಿ ಮತ್ತು ರೈತರೊಂದಿಗೆ ನಡೆಸಿದ ಅನುಸಂಧಾನವನ್ನು ಕುರಿತು ವಿವೇಚಿಸಲಾಗಿದೆ.

ಗಾಂಧಿಯವರಿಂದ ಭಾರತ ರಾಷ್ಟ್ರೀಯ ಚಳವಳಿಯ ರಂಗಪ್ರವೇಶ ಆದುದು ೧೯೧೫ರಲ್ಲಿ. ಆ ನಂತರವೇ ರೈತರ ಸಂಕಟವನ್ನು ರಾಷ್ಟ್ರೀಯ ಚೌಕಟ್ಟಿನೊಳಗೆ ಸೇರಿಸಿಕೊಳ್ಳುವ ಚರ್ಚೆ ಮಹತ್ವ ಪಡೆಯಿತು. ಗಾಂಧೀಜಿ ರಾಷ್ಟ್ರೀಯ ಚಳವಳಿಯ ಜವಾಬ್ದಾರಿಯ ನೊಗವನ್ನು ತಮ್ಮ ಹೆಗಲಿಗೇರಿಸಿ ಕೊಳ್ಳುವವರೆಗೂ ಅದರ ಚುಕ್ಕಾಣಿ ಹಿಡಿದಿದ್ದ ಕಾಂಗ್ರೆಸ್ ರೈತರನ್ನು ಒಳಗೊಳ್ಳದೆ ಅಲಕ್ಷಿಸಿದ್ದು ಏಕೆ ಎಂಬ ಪ್ರಶ್ನೆಗೆ ಈಗಾಗಲೇ ನಡೆದ ಸಾಕಷ್ಟು ಚರ್ಚೆ ಮತ್ತು ಉತ್ತರಗಳು ನಮ್ಮ ಮುಂದಿವೆ. ಅದಕ್ಕಿದ್ದ ಮಿತಿಯನ್ನು ಎರಡು ವಾದಗಳ ಮುಖೇನ ನಿರ್ವಚಿಸಿಕೊಳ್ಳಬಹುದು. ಗಾಂಧಿ ಪ್ರವೇಶಕ್ಕೆ ಮುನ್ನ ಕಾಂಗ್ರೆಸ್ಸಿನ ವಿದ್ಯಾವಂತ ಮಧ್ಯಮವರ್ಗವು ರೈತರನ್ನು ಪ್ರತ್ಯೇಕ ಘಟಕವಾಗಿ ನೋಡದೆ ಇಡಿಯಾಗಿ ಭಾರತದ ಆರ್ಥಿಕ ವಿಮೋಚನೆಯನ್ನು ತನ್ನ ಆದ್ಯತೆಯಾಗಿಸಿಕೊಂಡಿತ್ತು. ಇಲ್ಲದಿದ್ದರೆ ಎದುರುಗೊಳ್ಳಬಹುದಿದ್ದ ವರ್ಗಸಂಘರ್ಷದಂತಹ ಅನಪೇಕ್ಷಿತ ಸಂದಿಗ್ಧವನ್ನು ಮೇಲೆಳೆದುಕೊಳ್ಳಬೇಕಾಗುತ್ತದೆಂದು ಅದು ಭಾವಿಸಿತ್ತು. ರಾಷ್ಟ್ರೀಯ ಚಳವಳಿಯ ಬೂರ್ಜ್ವಾ ನಾಯಕತ್ವ ಇಂತಹದೊಂದು ವಿದ್ಯಮಾನವನ್ನು ನಾಜೂಕಾಗಿ ನಿಭಾಯಿಸುವ ತಂತ್ರಗಾರಿಕೆಯನ್ನು ಚರಿತ್ರೆಯ ಅನುಭವದಿಂದ ಕಂಡುಕೊಂಡಿತ್ತು. ಅಲ್ಲದೆ ಆ ಹೊತ್ತಿಗಾಗಲೇ ಸಮಾಜದ ಕೆನೆಪದರ ಆಶಯಗಳ ರಕ್ಷಾಕವಚವೊಂದನ್ನು ನಿರ್ಮಿಸಿಕೊಳ್ಳುವಲ್ಲಿಯೂ ಯಶಸ್ವಿಯಾಗಿತ್ತು. ಇಂತಹ ಸನ್ನಿವೇಶದಲ್ಲಿ ಗಾಂಧಿಯವರ ಚಿಂತನೆ ಪ್ರವೇಶ ಪಡೆಯಿತು; ಹಾಗೂ ಜಾಣತನದ ಅಸಾಮಾಜಿಕ ಧೋರಣೆಯನ್ನು ಅದು ತಿರಸ್ಕರಿಸಿತು. ತದನಂತರದ ದಿನಗಳಲ್ಲಿ ರೈತರು ಮತ್ತು

**ಡಾ॥ ತಿಮ್ಮನಹಳ್ಳಿ ವೇಣುಗೋಪಾಲ್**



ಗಣ್ಯ ಕಾಂಗ್ರೆಸ್ಸಿಗರ ಮಧ್ಯೆಯ ಕಂದಕವನ್ನು ಮುಚ್ಚಲು ಗಾಂಧಿ ನಡೆಸಿದ ಯತ್ನ ಕುತೂಹಲಕಾರಿಯಾಗಿದೆ. ಇದರರ್ಥ ಅವರು ರೈತರಿಗೆ ಕ್ರಾಂತಿಕಾರಿ ಆರ್ಥಿಕ ಕಾರ್ಯಕ್ರಮಗಳ ಭರವಸೆ ನೀಡಿದರೆಂದಲ್ಲ. ಅದಲ್ಲದೆಯೂ ಈ ತೊಡಕನ್ನು ನಿವಾರಿಸಿಕೊಳ್ಳುವಲ್ಲಿ ತೋರಿದ ಸಮಯೋಚಿತ ಸಂಯಮ ಗಾಂಧಿಯ ಜಾಣ್ಮೆಗೆ ಉತ್ತಮ ನಿದರ್ಶನವಾಗಿದೆ.

ರೈತರು ಮತ್ತು ಜಮೀನ್ದಾರರು ಪರಸ್ಪರ ಸಂಘರ್ಷಗೊಳ್ಳುವ ವಿಭಿನ್ನ ಆಶೋತ್ತರಗಳನ್ನು ಒಂದು ತೆಕ್ಕೆಗೆ ತರುವ ಗಾಂಧಿಯ ಪ್ರಯತ್ನಗಳಿಗೆ ೧೯೧೭ರ ಚಂಪಾರಣ್, ೧೯೧೮ರ ಖೇಡಾ ಮತ್ತು ೧೯೨೮ರ ಬಾರ್ಡೋಲಿ ಚಳವಳಿಗಳು ಉತ್ತಮ ಉದಾಹರಣೆಯಾಗಬಲ್ಲವು. ಇವು ವಸಾಹತು ವಿರೋಧಿ ಹೋರಾಟಕ್ಕೆ ರೈತರನ್ನು ಸಜ್ಜುಗೊಳಿಸುವ ಪೂರ್ವ ತಯಾರಿಗಳಂತಿದ್ದು, ಇವೆಲ್ಲವು ಭೂನಿಯಂತ್ರಣ ಮತ್ತು ವರ್ಗ ಸಂಬಂಧವನ್ನು ಸ್ಪರ್ಶಿಸದ ಎಚ್ಚರಿಕೆಯ ಆಯ್ಕೆಗಳಾಗಿದ್ದವು. ಚಳವಳಿಯು ಸರ್ಕಾರಕ್ಕೆ ಕರನಿರಾಕರಣೆಯಂತಹ ಮಿತಬೇಡಿಕೆಗೆ ಸೀಮಿತವಾದುದರಿಂದ ವರ್ಗಸಂಘರ್ಷಕ್ಕೆ ಎಡೆಗೊಡಲಿಲ್ಲ. ಇಲ್ಲಿ ಗಾಂಧೀಜಿ ಬಳಸಿದ ಡಿಪ್ಲೋಮಸಿ ಬೆರಗು ಹುಟ್ಟಿಸುತ್ತದೆ. ಗಾಂಧಿ ಗ್ರಹಿತ ಇಂತಹ ರೈತ ರಾಷ್ಟ್ರೀಯತೆಗೆ ಉದಾರವಾದಿ ಗುಣವಿದೆ. ಅದರ ಮಿಲಿಟೆಂಟ್ ಗುಣಸ್ವಭಾವವನ್ನು ಡೈಲ್ಯೂಟ್ ಮಾಡಿರುವುದು ಅವರ ಗ್ರಹಿತ ರಾಷ್ಟ್ರವಿಮೋಚನೆಯ ಆದರ್ಶಕ್ಕೆ ಅನುಗುಣವಾಗಿತ್ತು. ಇಂತಹ ದೃಷ್ಟಿಕೋನವು ರಾಷ್ಟ್ರವಿಮೋಚನೆಯ ಚುಕ್ಕಾಣಿ ಹಿಡಿಯುವ ನಾಯಕನೊಬ್ಬನಿಗೆ ಇರುವ ಜರೂರತ್ತೂ ಕೂಡ ಆಗಿತ್ತು. ಗಾಂಧಿಯವರ ಈ ಧೋರಣೆ ರಚನಾತ್ಮಕ ಕಾರ್ಯಕ್ರಮಗಳ ಮೂಲಕ ಕಾಂಗ್ರೆಸ್‌ಗೆ ಅಗತ್ಯವಿದ್ದ ಸುಧಾರಣಾವಾದಿ ಗುಣವನ್ನು ಮತ್ತಷ್ಟೂ ಖಾತರಿಗೊಳಿಸಿತು. ಇದನ್ನು 'ವರ್ಗಸಂಘರ್ಷಕ್ಕೆ ಬದಲು ವರ್ಗಸಾಮರಸ್ಯ' ಎಂದು ವ್ಯಾಖ್ಯಾನಿಸಬಹುದಾಗಿದೆ.

ಸಕಾರಾತ್ಮಕ ಪ್ರತಿರೋಧ ಭಾರತದ ರಾಜಕೀಯಕ್ಕೆ ಗಾಂಧಿ ಪರಿಚಯಿಸಿದ ನವೀನ ಮಾದರಿಯದಾಗಿತ್ತು. ದಕ್ಷಿಣ ಆಫ್ರಿಕಾದಲ್ಲಿ ನಡೆದ ಅದರ ಪ್ರಯೋಗದ ಪರಿಣಾಮವನ್ನು ಮತ್ತಷ್ಟೂ ಖಚಿತಪಡಿಸಿದುದು ಭಾರತದಲ್ಲಿ ಬ್ರಿಟಿಷ್ ಪ್ಲಾಂಟರುಗಳು ಚಂಪಾರಣ್ ನೀಲಿ ಬೆಳೆಗಾರ ರೈತರ ಮೇಲೆ ಎಸಗುತ್ತಿದ್ದ ದಬ್ಬಾಳಿಕೆಯನ್ನು ಪ್ರಶ್ನಿಸುವುದರ ಮೂಲಕ. ಚಳವಳಿ ಬೆಳೆದಂತೆ ನೀಲಿ ಬೆಳೆಗಾರ ರೈತರ ಮನೋಭೂಮಿಕೆಗೆ ಪ್ರವೇಶಿಸಲು ಸಾಧ್ಯವಾಯಿತಾದರೂ ನೀಲಿ ಕಾರ್ಖಾನೆಗಳು ಮತ್ತು ಬಿಳಿಯ ಪ್ಲಾಂಟರುಗಳ ಮೇಲೆ ಅವರು ಎಸಗಿದ ಕೃತ್ಯಗಳ ಮೇಲೆ ನಿಯಂತ್ರಣ ಪಡೆಯಲು ಸಾಧ್ಯವಾಗಲಿಲ್ಲ. ಆದರೆ ಇದು ಗಾಂಧೀಜಿಗೆ ವಸಾಹತು ಆಡಳಿತದ ಕೇಡಿಗತನ ಮತ್ತು ಪ್ರತಿಷ್ಠೆಯ ಧೋರಣೆಯನ್ನು ಹೇಗೆ ಪ್ರತಿರೋಧಿಸಿ ಮಣಿಸಬಹುದೆಂಬುದನ್ನು ಕಲಿಸಿತು. ತತ್ಪರಿಣಾಮವಾಗಿ, ೧೯೧೭ರ ಚಂಪಾರಣ್ ಅಗ್ರೇರಿಯನ್ ಬಿಲ್ ಜಾರಿಗೊಂಡು ಕಡ್ಡಾಯವಾಗಿ ನೀಲಿಬೆಳೆ ಬೆಳೆಯಬೇಕೆಂಬ ತಿಂಕಾಥಿಯ ಕಟ್ಟುಪಾಡಿನಿಂದ ರೈತರನ್ನು ಪಾರುಮಾಡಿತು. ಇದು ಗಾಂಧೀಜಿಯ ರೈತಪರ ವ್ಯಕ್ತಿತ್ವವನ್ನು ಬೆಳಕಿಗೆ ತಂದಿತಲ್ಲದೆ ಸ್ವಾತಂತ್ರ್ಯಗಳಿಸಲು ಅವಿಶ್ರಾಂತ ಹೋರಾಟಕ್ಕೆ ನಾಂದಿಯಾಡಿತು.

ಗಾಂಧಿಯ ವಕಾಲತ್ತು ಹೆಚ್ಚು ಸ್ಫುಟಗೊಂಡುದು ೧೯೧೮ರಲ್ಲಿ ನಡೆದ ಗುಜರಾತ್‌ನ ಖೇಡಾ ಸತ್ಯಾಗ್ರಹದಲ್ಲಿ. ಬೆಳೆ ವೈಫಲ್ಯ ಮತ್ತು ಬೆಲೆ ಏರಿಕೆಯಿಂದ ಜರ್ಜರಿತರಾಗಿ ರೈತರು ಮಾಡಿದ ಕಂದಾಯ ಮಾಫಿಯ ಮನವಿಯನ್ನು ಸರ್ಕಾರ ತಿರಸ್ಕರಿಸಿದಾಗ ಪರಿಹಾರಕ್ಕೆ ಸಂವಿಧಾನಾತ್ಮಕ ಯತ್ನಗಳ ಮಾರ್ಗ ಮುಚ್ಚಿತು. ಆ ನಂತರವಷ್ಟೇ ಸತ್ಯಾಗ್ರಹದ ಪ್ರಯೋಗಕ್ಕೆ ಮುಂದಾದರು. ಹಾಗಾಗಿ ಗಾಂಧೀಜಿ ಈ ಅಸ್ತ್ರದ ಬಳಕೆಯನ್ನು ಅಗ್ಗಗೊಳಿಸದೆ ಅದರ ಮಹತ್ವ ಕಾಯ್ದುಕೊಂಡರು ಎಂಬುದು ಗಮನಾರ್ಹ. ಆದರೆ ಆಸಕ್ತಿಯ ಸಂಗತಿಯೆಂದರೆ ಖೇಡಾ ಮತ್ತು ಬಾರ್ಡೋಲಿ ರೈತರ ಹೋರಾಟಗಳಲ್ಲಿ ಗಾಂಧಿ ಸತ್ಯಾಗ್ರಹದ ಬೆನ್ನೆಲುಬಾಗಿದ್ದವರು ಸ್ಥಿತಿವಂತ ಪಟಿದಾರ ರೈತ ಮಾಲೀಕರು. ಆಸ್ತಿಯ ಮಾಲೀಕರಾಗಿ ಅವರಿಗೆ ಹಿಂಸಾ ಸ್ವಭಾವದ ಕ್ರಾಂತಿ ಒಗ್ಗುವಂತಹುದಾಗಿರಲಿಲ್ಲ.

ಚಂಪಾರಣ್ ಮತ್ತು ಖೇಡಾ ಸತ್ಯಾಗ್ರಹಗಳ ಯಶಸ್ಸಿನಿಂದ ಉತ್ತೇಜಿತರಾದ ಗಾಂಧಿ ಭಾರತದ ಬಿಡುಗಡೆಯ ಹೋರಾಟಕ್ಕೆ ರೈತರ ಪಾಲ್ಗೊಳ್ಳುವಿಕೆಯ ಅನಿವಾರ್ಯತೆಯನ್ನು ಮತ್ತಷ್ಟೂ ಖಚಿತಪಡಿಸಿಕೊಂಡರು. 'ಸ್ವರಾಜ್ಯ ಗಳಿಕೆಯು ಕೃಷಿಕರ ಮೇಲೆ ನಿಂತಿದೆ; ಅವರು ಸಹಾಯ ನೀಡದಿದ್ದರೆ ಅದು ಸಾಧ್ಯವಾಗದು' ಎಂದು ಗಾಂಧೀಜಿ ಕಲ್ಕತ್ತಾ ವರ್ತಕರಿಗೆ ೧೯೨೦ರಲ್ಲಿ ಹೇಳಿದ ಕಿವಿಮಾತು ಗಮನಾರ್ಹವಾದುದು.

ಬೇಡಿಕೆಯ ಸಫಲತೆಗಾಗಿ ಹಿಂಸಾ ಮಾರ್ಗವನ್ನು ಸುತರಾಂ ಒಪ್ಪದ ಗಾಂಧೀಜಿಗೆ ರೈತರ ಅತೃಪ್ತಿಯು ಆಸ್ಫೋಟದ ರೂಪ ಪಡೆಯದಂತೆ ತಡೆಯುವ ಸವಾಲೂ ಇತ್ತು. ಹಾಗಾಗಿಯೇ ೧೯೨೧-೨೨ರ ಅಸಹಕಾರ ಚಳವಳಿಯಲ್ಲಿ ಹಿಂಸೆಯೊಂದಿಗೆ ತಳಕುಹಾಕಿಕೊಂಡಿದ್ದ ಕಿಸಾನ್ ಚಳವಳಿಗಳಾದ ಮಾಪ್ಳರೈತರ ಬಂಡಾಯ, ರಂಪಾ ಆದಿವಾಸಿಗಳ ಬಂಡಾಯ ಹಾಗೂ ಚೌರಿಚೌರ ಘಟನೆಗಳನ್ನು ಅರಗಿಸಿಕೊಳ್ಳುವುದು ಅವರಿಗೆ ಸಾಧ್ಯವಿರಲಿಲ್ಲ. ಆಗಿನ್ನೂ ಜನಾಂದೋಲನದ ರೂಪ ಪಡೆಯುತ್ತಿದ್ದ ರಾಷ್ಟ್ರೀಯ ಚಳವಳಿಗೆ ಧಕ್ಕೆಯಾಗದಂತೆ ಎಚ್ಚರ ವಹಿಸಿದ ಅವರು ಅಸಹಕಾರ ಚಳವಳಿ ಮತ್ತು ಕಿಸಾನ್ ಚಳವಳಿಗಳು ಬೇರೆ ಬೇರೆ ಎಂದು ಪ್ರತಿಪಾದಿಸುವ ಮೂಲಕ ತಾವು ವ್ಯಾಖ್ಯಾನಿಸಿದ ಸತ್ಯಾಗ್ರಹದ ಪಾವಿತ್ರ್ಯ ಕಾಯ್ದುಕೊಳ್ಳಲು ಯತ್ನಿಸಿದರು. ಹಾಗಾಗಿಯೇ, ಕಾಂಗ್ರೆಸ್ ಮತ್ತು ಅಸಹಕಾರ ಚಳವಳಿಯಿಂದ ಭೀತರಾಗದಂತೆ ಜಮೀನ್ದಾರರಿಗೆ ಭರವಸೆಯನ್ನೂ ನೀಡಿದರು.

೧೯೨೮ರ ಬಾರ್ಡೋಲಿ ಸತ್ಯಾಗ್ರಹ ಗಾಂಧಿ ಗ್ರಹಿಕೆಯ ರೈತಭಾರತವನ್ನು ತಿಳಿಯಲು ಮತ್ತಷ್ಟು ಸಹಕಾರಿಯಾಗಬಲ್ಲದು. ಭೂಕಂದಾಯ ಏರಿಕೆ ವಿರೋಧಿಸಿ ನಡೆದ ಈ ಚಳವಳಿಯು ಕೃಷಿ ಸಂಕಟವನ್ನು ಮತ್ತಷ್ಟು ರಾಷ್ಟ್ರೀಯವಾದಿ ರಾಜಕೀಯ ಪ್ರತಿಭಟನೆಯ ಚೌಕಟ್ಟಿಗೆ ತರುವಲ್ಲಿ ದಾಪುಗಾಲು ಹಾಕಿತು. ಗ್ರಾಮೀಣ ಸಮಾಜದ ಪರಸ್ಪರ ವಿರೋಧಿ ಜನವರ್ಗಗಳ ಐಕ್ಯತೆಯನ್ನು ರಚನಾತ್ಮಕ ಕಾರ್ಯಕ್ರಮಗಳ ಸನ್ನೆಯಿಂದ ಮುಂದೊತ್ತಬಹುದೆಂಬ ಅವರ ನಂಬಿಕೆಯನ್ನು ಖಾತರಿಪಡಿಸಿತು. ಇಲ್ಲಿಯೂ ಮುಂದುವರಿದ ವರ್ಗ ಸಂಯೋಜನೆಯ ಕಾರ್ಯ ತಂತ್ರಕ್ಕೆ ಗಾಂಧೀಜಿಗೆ ಸಾಥ್ ಕೊಟ್ಟವರು ಸರ್ದಾರ್ ಪಟೇಲರು. ಇಂತಹ ಸಂಯೋಜನೆ ಇಲ್ಲದೆ ವಸಾಹತು ವಿರೋಧಿ ಹೋರಾಟ ಯಶಸ್ವಿಯಾಗದು ಎಂದು ನಂಬಿದ ಕಾಂಗ್ರೆಸ್‌ನೊಳಗಿನ ಬಲಪಂಥೀಯ ವಾದಕ್ಕೆ ಪುಷ್ಟಿ ನೀಡಿತು. ಲೇವಾದೇವಿಯು ಗೇಣಿದಾರನೊಂದಿಗೆ ನೀರಿನಲ್ಲಿ ಬೆರೆತ ಹಾಲಿನಂತೆ ಅಭೇದ್ಯ ಎಂದ ಪಟೇಲರ ವ್ಯಾಖ್ಯಾನದ ವಿವರಣೆ ಲಂಬಾಕಾರದ ಐಕ್ಯತೆಯ ಪರಿಕಲ್ಪನೆಯನ್ನು ಸಾಧ್ಯವಾಗಿಸಿತು. ಖೇದುತ್ ಮಹತ್ವವನ್ನು ಬಿಂಬಿಸುವಂತೆ ಕಂಡರೂ ಈ ಓಲೈಕೆಯ ಹಿಂದೆ ಇದ್ದುದು ಯಥಾಸ್ಥಿತಿಯನ್ನು ಸ್ಥಿರೀಕರಿಸುವುದೇ ಆಗಿತ್ತು. ಬ್ರಿಟಿಷ್ ವಸಾಹತು ವಿರುದ್ಧದ ಹೋರಾಟಕ್ಕೆ ಅಗತ್ಯವಾಗಿದ್ದ ಇಂತಹ ನಂಬಿಕೆಯನ್ನು ಗಾಂಧೀಜಿಯ ರಾಜಕೀಯ ನೈತಿಕತೆ ಮತ್ತಷ್ಟೂ ಬಲಪಡಿಸಿತು. ಇದರ ಒಟ್ಟು ಪರಿಣಾಮವೆಂದರೆ ವರ್ಗಪ್ರಜ್ಞೆಯ ಹುಟ್ಟಿಗೆ ತೊಡಕಾದುದು.

ಆದರೆ ಮೂವತ್ತರ ದಶಕದ ಕೊನೆಯ ಹೊತ್ತಿಗೆ ಪರಿಸ್ಥಿತಿ ಪಡೆದ ಹಲವು ತಿರುವುಗಳಿಂದಾಗಿ ಗಾಂಧೀಜಿ ಕೂಡ ಕ್ರಾಂತಿಕಾರಿ ಕಾರ್ಯಕ್ರಮದ ದಿಕ್ಕಿನಲ್ಲಿ ಯೋಚಿಸಿದರು. ಕಾಂಗ್ರೆಸ್ಸಿನ ಒಳಗೆ ಬಲಗೊಳ್ಳುತ್ತಿದ್ದ ಸಮಾಜವಾದಿ ಆಶಯಗಳು, ರೈತರಾಷ್ಟ್ರೀಯತೆಯ ಮೂಸೆಯಲ್ಲಿ ಒಸರುತ್ತಿದ್ದ ಪುರೋಗಾಮಿ ಧೋರಣೆಗಳು, ಕಿಸಾನ್‌ಸಭಾ ತರುತ್ತಿದ್ದ ಸತತ ಒತ್ತಾಯ ಇಂತಹ ಒಂದಷ್ಟು ವಿದ್ಯಮಾನಗಳು ೧೯೩೭ರ ಹೊತ್ತಿಗೆ ಗಾಂಧೀಜಿ ಮತ್ತು ಕಾಂಗ್ರೆಸ್ ರೈತಪರ ಇನ್ನಷ್ಟು ಕ್ರಾಂತಿಕಾರಿ ಕಾರ್ಯಕ್ರಮಗಳ ದಿಕ್ಕಿನಲ್ಲಿ ಸಾಗುವಂತೆ ಮಾಡಿದವು. ಅದರ ಫಲಶ್ರುತಿಯೇ ಫೈಜ್‌ಪುರ ಕೃಷಿಕ ಗೊತ್ತುವಳಿ. ೧೯೪೨ರಲ್ಲಿ ಉಳುವವನಿಗೆ ಜಮೀನು ಸೇರಬೇಕೆಂದು ಹೇಳುವ ಗಾಂಧೀಜಿಯ ಧೋರಣೆಯಲ್ಲಿ ಗ್ರೇಟ್‌ಲೀಪ್ ಕಾಣಬಹುದು. ಟ್ರಸ್ಟಿಶಿಪ್ ಬಗೆಗೆ ತಮಗಿದ್ದ ಒಲವನ್ನು ಪಕ್ಕಕ್ಕಿರಿಸಿ ಉಳುವವನಿಗೆ ಜಮೀನು ಸೇರಬೇಕೆಂಬ ಬಗ್ಗೆ ಖಚಿತ ನಿಲುವು ತಳೆದಿದ್ದರು. ಅಮೆರಿಕ ಪತ್ರಕರ್ತ ಲೂಯಿಫಿಷರ್‌ಗೆ ಅದೇ ವರ್ಷ ನೀಡಿದ ಸಂದರ್ಶನವೊಂದರಲ್ಲಿ 'ಭೂಮಾಲೀಕರು ತಮ್ಮ ಜಮೀನು ಬಿಟ್ಟುಕೊಡದಿದ್ದರೆ ರೈತರು ಖುದ್ದು ಅದನ್ನು ಕಸಿದುಕೊಳ್ಳುವಂತೆ ಪ್ರೇರೇಪಿಸುತ್ತೇನೆ' ಎನ್ನುವ ಮೂಲಕ ಸಮಯಕ್ಕಾಗಿ ಕಾಯುತ್ತಿದ್ದ ತಮ್ಮೊಳಗಿನ ಬಂಡುಕೋರ ಗಾಂಧಿಯನ್ನು ಹೊರಹಾಕಿದ್ದರು. ಹೌದು, ಇಂದು ನವಸಾಮ್ರಾಜ್ಯಶಾಹಿಯ ಮೃತ್ಯುಪಾಶಕ್ಕೆ ಸಿಲುಕಿರುವ ವರ್ತಮಾನದ ರೈತಭಾರತ ತನ್ನ ಬಿಡುಗಡೆ ಬಯಸಿ ಗಾಂಧಿ ಎಂಬ ಸಂಜೀವಿನಿಗಾಗಿ ಕಾಯುತ್ತಿದೆ!!

**ಡಾ॥ ತಿಮ್ಮನಹಳ್ಳಿ ವೇಣುಗೋಪಾಲ್**
ಇತಿಹಾಸ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಸಿರಾ – ೫೭೨ ೧೩೭, ತುಮಕೂರು ಜಿಲ್ಲೆ
email : thimmanahallivenugopal@gmail.com



# ಪ್ರಿಯ ಮ್ಯಾರಿಲಿನ್

*(೧೯೫೦ರ ದಶಕದಲ್ಲಿ ಅಮೆರಿಕದ ಖ್ಯಾತ ಲೇಖಕನೊಬ್ಬ (ಜಾನ್ ಸ್ಟೈನ್ ಬೆಕ್) ಪ್ರಖ್ಯಾತ ನಟಿಯೊಬ್ಬಳಿಗೆ (ಮ್ಯಾರಿಲಿನ್ ಮನ್ರೊ) ಅವಳ ಭಾವಚಿತ್ರವನ್ನು ಕಳಿಸಲು ಕೇಳಿ ಬರೆದ ಪತ್ರದ ಸುತ್ತ ಹೆಣೆದಿರುವ ಕಥೆ)*

**ಮೊ**ನ್ನೆ ಏನೋ ಕೋಪದಿಂದ ನನ್ನ ಪತ್ನಿ ಒಂದು ಸೂಟಕೇಸಿನಲ್ಲಿದ್ದ ನನ್ನ ಹಳೆಯ ವಸ್ತುಗಳನ್ನೆಲ್ಲಾ ಗರಾಜಿನಲ್ಲಿ ಬಿಸಾಕಿದ್ದಳು. ಅಲ್ಲಿ ಹೋಗಿ ನೋಡಿದಾಗ ಎಲ್ಲ ಚೆಲ್ಲಾಪಿಲ್ಲಿ ಬಿದ್ದಿದ್ದವು: ನನ್ನ ತಂದೆಯ ಒಡೆದ ಕಾಫಿ ಮಗ್, ಅವರ ಮುರಿದ ಟೆನಿಸ್ ರಾಕೆಟ್, ಅವರು ಬರೆದಿದ್ದ ಸಮಾಜಶಾಸ್ತ್ರದ ಪುಸ್ತಕ, ಶಾಲೆಯಲ್ಲಿದ್ದಾಗ ಅಮ್ಮ ಹಾಕಿಕೊಟ್ಟಿದ್ದ ಸ್ವೆಟರ್, ಅನೇಕ ಬಸ್ ಟಿಕೆಟ್‌ಗಳು (೧೯೬೫ರಲ್ಲಿ ವಾಶಿಂಗ್ಟನ್ನಿಗೆ ಮಾರ್ಟಿನ್ ಲೂಥರ್ ಕಿಂಗ್‌ರ ಭಾಷಣ ಕೇಳಲು ಹೋದಾಗಿನ ಬಸ್ ಟಿಕೆಟ್. ೧೯೬೮ರಲ್ಲಿ ಡೆಮೊಕ್ರಾಟಿಕ್ ಅಧಿವೇಶನದಲ್ಲಿ ಪ್ರತಿಭಟನೆ ನಡೆಸಲು ಶಿಕಾಗೊಗೆ ಹೋಗಿದ್ದಾಗಿನ ಟಿಕೆಟ್, ಇತ್ಯಾದಿ), ವುಡ್ ಸ್ಟಾಕ್ ನೆನಪುಗಳು. ಪುಟ್ಟ ಕವರಿನಲ್ಲಿ ಸ್ವಲ್ಪ ಗಾಂಜಾ, ಜೋನ್ ಕೊಟ್ಟ ಮೊದಲ ಟೀ ಶರ್ಟ್. ಅವಳು ಪರಿಚಯಿಸಿದ ಜಾಕ್ ಕೆರ್ವಾಕ್, ಗಿನ್ಸ್ ಬರ್ಗರ ಪುಸ್ತಕಗಳು, ಅವಳ ನಿಧನದ ಸುದ್ದಿಯ ಪತ್ರಿಕೆಯ ಪುಟ, ...

ಒಂದು ಪುಟ್ಟ ಕರವಸ್ತ್ರ ಬಗ್ಗಿ ನೆಲದಿಂದ ತೆಗೆದುಕೊಂಡು ನೋಡಿದರೆ ಕಲೆಗಳು! ಓ! ನವೆಂಬರ್ ೨೩, ೧೯೬೩ ಡಲ್ಲಾಸ್! ನನಗಾಗ ವಯಸ್ಸು ೨೨. ಅಸ್ಟಿನ್‌ನಿಂದ ಡಲ್ಲಾಸ್‌ಗೆ ಕೆಲಸ ಹುಡುಕಲು ಹೋಗಿದ್ದೆ. ಬೆಳಿಗ್ಗೆಯೇ ಇಂಟರ್ವ್ಯೂ ಮುಗಿದಿತ್ತು. ಸಂಜೆಯ ಬಸ್ ಸಮಯದ ತನಕ ಮಾಡಲು ಏನೂ ಇರಲಿಲ್ಲ. ಅಧ್ಯಕ್ಷ ಜಾನ್ ಕೆನೆಡಿ ಡೌನ್ ಟೌನಿಗೆ ಬರುತ್ತಿದ್ದಾರೆಂದು ತಿಳಿಯಿತು. ನನ್ನ ಹೀರೊ! ಅಲ್ಲಿ ಹೋಗಿ ಎಲ್ಮ್ ರಸ್ತೆಯಲ್ಲಿ ನಿಂತೆ. ಮುಂದಿನ ಸಾಲಿನಲ್ಲಿಯೇ ಇದ್ದೆ. ಆದರೆ ಕುಳ್ಳ ಹೆಂಗಸೊಬ್ಬಳು ನನ್ನ ಹಿಂದೆ ಇದ್ದು ಚಡಪಡಿಸುವುದನ್ನು ನೋಡಿ ಅವಳನ್ನು ಮುಂದೆ ಬಿಟ್ಟೆ. ಅಧ್ಯಕ್ಷರ ಕಾರು ನಮ್ಮ ರಸ್ತೆಗೆ ತಿರುಗಿತು. "ಮಿ. ಪ್ರೆಸಿಡೆಂಟ್, ಮಿ. ಪ್ರೆಸಿಡೆಂಟ್" ಎಂದು ಜನ ಕೂಗಲು ಶುರುಮಾಡಿದರು. ದೂರದಲ್ಲಿ ಜಾನ್ ಕೆನೆಡಿ ಕಾಣುತ್ತಿದ್ದರು ನಮ್ಮ ಟೆಕ್ಸಸ್ ಗವರ್ನರ್ ಕಾನೊಲಿ ಮುಂದಿನ ಸೀಟಿನಲ್ಲಿ! ಕೆನೆಡಿ ಮುಗುಳ್ನಗುತ್ತ ಎಲ್ಲರಿಗೂ ವೇವ್ ಮಾಡುತ್ತಿದ್ದರು. ಜಾಕಿ ಆಕಡೆ ನೋಡುತ್ತ ಸ್ಮಿತವದನರಾಗಿದ್ದರು. ಅಷ್ಟರಲ್ಲಿ ಗುಂಡುಗಳ ಶಬ್ದ. ಅಧ್ಯಕ್ಷರು ಕೆಳಗೆ ಕುಸಿಯುತ್ತಿದ್ದರು. ಅದನ್ನು ನೋಡಿ ಜಾಕಿ ಅವರನ್ನು ಹಿಡಿದುಕೊಂಡರು. ಕೆಲವೇ ಕ್ಷಣಗಳ ನಂತರ ಮುಂದಿನ ಸೀಟಿನಲ್ಲಿದ್ದ ಗವರ್ನರ್ ಕಾನೊಲಿ ಕೂಡ ಕೆಳಗೆ ಕುಸಿದರು. ಸರಿಯಾಗಿ ಏನಾಗಿದೆ ಎಂದು ನಮಗೆ ಗೊತ್ತಾಗಲಿಲ್ಲ. ಹತ್ಯೆ! ಕೊಲೆ! ಎಂದು ಜನ ಕೂಗಲಾರಂಭಿಸಿದರು. ಅಧ್ಯಕ್ಷರಿಗೆ ಗುಂಡು ಬಿದ್ದಿರುವುದಂತೂ ತಿಳಿಯಿತು. ಪೊಲೀಸರು ನಮ್ಮನ್ನೆಲ್ಲ ಹಿಂದಕ್ಕೆ ಅಟ್ಟಿದರು. ನಾವೆಲ್ಲಾ ಹಾಗೆಯೆ ರಸ್ತೆಯ ಬದಿಯಲ್ಲಿ ಬಹಳ ಹೊತ್ತು ನಿಂತಿದ್ದೆವು. ನಾನೂ ಬಹಳ ಹೊತ್ತು ಹಾಗೇ ಇದ್ದೆ. ಸರಿ ಹೊರಡೋಣ ಎಂದಾಗ ಕೆಳಗೆ ಏನೋ ಕಾಣಿಸಿತು. ಪುಟ್ಟ ಕರವಸ್ತ್ರ, ರಕ್ತದ ಕಲೆಗಳು. ಜಾಕಿ ಕೆನೆಡಿಯವರದ್ದಿರಬೇಕು. ಪತಿಯನ್ನು ಹಿಡಿದಾಗ ಅದು ಎಲ್ಲೋ ಗಾಳಿಗೆ ಹಾರಿದ್ದು ಈ ಕಡೆ ಬಂದು ಹುಲ್ಲಿನ ಮೇಲೆ ಬಿದ್ದಿತ್ತು. ಅಲ್ಲಿ ಇಲ್ಲಿ ನೋಡುತ್ತಾ ಮಡಿಸಿ ಜೇಬಿನಲ್ಲಿಟ್ಟುಕೊಂಡೆ. ಐವತ್ತೂ ಆಗಿರಲಿಲ್ಲ ನಮ್ಮ ಕೆನೆಡಿಯವರಿಗೆ! ಅಮೆರಿಕಕ್ಕೆ ಮುಂದೆ ಏನೋ ಹೇಗೋ ಅನ್ನಿಸಿತು.



ತಿಂಗಳ ಕಥೆ

ಮೊನ್ನೆ ನನ್ನ ಕಡೆಯ ಮಗ ಬಂದಿದ್ದಾಗ ಇದನ್ನು ತೋರಿಸಿದ್ದೆ. ಅವನು ನಗಲು ಶುರುಮಾಡಿದ. ಆಮೇಲೆ ಕೂಗಾಡಿದ "ಜಾನ್ ಕೆನಡಿ ವಿಷಯಲಂಪಟ. ಹೆಣ್ಣುಗಳ ಹಿಂದೆಯೇ ಓಡಾಡುತ್ತಿದ್ದ. ಅವನಿಂದ ಅಮೆರಿಕಕ್ಕೆ ಏನೂ ಉಪಯೋಗವಾಗಲಿಲ್ಲ. ಅವನ ಕುಟುಂಬವೆಲ್ಲಾ ಬರೀ ಆಡಂಬರ, ಪ್ರದರ್ಶನ ಪ್ರಿಯರು, ತಮ್ಮ ರಾಬರ್ಟನ್ನೂ ಕೊಂದರಲ್ಲವೆ. ಬಿಡಿ ಆ ಕೊಲೆಗಳು ಮಹಾ ದುರಂತವೇನಲ್ಲ. ಮ್ಯಾರಿಲಿನ್ ಮನ್ರೋಳನ್ನು ಅಣ್ಣ ತಮ್ಮಂದಿರಿಬ್ಬರೂ ಉಪಯೋಗಿಸಿಕೊಂಡಿದ್ದರಂತೆ." ಹೀಗೆಯೆ ಬಡಬಡಿಸುತ್ತಿದ್ದ. ನನ್ನ ತಂದೆ ತಾಯಿ, ನಾನು ಎಲ್ಲ ಡೆಮೊಕ್ರಾಟ್ ಪಕ್ಷದವರು. ನನ್ನ ಈ ಮಗ ಮಾತ್ರ ನಮ್ಮ ದಾರಿ ಬಿಟ್ಟು ರಿಪಬ್ಲಿಕನ್ ಪಕ್ಷ ಸೇರಿದ್ದಾನೆ. ಹೊರಗಿನಿಂದ ಬಂದವರನ್ನೆಲ್ಲ ವಾಪಸ್ಸು ಕಳಿಸಬೇಕಂತೆ. ನಮ್ಮ ಈಗಿನ ಅಧ್ಯಕ್ಷರ ಪಟ್ಟ ಶಿಷ್ಯ, ಇನ್ನೂ ಏನೇನೋ ಹಾಸ್ಯ ಮಾಡಿಹೋದ. "ಆ ಕರವಸ್ತ್ರವನ್ನು ಇಟ್ಟುಕೊಂಡು ಏನು ಸಂಭ್ರಮಪಡುತ್ತಿದ್ದೀರೋ" ಎಂದು ರೇಗಿಸಿ ಹೊರಟುಹೋದ.

ನಮ್ಮ ಆದರ್ಶ, ನಮ್ಮ ೬೦ರ ದಶಕದ ಸಂಭ್ರಮ ಅವನಿಗೇನು ಗೊತ್ತು? ಓದುವುದೂ ಇಲ್ಲ. ಹೇಳಿದರೆ ಕೇಳಿಸಿಕೊಳ್ಳಲು ಮನಸ್ಸೇ ಇಲ್ಲ. ಕೆನೆಡಿ ಬಹಳ ದೊಡ್ಡವರೆಂದು ನಾನು ಏನೂ ಹೇಳ್ತಿಲ್ಲ. ಆದರೆ ಎರಡನೆಯ ಮಹಾಯುದ್ಧದ ದಶಕದ ನಂತರ ಅಮೆರಿಕದಲ್ಲಿ ಆಗ ಏನೋ ಹೊಸ ಅಭಿಪ್ರಾಯಗಳು, ಹೊಸ ಯೋಚನೆಗಳು. ಕಪ್ಪು ಜನತೆಯ ಹಕ್ಕುಗಳಿಗೆ ಮಾನ್ಯತೆ ಸಿಕ್ಕಿತು. ಕಿಂಗರ ಅಭಿಪ್ರಾಯಗಳು ಕಿಚ್ಚಿನಂತೆ ಹರಡುತ್ತಿದ್ದವು ಹೌದು. ಆದರೂ ಅವರೂ ಹತ್ಯೆಗೀಡಾಗಿದ್ದರು. ಅಧ್ಯಕ್ಷ ನಿಕ್ಸನ್‌ರ ಭಾಷಣಗಳಿಗೆ ಹೋಗಿ ಎಷ್ಟೆಲ್ಲ ಅವಹೇಳನ ಮಾಡಿದ್ದೆವು! ವಿಯಟ್ನಾಮ್ ಯುದ್ಧವನ್ನು ಎಲ್ಲೆಲ್ಲ ಹೋಗಿ ಪ್ರತಿಭಟಿಸಿದ್ದೆವು! ಅಮೆರಿಕಕ್ಕೆ ಹೊಸ ಚೇತನ ತುಂಬಿ ಹೊಸ ಜೀವನ ಕೊಟ್ಟಿದ್ದೆವು! ಹಿಂದಿರದ ಸ್ವಾತಂತ್ರ್ಯ ಬಂದಿತ್ತು. ಮಹಿಳೆಯರಿಗೆ! ಕಪ್ಪು ಜನಕ್ಕೆ! ನಮ್ಮ ಜೀವನಶೈಲಿಯೇ ಬದಲಾಯಿತು. ಇದೆಲ್ಲ ಅವನಿಗೆ ಎಲ್ಲಿ ಅರ್ಥವಾಗಬೇಕು?

ದೂರದಲ್ಲಿ ಒಂದು ಕಂದು ಬಣ್ಣದ ಕವರು ಬಿದ್ದಿತ್ತು. ತಕ್ಷಣ ಅಲ್ಲಿಗೆ ಬಿರ್ರನೆ ನಡೆದೆ. ಅದರಲ್ಲಿ ಏನಿದೆ

**ಡಾ॥ ಪಾಲಹಳ್ಳಿ ಆರ್. ವಿಶ್ವನಾಥ್**

ಎಂದು ನನಗೆ ಗೊತ್ತಿತ್ತು : ಮ್ಯಾರಿಲಿನ್ ಮನ್ರೊಳ ಫೋಟೋ! "ಪ್ರಿಯ ಜಾನ್ ಆಟ್ಕಿನ್ಸನ್‌ಗೆ – ನಿನ್ನ ಮ್ಯಾರಿಲಿನ್" ಎಂದಿತ್ತು. ನಗೆ ಬಂದಿತು. ನನಗೆ ಆಗ ವಯಸ್ಸು ೧೪–೧೫. ಮ್ಯಾರಿಲಿನ್ ನನ್ನ ಆರಾಧ್ಯ ದೇವತೆ. ಅವಳ ಸಿನೆಮಾಗಳೆಲ್ಲವನ್ನೂ ನೋಡಿದ್ದೆ. ಅವಳ ಗಂಡಂದಿರು, ಗೆಳೆಯರ ಬಗ್ಗೆ ಅಸೂಯೆ ಪಡುತ್ತಿದ್ದೆ. ಆಗ ತಾನೆ 'ಸೆವೆನ್ ಇಯರ್ ಇಚ್' ಬಂದಿತ್ತು, ಆ ಸಿನೆಮಾವನ್ನು ಎಷ್ಟು ಸರಿ ನೋಡಿದೆನೋ ಗೊತ್ತಿಲ್ಲ! ಆ ಮೊದಲನೆಯ ದೃಶ್ಯವನ್ನು ಹೇಗೆ ಮರೆಯುವುದು? ಹಬೆ ಮೇಲೆ ಬರುವ ಕಟಕಟೆಯ ಮೇಲೆ ನಿಂತಾಗ ಅವಳ ಸ್ಕರ್ಟ್ ಮೇಲೆ ಹೋಗುವುದು! ಆದರೆ ಅದಕ್ಕಿಂತ ಹೆಚ್ಚಾಗಿ ನನಗೆ ಅವಳ ಮೋಹಕ, ಮುಗ್ಧ ಮುಖ! ಬೇರೆ ಏನೂ ಬೇಡವಾಗಿತ್ತು. ಮನೆಯಲ್ಲಿ, ಗೆಳೆಯರು ಎಲ್ಲಾ ತಮಾಷೆ ಮಾಡುತ್ತಿದ್ದರು! ಎಷ್ಟು ಚೆನ್ನಾಗಿದೆ ಈ ಚಿತ್ರ. ಆಗ ಅವಳಿಗೆ ೩೦ ವರ್ಷ. ಎಲ್ಲೋ ಯಾವುದೋ ಯೋಚನೆಯಲ್ಲಿ ಇರುವಂತಿದೆಯಲ್ಲವೇ! ಯಾರಿಗೆ ಗೊತ್ತು ಆಗಲೆ ಅವಳಿಗೆ ಆತ್ಮಹತ್ಯೆಯ ಯೋಚನೆಗಳು ಬಂದಿದ್ದವೋ ಏನೋ! ಎಲ್ಲರೂ ತಿಳಿದಂತೆ ಅವಳು ಹುಂಬಳೇನಿರಲಿಲ್ಲ. ಗಟ್ಟಿ ಹೆಣ್ಣು ಕೂಡ. ಯಾರ ಸಂಗ ಮಾಡಿದಳೋ? ಏನೇನು ಅಪಾಯದಲ್ಲಿದ್ದಳೋ! ಅಂತೂ ಈ ಫೋಟೋ ದೊರಕಿದ ಏಳೇ ವರ್ಷಗಳಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಳು! ೩೬ ವರ್ಷಗಳ ಜೀವನವಷ್ಟೇ! ಇನ್ನೂ ಹೊಸತಾಗಿ ಕಾಣುವ ಇಷ್ಟು ಒಳ್ಳೆಯ ಫೋಟೋ ನನಗೆ ಹೇಗೆ ಸಿಕ್ಕಿತ್ತು?

ಇದನ್ನು ಕಳಿಸಿದ್ದವರು ಜಾನ್ ಸ್ಟೈನ್ ಬೆಕ್! ಹೌದು ಅವರೇ! ಅಮೆರಿಕದ ಮಹಾ ಲೇಖಕ, ಗ್ರೇಪ್ಸ್ ಆಫ್ ರಾತ್ ಬರೆದ ಮಹಾಶಯ! ಆದರೆ ನನ್ನ ಚಿಕ್ಕಮ್ಮನ ಗಂಡ ಕೂಡ. ಒಂದು ಬಾರಿ ಆಸ್ಟಿನ್‌ನಲ್ಲಿ ನಮ್ಮ ಮನೆಗೆ ಬಂದಿದ್ದರು. ಮನೆಯವರೆಲ್ಲಾ ನನ್ನ ಮ್ಯಾರಿಲಿನ್ ಮೋಹದ ಬಗ್ಗೆ ರೇಗಿಸುತ್ತಿದ್ದದ್ದನ್ನು ನೋಡಿದರು. ಆಗಲೇ ಜಾನ್ ಚಿಕ್ಕಪ್ಪನಿಗೆ ಮ್ಯಾರಿಲಿನ್ ಗೊತ್ತು ಎಂದು ಚಿಕ್ಕಮ್ಮ ಹೇಳಿದ್ದ ನೆನಪು ಬಂದಿತು. ಆಗ ಅವರನ್ನು 'ಹೇಗಾದರೂ ಒಂದು ಫೋಟೋ ಕೊಡಿಸಿ' ಎಂದು ಪೀಡಿಸಲು ಶುರುಮಾಡಿದ್ದೆ. ಕಡೆಗೂ ಒಂದು ದಿನ ಮ್ಯಾರಿಲಿನ್‌ಳ ಈ ಫೋಟೋ ನ್ಯೂಯಾರ್ಕಿನಿಂದ ಅಂಚೆಯಲ್ಲಿ ಬಂದಿತ್ತು!

ನನ್ನ ಚಿಕ್ಕಪ್ಪ ಜಾನ್ ಅನೇಕ ಪುಸ್ತಕಗಳನ್ನು ಬರೆದವರು. ೧೯೩೯ರಲ್ಲಿ ಬರೆದ "ಗ್ರೇಪ್ಸ್ ಆಫ್ ರಾತ್" ಎಲ್ಲರಿಗೂ ತಿಳಿದಿರುವ ಪುಸ್ತಕ. ಅದಕ್ಕೆ ನೊಬೆಲ್ ಪ್ರಶಸ್ತಿಯೂ ಬಂದಿತು. ೧೯೪೦ರ ತೀವ್ರ ಆರ್ಥಿಕ ಸಮಸ್ಯೆಗಳ (ಡಿಪ್ರೆಶನ್) ಸಮಯದಲ್ಲಿ ಓಕ್ಲೊಹಾಮ ಪ್ರಾಂತ್ಯದ ಗ್ರಾಮಗಳ ರೈತರು ಜೀವನೋಪಾಯಕ್ಕಾಗಿ ಕ್ಯಾಲಿಫೋರ್ನಿಯಕ್ಕೆ ಹೋಗಬೇಕಾದ ಪರಿಸ್ಥಿತಿಯನ್ನು ಕಾದಂಬರಿ ಚಿತ್ರಿಸುತ್ತದೆ. ಕ್ಯಾಲಿಫೋರ್ನಿಯದ ಜಿಲ್ಲೆಯೊಂದರ ಜನ ತಮಗೆ ಜೀವನದಲ್ಲಿ ತೊಂದರೆ ಯಾಗುತ್ತಿದೆಯೆಂದು ಈ ವಲಸೆಗಾರರನ್ನು ವಿರೋಧಿಸುತ್ತಾರೆ. ನಿಧಾನವಾಗಿ, ಬಹಳ ನಿಧಾನವಾಗಿ, ಅವರು ಈ ಹೊರಗಿನವರನ್ನು ಒಪ್ಪಿಕೊಳ್ಳಲು ಶುರುಮಾಡುತ್ತಾರೆ. ಇದು ಅದರ ಕಥಾವಸ್ತು. ಈಗಿನ

**ಅಂತರ**

ಹೆಣ್ಣೆಂದರೆ ಆಕಾಶ,<br>
ನಕ್ಷತ್ರ, ನೀಹಾರಿಕೆ,<br>
ಮಿಂಚಿನ ರೆಕ್ಕೆ !<br>
ಗಂಡು ಬರಿ ನೆಲ, ಮಣ್ಣು -<br>
ಗರ್ವ ಏತಕ್ಕೆ?

ಸಿ.ಪಿ.ಕೆ.<br>
ಮೈಸೂರು

ಪ್ರಪಂಚದಲ್ಲೂ ಹೀಗೆಯೇ ಅಲ್ಲವೇ! ಹೊರಗಿನವರು ಬೇಡ ಎನ್ನುತ್ತಿದ್ದಾರೆ ನಮ್ಮ ಅಧ್ಯಕ್ಷರು. ಈ ದೇಶದಲ್ಲಿ ಹೊರಗಿನವರು ಯಾರು? ನಾವೆಲ್ಲಾ ಹೊರಗಿನವರೆ! ಬೇರೆ ದೇಶಗಳಲ್ಲೂ ಶತಮಾನಗಳಿಂದ ಇರುವ ಜನರನ್ನೂ ದೇಶದ ಜನ ಎಂದು ಒಪ್ಪಿಕೊಳ್ಳುತ್ತಿಲ್ಲವಂತೆ! ಏನೂ ಬದಲಾಗಿಲ್ಲ ಅಲ್ಲವೇ! ಅದು ಪ್ರಕಟವಾದಾಗ ಕ್ಯಾಲಿಫೋರ್ನಿಯದಲ್ಲಿ ಜಿಲ್ಲೆಯೊಂದು ಇದು ಅಶ್ಲೀಲ ಬರಹವೆಂದು ಈ ಪುಸ್ತಕವನ್ನು ಬಹಿಷ್ಕಾರ ಮಾಡಿತ್ತಂತೆ. ಜಾನ್ ಚಿಕ್ಕಪ್ಪ ವಿಚಿತ್ರ ವ್ಯಕ್ತಿ ಎಂದು ನಮಗೆಲ್ಲ ತಿಳಿದಿತ್ತು. ಅನೇಕ ಲೇಖಕರ ತರಹ ಹೆಚ್ಚು ಕುಡಿಯುವುದೂ ಇತ್ತು. ಅನ್ಯಾಯ ಮತ್ತು ಬಡತನದ ಬಗ್ಗೆ ಅವರಿಗೆ ಬಹಳ ಆಕ್ರೋಶವಿತ್ತು. ಹಾಗೂ ತನ್ನ ಜೀವನದಲ್ಲಿ ಶ್ರೀಮಂತ ಶೈಲಿಯನ್ನೆ ಇಟ್ಟುಕೊಂಡಿದ್ದ ವಿರೋಧಾಭಾಸಗಳ ಮನುಷ್ಯ. ನಾನು ಆ ಫೋಟೋವನ್ನು ನೋಡುತ್ತಿದ್ದಾಗ ಕವರಿನೊಳಗೆ ಒಂದು ಪತ್ರವೂ ಇದ್ದಿತು. ಯಾವುದೋ ಮೂಲಪತ್ರದ ಪ್ರತಿ ಇದ್ದಂತಿತ್ತು. ನನ್ನ ಕಣ್ಣಿಗೆ ಬಿದ್ದೇ ಇರಲಿಲ್ಲ.

* * *

ಏಪ್ರಿಲ್ ೨೮, ೧೯೫೫

ಮಿಸ್ ಮ್ಯಾರಿಲಿನ್ ಮನ್ರೊ<br>
ವಾಲ್ಡಾರ್ಫ್ ಟವರ್ಸ್<br>
ನ್ಯೂಯಾರ್ಕ್ ಸಿಟಿ

ಪ್ರಿಯ ಮ್ಯಾರಿಲಿನ್

ನನ್ನ ಇಡೀ ಅನುಭವದಲ್ಲಿ ಯಾವಾಗಲೂ ಯಾರೂ ಹಸ್ತಾಕ್ಷರಗಳನ್ನು ಅವರಿಗಾಗಿಯೇ ಕೇಳುವುದಿಲ್ಲ. ಯಾವಾಗಲೂ ಇದು ಬೇರೆ ಯಾರಿಗೋ, ಯಾರ ಮಗುವಿಗೋ ಅಥವಾ ಅತ್ತೆಗೋ ಇರುತ್ತದೆ ಮತ್ತು ಅದು ಎಷ್ಟು ಪ್ರಯಾಸ ಎಂಬುದು ನನಗಿಂತ ಹೆಚ್ಚಾಗಿ ನಿಮಗೆ ಗೊತ್ತಿದೆ. ಆದ್ದರಿಂದ ಒಂದು ರೀತಿಯ ಬೇಸರದಿಂದ ನಾನು ಆಸ್ಟಿನ್, ಟೆಕ್ಸಾಸ್‌ನಲ್ಲಿ ನೆಲಸಿರುವ ನನ್ನ ಸೋದರಳಿಯ ಜಾನ್ ಆಟ್ಕಿನ್ಸನ್ ಎಂಬುವನ ಬಗ್ಗೆ ಹೇಳಬೇಕಾಗುತ್ತದೆ. ಅವನು ಈಗತಾನೆ ಯೌವನದ ಹೊಸಲಲ್ಲಿ ಕಾಲಿಟ್ಟಿದ್ದಾನೆ. ಹೌದು, ಅದು ಒಂದು ತೊಂದರೆಯೇ ಸರಿ . ಇನ್ನೊಂದು ನೀವು!

ನೀವು ದೇವಲೋಕದಿಂದೇನೂ ಇಳಿದು ಬಂದಿಲ್ಲ ಎಂದು ನನಗೆ ತಿಳಿದಿದೆ. ಆದರೆ ನಿಮಗೂ ನಮ್ಮಂತೆಯೇ ಸ್ವಾಭಾವಿಕ ದೈಹಿಕ ಕ್ರಿಯೆಗಳಿವೆ ಎಂಬುದನ್ನು ಅವನಿಗೆ ಹೇಳಿದರೆ ಅವನು ಮೂರ್ಛೆ ಹೋಗುತ್ತಾನೆ. ನಾನಂತೂ ಆ ಕೆಲಸ ಮಾಡುವುದಿಲ್ಲ. ಇತ್ತೀಚೆಗೆ ಟೆಕ್ಸಾಸ್‌ಗೆ ಹೋಗಿದ್ದಾಗ ನನ್ನ ಪತ್ನಿ ನನಗೆ ನಿಮ್ಮ ಪರಿಚಯ ಉಂಟು ಎಂದು ಹೇಳುವ ದೊಡ್ಡ ತಪ್ಪನ್ನು ಮಾಡಿದಳು. ಅದನ್ನು ಅವನು ನಂಬಿಲ್ಲವಾದರೂ ಈ ಸುಳ್ಳಿನಿಂದ ಅವನ ದೃಷ್ಟಿಯಲ್ಲಿ ನಾನು ಮೇಲೆ ಹೋಗಿದ್ದೇನೆ.

ಜನ ನನ್ನನ್ನು ಎಷ್ಟೋ ಕ್ಷುಲ್ಲಕ ವಿಷಯಗಳಿಗಾಗಿ ಸಹಾಯ ಕೇಳುತ್ತಾರೆ. ಹಾಗೆಯೇ ನಾನೂ ಅಂತಹದ್ದೇ ವಿಷಯಕ್ಕೆ ನಿಮ್ಮ ಸಹಾಯ ಕೇಳುತ್ತಿದ್ದೇನೆ. ನೀವು ನಿಮ್ಮ ಭಾವಚಿತ್ರವೊಂದನ್ನು ನನ್ನ ಸೋದರಳಿಯನಿಗೆ ಕಳಿಸಿಕೊಡಬೇಕು; ನಿಮಗೆ ಅವನ ಅಸ್ತಿತ್ವದ ಅರಿವು ಇದೆಯೆಂದು ತೋರಲು ಅವನ ಹೆಸರು ಅದರಲ್ಲಿರಬೇಕು. ಅದರ ಜೊತೆ ನಿಮ್ಮ ಹಸ್ತಾಕ್ಷರವಿರಲಿ. ಚಿತ್ರದಲ್ಲಿ ಸ್ವಲ್ಪ ಹುಡುಗಿಯ ಕಳೆ ಇದ್ದು ಏನೋ ಯೋಚನೆ ಇರುವಂತೆ ಇರಲಿ. ಈಗಲೇ ಅವನು ನಿಮ್ಮ ಗುಲಾಮನಾಗಿದ್ದಾನೆ ಈ ನಿಮ್ಮ ಸಹಾಯದಿಂದ ನನ್ನ ಗುಲಾಮನೂ ಆಗುತ್ತಾನೆ.

ನೀವು ಈ ಚಿತ್ರವನ್ನು ಕಳಿಸಿದರೆ, ನಾನು ಫೋರ್ಟ್ ನಾಕ್ಸ (ರಾಷ್ಟ್ರದ ಧನ ಭಂಡಾರ)ನ್ನು ಪ್ರವೇಶಿಸಲು ನಿಮಗೆ ಒಂದು ಬೀಗದ ಕೈ ಕಳಿಸಿಕೊಡುತ್ತೇನೆ (ಹ ಹ) ಅದಲ್ಲದೆ ನಿಮ್ಮನ್ನು ಬಹಳ ಇಷ್ಟಪಡುತ್ತೇನೆ ಕೂಡ!

ನಿಮ್ಮ ವಿಧೇಯ<br>
ಜಾನ್ ಸ್ಟೈನ್ ಬೆಕ್

* * *

ಜಾನ್ ಚಿಕ್ಕಪ್ಪನ್ನ ಫೋಟೋ ಹೇಗೆ ಸಿಕ್ಕಿತೆಂದು ಬಹಳ ಸರ್ತಿ ಕೇಳಿದ್ದೆ. ಸುಮ್ಮನೆ ನಕ್ಕುಬಿಡುತ್ತಿದ್ದ. ಈಗ ಗೊತ್ತಾಯಿತು. ಒಬ್ಬ ಚಿಕ್ಕ ಹುಡುಗನ ಖುಷಿಗಾಗಿ ಮಹಾ ಲೇಖಕರೊಬ್ಬರು ಸಮಯ ಮಾಡಿಕೊಂಡು ಈ ಪತ್ರ ಬರೆದಿದ್ದರು; ಅದೇ ಚಿಕ್ಕ ಹುಡುಗನಿಗಾಗಿ ಮಹಾ ನಟಿಯೊಬ್ಬಳು ಸಮಯ ಮಾಡಿಕೊಂಡು ಚಿತ್ರ ತೆಗೆಸಿಕೊಂಡು ಕಳಿಸಿಕೊಟ್ಟಿದ್ದಳು! ಇದೆಲ್ಲಾ ನನಗೋಸ್ಕರ ಎಂದು ನಾಚಿಕೆಯಾಯಿತು. ಆದರೂ ಅವರಿಬ್ಬರ ದೊಡ್ಡತನಕ್ಕೆ ಮಾರುಹೋಗಿದ್ದೆ. ಇದರ ನಂತರ ಆ ಲೇಖಕ ಮತ್ತು ನಟಿ ಎಲ್ಲಾದರೂ ಸಂಧಿಸಿದ್ದರೆ? ಗೊತ್ತಿಲ್ಲ.

ಗರಾಜಿನಲ್ಲಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ವಸ್ತುಗಳನ್ನೆಲ್ಲ ನೋಡಿದೆ. ಇದನ್ನೆಲ್ಲಾ ಇಟ್ಟುಕೊಂಡು ಏನು ಮಾಡುವುದು? ಪತ್ನಿಗೂ ಇಷ್ಟವಿಲ್ಲ, ಮಕ್ಕಳಿಗೂ ಇಷ್ಟವಿಲ್ಲ. ಚೀಲದಲ್ಲಿ ತುರುಕಿ ನಾಳೆ ಕಸದ ಟ್ರಕ್ ಬಂದಾಗ ಕಳಿಸಿಬಿಡಬೇಕು! ಸರಿ, ಮ್ಯಾರಿಲಿನ್‌ಳ ಚಿತ್ರ ಮಾತ್ರ ಒಳಗೆ ತೆಗೆದುಕೊಂಡು ಹೋಗುತ್ತೇನೆ. ಈ ಕಾಗದ? ಇದರ ಪ್ರತಿಯನ್ನು ಪತ್ರಿಕೆಯವರಿಗೆ ಕಳಿಸಿಕೊಡುತ್ತೇನೆ. ಏನು ಬೇಕಾದರೂ ಮಾಡಲಿ. (೨೦೧೫ರಲ್ಲಿ ಮ್ಯಾರಿಲಿನ್‌ರ ವಸ್ತುಗಳು ಹರಾಜಾಗುತ್ತಿದ್ದಾಗ ಈ ಪತ್ರವೂ ಹರಾಜಾಗಿ ಸುಮಾರು ೩೫೦೦ ಡಾಲರುಗಳು ದೊರಕಿದುವಂತೆ).

**ಡಾ॥ ಪಾಲಹಳ್ಳಿ ಆರ್. ವಿಶ್ವನಾಥ್**<br>
ನಂ. ೯, ಕಾಳಪ್ಪ ಬ್ಲಾಕ್, ಬಸವನಗುಡಿ<br>
ಬೆಂಗಳೂರು – ೫೬೦ ೦೦೪<br>
email : prvishwa@yahoo.co.in



# ಮತ್ತೆ ಬಂದಿದೆ ಕಂಕಣ ಗ್ರಹಣ

ಹತ್ತು ವರ್ಷಗಳ ಹಿಂದೆ ೨೦೧೦ರ ಜನವರಿ ೧೫ರ ಕಂಕಣ ಗ್ರಹಣ ಕೇರಳ, ತಮಿಳುನಾಡುಗಳಿಂದ ಕಂಡಿತ್ತು. ಹಲವರಿಗಾದರೂ ಅದು ನೆನಪಿರಬಹುದು. ಈ ತಿಂಗಳ ಕೊನೆಗೆ ಪುನಃ ಇನ್ನೊಂದು ಅವಕಾಶ ಒದಗಿದೆ. ಇದು ಕರ್ನಾಟಕದ ದಕ್ಷಿಣ ಭಾಗಕ್ಕೆ ಕಾಣುತಿರುವುದರಿಂದ ಈಗಾಗಲೇ ಅನೇಕರು ಟಿಕೆಟ್ ಮಾಡಿಸಿ ಕಾಯುತ್ತಿದ್ದಾರೆ. ಮಂಗಳೂರು, ನಂಜನಗೂಡು, ಕೊಳ್ಳೇಗಾಲ ಈ ಭಾಗದ ಊರುಗಳನ್ನು ಆರಿಸಿ; ಸುಮಾರು ೩ – ೪ ನಿಮಿಷ ಬಳೆಯಂತೆ ಕಾಣುವ ಸೂರ್ಯನನ್ನು ಕಂಡು ಆನಂದಿಸಿ. ಸುರಕ್ಷತೆಯ ಬಗ್ಗೆ ಮರೆಯದಿರಿ. ಬರಿಗಣ್ಣಿನಿಂದ ಅಪ್ಪಿತಪ್ಪಿಯೂ ನೋಡಬೇಡಿ.

ಗುರುಗ್ರಹವು ಸೂರ್ಯನ ಸಮೀಪ ಹಾದು ಹೋಗಲಿರುವ ಸಂದರ್ಭವೂ ಈ ಗ್ರಹಣದೊಡನೆ ಸೇರಿದೆ. ಸೂರ್ಯನನ್ನು ಮರೆಮಾಡುವ ಚಂದ್ರ ಗುರುಗ್ರಹವನ್ನೂ ಮುಚ್ಚಿಹಾಕಲಿದೆ. ಈ ವಿಶೇಷವನ್ನು ನೋಡುವುದು ಸಾಧ್ಯವೇ? ಪ್ರಯತ್ನಿಸಿ.

ಸಂಜೆಯ ಆಕಾಶದಲ್ಲಿ ಮಹಾವ್ಯಾಧನನ್ನು ಸುಲಭವಾಗಿ ಗುರುತಿಸಬಹುದು. ಮಹಾವ್ಯಾಧನ ಭುಜಗಳಿಗೂ ನಡುವೆ ಇರುವ ನಕ್ಷತ್ರವೇ ಮೃಗಶಿರಾ. ಮಹಾವ್ಯಾಧನನ್ನು ಮೃಗ (ಸತ್ತುಬಿದ್ದ ಜಿಂಕೆ) ಎಂದು ಕಲ್ಪಿಸಿಕೊಂಡರೆ ಅದರ ತಲೆಯ ಭಾಗದಲ್ಲಿರುವ ನಕ್ಷತ್ರವೇ ಮೃಗಶಿರಾ. ಹುಣ್ಣಿಮೆಯ ಚಂದ್ರನ ಸ್ಥಾನವನ್ನು ಗಮನಿಸಿ. ಅದು ಮೃಗಶಿರಾ ನಕ್ಷತ್ರದ ನೇರಕ್ಕೆ ಇರುತ್ತದೆ; ಆದ್ದರಿಂದ ಈ ತಿಂಗಳಿಗೆ ಮಾರ್ಗಶಿರ ಎಂದು ಹೆಸರು.

ಸಂಜೆ ಪಶ್ಚಿಮದಲ್ಲಿ ಕಾಣುವ ಮೂರು ಗ್ರಹಗಳ ಓಡಾಟ ಗಮನಾರ್ಹವಾದದ್ದು. ಶುಕ್ರ ಗ್ರಹವನ್ನು ಗುರುತಿಸುವುದು ಸುಲಭ. ಗುರು ಕ್ರಮೇಣ ದಿಗಂತದ ಅಂಚಿಗೆ ಸರಿದು ತಿಂಗಳ ಮಧ್ಯದಲ್ಲಿಯೇ ಕಾಣದಾಗುತ್ತದೆ. ಶನಿ ಇನ್ನೂ ನಿಧಾನವಾಗಿ ಸರಿದು ತಿಂಗಳ ಕೊನೆಗೆ ದಿಗಂತದ ಅಂಚನ್ನು ತಲುಪುತ್ತದೆ. ೧೧ರಂದು ಶನಿ ಮತ್ತು ಶುಕ್ರ ಒಂದು ಡಿಗ್ರಿ ಅಂತರದಲ್ಲಿ ಹಾದು ಹೋಗುತ್ತವೆ.




(ನಕ್ಷೆ ೧೫ನೆಯ ತಾರೀಖಿಗೆ ಅನ್ವಯವಾಗುತ್ತದೆ)



*ಕಂಕಣ ಗ್ರಹಣದ ಸಮಯದಲ್ಲಿ ಗುರುಗ್ರಹದ ಸ್ಥಾನ*

## ಕಂಕಣ ಗ್ರಹಣದ ವಿವರಗಳು

ವಿವಿಧ ತಾಣಗಳ ಸಮಯವನ್ನು ಇಲ್ಲಿ ತಿಳಿಸಲಾಗಿದೆ. ವಾತಾವರಣವು ಶುಭ್ರವಾಗಿರಲಿದೆ. ಸೂರ್ಯನನ್ನು ಬರಿಗಣ್ಣಿನಿಂದ ವೀಕ್ಷಿಸುವುದು ಸುರಕ್ಷಿತವಲ್ಲ. ಸೂರ್ಯನನ್ನು ನೋಡಲು ಸುರಕ್ಷಿತ ಫಿಲ್ಟರ್‌ಗಳನ್ನೇ ಬಳಸಿ. ಈ ಸುಂದರ ದೃಶ್ಯವನ್ನು ಆನಂದಿಸಿ. ನೀರಿನ ಪ್ರತಿಫಲನವು ಸುರಕ್ಷಿತವಲ್ಲ. ದೂರದರ್ಶಕವನ್ನು ಬಳಸಿ ಸೂರ್ಯ ಬಿಂಬವನ್ನು ತೆರೆಯ ಮೇಲೆ ಮೂಡಿಸಿ. ಪುಟ್ಟ ಕನ್ನಡಿಯಿಂದ ದೂರದ ಗೋಡೆಯ ಮೇಲೆ ಬಿಂಬ ಮೂಡಿಸಿದರೂ ಗ್ರಹಣದ ಹಂತಗಳು ಕಾಣುವುವು.

ವೀಕ್ಷಿಸಲು ಉತ್ತಮ ತಾಣಗಳು

| | ಆರಂಭ | ಪೂರ್ಣತೆಯ ಆರಂಭ | ಪೂರ್ಣತೆಯ ಮುಕ್ತಾಯ | ಮುಕ್ತಾಯ |
|---|---|---|---|---|
| ಗುಂಡ್ಲುಪೇಟೆ | ೦೮:೦೫:೫೨ | ೦೯:೨೭:೨೯ | ೦೯:೨೯:೪೭ | ೧೧:೦೯:೩೮ |
| ಹೆಗ್ಗಡದೇವನಕೋಟೆ | ೦೮:೦೫:೩೩ | ೦೯:೨೭:೦೦ | ೦೯:೨೮:೫೨ | ೧೧:೦೮:೨೨ |
| ಉದಕಮಂಡಲ | ೦೮:೦೫:೫೬ | ೦೯:೨೭:೧೪ | ೦೯:೩೦:೨೧ | ೧೧:೦೯:೫೧ |
| ಕುಂಬಳೆ | ೦೮:೦೪:೩೩ | ೦೯:೨೪:೦೫ | ೦೯:೨೬:೫೭ | ೧೧:೦೪:೦೫ |
| ಕಾಸರಗೋಡು | ೦೮:೦೪:೩೫ | ೦೯:೨೪:೦೮ | ೦೯:೨೭:೦೬ | ೧೧:೦೪:೧೪ |
| ಕಬಿನಿ | ೦೮:೦೫:೩೫ | ೦೯:೨೬:೪೬ | ೦೯:೨೯:೦೮ | ೧೧:೦೮:೨೫ |
| ಬಂಡೀಪುರ | ೦೮:೦೫:೪೭ | ೦೯:೨೭:೦೮ | ೦೯:೨೯:೪೫ | ೧೧:೦೯:೧೬ |

ಗುರು ೨೭ರಂದು ಸೂರ್ಯನನ್ನು ಹಾದು ಹೋಗುತ್ತದೆ. ಈ ಘಟನೆಗೆ ಯುತಿ ಎಂಬ ಹೆಸರಿದೆ. ೨೬ರ ಕಂಕಣ ಗ್ರಹಣದ ಸಂದರ್ಭದಲ್ಲಿ ಸೂರ್ಯ ಮತ್ತು ಗುರುಗ್ರಹಗಳೆರಡನ್ನೂ ಚಂದ್ರ ಮುಚ್ಚಿಹಾಕಲಿದೆ.

ಮುಂಜಾವಿನಲ್ಲಿ ಪೂರ್ವದ ಅಂಚಿನಲ್ಲಿ ತುಲಾ ರಾಶಿಯಲ್ಲಿ ಮಂಗಳ ಗ್ರಹ ಕಾಣುತ್ತದೆ. ಚಿತ್ರಾ ನಕ್ಷತ್ರದಿಂದ ಸ್ವಲ್ಪ ಕೆಳಗೆ ಕಾಣುವುದು. ತಿಂಗಳ ಕೊನೆಗೆ ಅದು ವೃಶ್ಚಿಕ ರಾಶಿಯತ್ತ ಚಲಿಸಿರುವುದು. ಬುಧ ತಿಂಗಳ ಆರಂಭದಲ್ಲಿ ಪೂರ್ವ ದಿಗಂತದ ಅಂಚಿನಲ್ಲಿ ಇರುತ್ತದೆ. ಕ್ರಮೇಣ ಇನ್ನೂ ಅಂಚಿಗೆ ಸರಿದು ೧೭ರಂದು ಜ್ಯೇಷ್ಠಾ ನಕ್ಷತ್ರವನ್ನು ಹಾದು ತಿಂಗಳ ಕೊನೆಗೆ ಕಾಣದಂತೆ ಆಗುತ್ತದೆ.

ಈಗ ಶುಭ್ರವಾದ ನೀಲಿ ಆಕಾಶದಲ್ಲಿ ಚಂದ್ರನಿಲ್ಲದಾಗ ಆಕಾಶಗಂಗೆಯ ಭಾಗಗಳನ್ನು ಗುರುತಿಸುವ ಪ್ರಯತ್ನ ಮಾಡಬಹುದು – ಪಶ್ಚಿಮದ ಅಂಚಿನಲ್ಲಿ ಆಕಾಶಗಂಗೆಯ ಕೇಂದ್ರ – ಅಂದರೆ ಧನು ರಾಶಿ – ಕಂತುತ್ತಿರುತ್ತದೆ. ಇನ್ನೊಂದು ಭಾಗ ಉತ್ತರದ ಗರುಡ, ರಾಜಹಂಸ ಮತ್ತು ಕುಂತಿ ಈ ಪುಂಜಗಳ ಮೂಲಕ ಹಾದುಹೋಗುವಲ್ಲಿ ನಕ್ಷತ್ರಗಳ ದಟ್ಟಣಿ ಹೆಚ್ಚು. ಮುಂಜಾವಿನಲ್ಲಿ ಇನ್ನೊಂದು ಭಾಗ ಕಾಣುವುದು.

ಭೂಮಿಯ ಕಕ್ಷೆಯಲ್ಲಿ ಮುಖ್ಯಘಟ್ಟವಾಗಿ ೨೨ರಂದು ಉತ್ತರಾಯಣವನ್ನು ಗುರುತಿಸಬೇಕು. ಅಂದು ರಾತ್ರಿಯ ಅವಧಿ ಗರಿಷ್ಠ – ನಭಾವಲೋಕನಕ್ಕೆ ಹೆಚ್ಚಿನ ಅವಕಾಶ.

೧೨–೧೩ಕ್ಕೆ ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಗಂಟೆಗೆ ೨೦–೩೦ ಉಲ್ಕೆಗಳು ಬೀಳುವ ಸಾಧ್ಯತೆ ಉಂಟು. ಇವು ಮಿಥುನ ರಾಶಿಯಿಂದ ಹೊರಟಂತೆ ಕಾಣುತ್ತವೆ.

**ಖಗೋಳ ದಿನಚರಿ**

೪ ಚಾಂದ್ರಮಾಸದ ಮೊದಲ ಪಾದ
೫ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ
೧೧ ಚಂದ್ರ – ರೋಹಿಣಿ ಜೋಡಿ ಶುಕ್ರ – ಶನಿ ಜೋಡಿ*
೧೨ ಹುಣ್ಣಿಮೆ ೧೦:೩೦ಕ್ಕೆ
೧೨–೧೩ ಜೆಮಿನಿಡ್ಸ್ ಉಲ್ಕಾವೃಷ್ಟಿ*
೧೬ ಬುಧ – ಜ್ಯೇಷ್ಠಾ ಜೋಡಿ*
೧೮ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೧೯ ಚಾಂದ್ರಮಾಸದ ಕೊನೆಯ ಪಾದ
೨೨ ಉತ್ತರಾಯಣ ೯:೩೦ಕ್ಕೆ
೨೩ ಮಂಗಳ ಚಂದ್ರ ಜೋಡಿ*
೨೬ ಅಮಾವಾಸ್ಯೆ ಕಂಕಣ ಗ್ರಹಣ; ಚಂದ್ರ – ಗುರು ಜೋಡಿ*
೨೭ ಶನಿ– ಚಂದ್ರ ಜೋಡಿ; ಗುರುಗ್ರಹದ ಯುತಿ
೨೯ ಶುಕ್ರ – ಚಂದ್ರ ಜೋಡಿ*
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್ ಬೆಂಗಳೂರು – ೫೬೦ ೦೦೧
email : shylaja.jnp@gmail.com

# ಮನುಷ್ಯತ್ವ ಮಾತ್ರ ಬೇಕಿಲ್ಲ !




ಏಸುಕ್ರಿಸ್ತ ಬೇಕು; ಶಾಂತಿ ಬೇಕಿಲ್ಲ.
ಪ್ರವಾದಿ ಮಹಮ್ಮದ್ ಬೇಕು; ಸಹಬಾಳ್ವೆ ಬೇಕಿಲ್ಲ.
ಬಸವಣ್ಣ ಬೇಕು; ಸಮಾನತೆ ಬೇಕಿಲ್ಲ.
ವಿವೇಕಾನಂದ ಬೇಕು; ಭಾವೈಕ್ಯತೆ ಬೇಕಿಲ್ಲ.
ಎಲ್ಲರಿಗೂ ತಮ್ಮವರೇ ಬೇಕು; ಮನುಷ್ಯತ್ವ ಮಾತ್ರ ಬೇಕಿಲ್ಲ !

ಸುಭಾಷ್ ಬೇಕು; ಹೋರಾಟ ಬೇಕಿಲ್ಲ.
ಭಗತ್‌ಸಿಂಗ್ ಬೇಕು; ರಾಷ್ಟ್ರಭಕ್ತಿ ಬೇಕಿಲ್ಲ.
ಕುವೆಂಪು ಬೇಕು; ಮಾನವತೆ ಬೇಕಿಲ್ಲ.
ಭಾರತೀಯತೆ ಬೇಕು; ಬಾಂಧವ್ಯ ಬೇಕಿಲ್ಲ.
ಎಲ್ಲರಿಗೂ ತಮ್ಮವರೇ ಬೇಕು; ಮನುಷ್ಯತ್ವ ಮಾತ್ರ ಬೇಕಿಲ್ಲ !

ಅಂಬೇಡ್ಕರ್ ಬೇಕು; ದುಶ್ಚಟ ಬಿಡಲಿಲ್ಲ.
ಬುದ್ಧ ಬೇಕು; ದುರಾಸೆ ಬಿಡಲಿಲ್ಲ.
ಗಾಂಧೀಜಿ ಬೇಕು; ಸರಳತೆ ಹೊಂದಲಿಲ್ಲ.
ಮಹಾವೀರ ಬೇಕು; ಹಿಂಸೆ ಬಿಡಲಿಲ್ಲ.
ಎಲ್ಲರಿಗೂ ತಮ್ಮವರೇ ಬೇಕು; ಮನುಷ್ಯತ್ವ ಮಾತ್ರ ಬೇಕಿಲ್ಲ !

ಅಬ್ದುಲ್ ಕಲಾಂ ಬೇಕು; ಧರ್ಮಾಂಧತೆ ಬಿಡಲಿಲ್ಲ.
ವಾಲ್ಮೀಕಿ ಬೇಕು; ಅಜ್ಞಾನ ಬಿಡಲಿಲ್ಲ.
ಲಾಲ್ ಬಹದ್ದೂರ್‌ಶಾಸ್ತ್ರಿ ಬೇಕು; ಭ್ರಷ್ಟಾಚಾರ ಬಿಡಲಿಲ್ಲ.
ಕನಕದಾಸ ಬೇಕು; ಜಾತೀಯತೆ ಬಿಡಲಿಲ್ಲ.
ಎಲ್ಲರಿಗೂ ತಮ್ಮವರೇ ಬೇಕು; ಮನುಷ್ಯತ್ವ ಮಾತ್ರ ಬೇಕಿಲ್ಲ !

ಎಲ್ಲರೂ ಬೇಕು; ಎಲ್ಲಾ ಮಹಾತ್ಮರೂ ಬೇಕು.
ಅವರವರ ತತ್ತ್ವ ಸಿದ್ಧಾಂತ, ಮೌಲ್ಯಗಳು ಬೇಕಿಲ್ಲ.
ವ್ಯಕ್ತಿಪೂಜೆ ಬೇಕು; ಜಯಂತಿ ಆಚರಣೆ ಬೇಕು.
ಬಾಹ್ಯ ಆಚರಣೆ ಬೇಕು; ಆಂತರಿಕ ಆಚರಣೆ ಬೇಕಿಲ್ಲ.
ಎಲ್ಲರಿಗೂ ತಮ್ಮವರೇ ಬೇಕು; ಮನುಷ್ಯತ್ವ ಮಾತ್ರ ಬೇಕಿಲ್ಲ !

**ಗಿರಿಜಾಶಂಕರ್ ಜಿ. ಎಸ್.**
ನೇರಲಕೆರೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ – ೫೭೭೨೨೮
girijashankar.gs23@gmail.com




# ಸಾಂಸ್ಕೃತಿಕ ರಾಜಕಾರಣದ ಕನ್ನಡಿಯ ಬದಿ ಬಯಲ ಬಾಗಿಲು

ಲೇಖಕರು : **ಕಾನಕಾನಳ್ಳಿ ಶಿವಮಾಧು ಎಂ.**
ಪ್ರಕಾಶನ : **ಕಾವ್ಯ ಮನೆ**, ಬಳ್ಳಾರಿ
ಬೆಲೆ : ₹ 100/–
ಪ್ರತಿಗಾಗಿ ಸಂಪರ್ಕ: +917829464653 – ಕಪಿಲ್




**ನನ್ನ ಸುತ್ತ**
**ಕನ್ನಡಿ ಚೂರುಗಳು**
**ಅರೇ ಇದೀಗ**
**ನಾನೊಬ್ಬನೇ ಇಲ್ಲ!**
**ಒಂದೊಂದು ಚೂರುಗಳಲ್ಲಿ**
**ಒಬ್ಬೊಬ್ಬ...**

*(ಕನ್ನಡಿ ಚೂರುಗಳು)*

ಗ್ರೀಕ್ ಹೊಸ ಕಾವ್ಯ (ಅನು. ವಿಜಯ ಗುತ್ತಾಲ್ ಮತ್ತು ವಿಕ್ರಮ ವಿಸಾಜಿ) ಸಂಕಲನದಲ್ಲಿನ ಜಾರ್ಜ್ ಸ್ತೋಯೊನ್ನಿದಿಸ್‌ನ ಸಾಲುಗಳಿವು. ಆಧುನಿಕ ಬದುಕಿನ ಸಂಕೋಲೆಗಳಲ್ಲಿ ಸಿಕ್ಕುಹಾಕೊಂಡಿರುವ ಮನುಷ್ಯನು ತನ್ನ ಕಾಲದ ಪ್ರಬಲ ಸಾಂಸ್ಕೃತಿಕ ಆಚರಣೆಯ ಬಲೆಯ ಬಂಧನಕ್ಕೆ ಬಿಗಿಸಿಕೊಂಡು, ತನ್ನನ್ನು ತಾನು ಅರಿಯಲು ಸಾಗಿದಂತೆಲ್ಲ ತನ್ನ ತನವನ್ನು ಕಳೆದುಕೊಂಡು ಒಡೆದ ಕನ್ನಡಿಯಂತೆ ಛಿದ್ರವಾಗುವುದನ್ನು ಈ ಪದ್ಯ ಚಿತ್ರಿಸುತ್ತದೆ. ಒಡೆದ ಚಿತ್ರಗಳೆಲ್ಲವೂ ಭೂತದಂತೆ ಹಿಂಬಾಲಿಸಿ ಕೊಲ್ಲುವ ಪ್ರತಿಮೆಗಳು ಈ ಕಾಲದ ಸಾಮಾನ್ಯ ಪ್ರಕ್ರಿಯೆಯಾಗಿದೆ. ಹಾಗೆಯೇ ಆ ಒಡೆದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡುತ್ತಾ ತನ್ನತನದ ಒಡಕುಗಳ ಬೆನ್ನು ಹತ್ತಿದವನು ಸತ್ಯವನ್ನು ಕಾಣಲು ಇಡುವ ಮೊದಲ ಹೆಜ್ಜೆಯೆ ಸರಿ. ಹಾಗೆ ಹೆಜ್ಜೆ ಇಟ್ಟ ಸಂಕಲನ ಬಯಲ ಬಾಗಿಲು ವಿಮರ್ಶಾ ಕೃತಿ.

ಆಧುನಿಕ ಸಮಾಜದಲ್ಲಿನ ಪ್ರಭುತ್ವವು ತನ್ನ ಸೋಗಲಾಡಿತನದ ಆಡಳಿತ, ಶ್ರೇಷ್ಠತೆಯ ವ್ಯಸನದೊಂದಿಗೆ ರಾಷ್ಟ್ರೀಯತೆಯನ್ನು ಕಬಳಿಸುತ್ತಿರುವ ಧಾರ್ಮಿಕ ಅಸಹಿಷ್ಣುತೆಯ ಸಂದರ್ಭದಲ್ಲಿ ನಾವೆಲ್ಲ ತತ್ತರಿಸುತ್ತಿದ್ದೇವೆ. ಇಂತಹ ವಿಷಮ ಸ್ಥಿತಿಯಲ್ಲಿ ಸೃಜನಶೀಲ ಬರಹಗಾರನೊಬ್ಬ, ಮಾನವೀಯ ಅಂತಃಕರಣವನ್ನು ಒಳಗೊಂಡ ಶ್ರೀಸಾಮಾನ್ಯನೊಬ್ಬ ತನ್ನ ಸಾಹಿತ್ಯಕ ಪ್ರತಿಕ್ರಿಯೆಯನ್ನು ಅತಿ ತೀಕ್ಷ್ಣವಾಗಿಯೂ, ಸೂಕ್ಷ್ಮವಾಗಿಯೂ ನೀಡುತ್ತಿರುವುದನ್ನು ಕಾಣಬಹುದು. ಹೀಗೆ ಸಾಹಿತ್ಯಕ ಪ್ರತಿಕ್ರಿಯೆ ಕೂಡ ಒಂದು ರೀತಿಯಲ್ಲಿ ಲೋಕಕ್ಕೆ ಸಾಂಸ್ಕೃತಿಕ ಅಧಃಪತನದಂತೆ ಮೇಲ್ಮುಖವಾಗಿ ಭಾಸವಾಗುತ್ತದೆ ಹಾಗೂ ಲೋಕ ಹಾಗೆಯೇ ಗ್ರಹಿಸುತ್ತದೆ. ಆದರೂ ಪ್ರಭುತ್ವದ ಕೆಂಗಣ್ಣು, ಧರ್ಮದ ವಿಷಗಾಳಿಯ ಜೊತೆಯಲ್ಲಿಯೂ ಮಾನವೀಯ ತುಡಿತಗಳಿಗೆ ಸಾಹಿತ್ಯವು ಪ್ರತಿಕ್ರಿಯೆಯನ್ನು ನೀಡುತ್ತದೆ. ಇದು ಕನ್ನಡ ಸಾಹಿತ್ಯದ ಜಾಯಮಾನಕ್ಕೆ ಅಂಟಿಕೊಂಡು ಬಂದ ಕಜ್ಜಿಯ ತುರಿಕೆಯ ಆನಂದವೆಂದೆ ಹೇಳಬಹುದು.

ಇಂತಹ ಜೀವನ್ಮುಖಿ ಸಾಹಿತ್ಯಕ್ಕೆ ಬದುಕಿನ ತೀವ್ರತೆಯ ಕೈಗನ್ನಡಿಯ ಹರಿತದ ವಿಮರ್ಶೆ ಇದ್ದರೆ ಮಾತ್ರ ಆ ಸಾಂಸ್ಕೃತಿಕ ಜಗತ್ತು ಜೀವಂತಿಕೆಯ ಸಂಕೇತವಾಗಿ ಕಂಡುಬರುತ್ತದೆ. ವಿಮರ್ಶೆ ಎನ್ನುವುದು ಮೌಲ್ಯಮಾಪನವಲ್ಲ; ಕವಿ ಹೃದಯವನು ಹೊಕ್ಕು ಅದರ ಅಂತರಾಳವನ್ನು ಸಮಾಜದ ವಿಭಿನ್ನ ನೆಲೆಯ ಸಾಂಸ್ಕೃತಿಕತೆಗಳೊಂದಿಗೆ ಒರೆಹಚ್ಚುವ ಒಂದು ವಿಧಾನವಷ್ಟೆ. ಈ ದುರಿತ ಕಾಲದ ಕತ್ತಲಲ್ಲಿ ಬೆಳಕಿನ ದೀವಟಿಗೆಯನ್ನು ಹಿಡಿದು ನಿಂತು ವಿಮರ್ಶಿಸಿರುವ ಸಂಕಲನ ಎಂದರೆ, ಇತ್ತೀಚೆಗೆ ಕಾವ್ಯಮನೆ ಪ್ರಕಾಶನದಿಂದ ಪ್ರಕಟವಾಗಿರುವ ಕಾನಕಾನಳ್ಳಿ ಶಿವಮಾಧು ಎಂ. ಅವರ 'ಬಯಲ ಬಾಗಿಲು' ಸಂಕಲನ. ಈ ಸಂಕಲನ ಯಾಕೆ ಪ್ರಮುಖ ಸಂಕಲನವೆಂದು ತೋರುತ್ತದೆ ಎಂದರೆ ವಿಮರ್ಶಕನು ಸಾಹಿತ್ಯವನ್ನು ಕುರಿತು ವಿಮರ್ಶೆ ಮಾಡುತ್ತಿದ್ದರೂ ಕೂಡ ಅದರ ಮೂಲಕ ತಾನು ಗ್ರಹಿಸುತ್ತಿರುವ ವರ್ತಮಾನದ ರಾಜಕೀಯ ಮತ್ತು ಸಾಂಸ್ಕೃತಿಕ ನಿಲುವುಗಳನ್ನು ಪರಾಮರ್ಶಿಸುವ ವಿಧಾನದಿಂದ. ಅದರಲ್ಲೂ ಸಮಕಾಲೀನ ವಿಮರ್ಶೆಯ ಮಾನದಂಡವನ್ನು ಅರಿಯಲು ಈ ಸಂಕಲನ ಒಂದು ಪೂರ್ವ ಪೀಠಿಕೆಯಾಗಿ ಕಾಣುತ್ತದೆ.

**ಪುನೀತ್‌ಕುಮಾರ್ ಎಲ್.**

ಬಯಲ ಬಾಗಿಲು ಸಂಕಲನವು ಒಂಭತ್ತು ಲೇಖನಗಳನ್ನು ಒಳಗೊಂಡಿದೆ. ಬಹುಪಾಲು ಲೇಖನಗಳು ಇಂದಿನ ಕನ್ನಡ ಕಾವ್ಯವನ್ನು ಕೇಂದ್ರವಸ್ತುವನ್ನಾಗಿ ಹೊಂದಿರುವುದು ಲೇಖಕರ ಕಾವ್ಯ ಪ್ರೀತಿಯನ್ನು ಎತ್ತಿತೋರುತ್ತದೆ. ಹಾಗೂ ಕಾವ್ಯವೊಂದನ್ನು ಸಾಂಸ್ಕೃತಿಕ ವಸ್ತುವಾಗಿಸಿ ಅದನ್ನು ಗ್ರಹಿಸಬೇಕಾದ ಮಾರ್ಗಗಳ ಹುಡುಕಾಟವನ್ನು ಈ ಲೇಖನಗಳಲ್ಲಿ ಕಾಣಬಹುದು. ಕಾವ್ಯ ಮತ್ತು ವಿಮರ್ಶೆ ಒಂದೇ ಎಂದು ಹೇಳುವ ಲೇಖಕ 'ಕವಿ ಮತ್ತು ವಿಮರ್ಶಕ ದೇಹದ ಎರಡು ಭಾಗ' ಎಂದು ವ್ಯಾಖ್ಯಾನಿಸುವುದರಿಂದಲೇ ತಿಳಿದು ಬರುತ್ತದೆ ಕವಿ ಮತ್ತು ವಿಮರ್ಶಕನ ಜವಾಬ್ದಾರಿಗಳು ಏನೆಂಬುದು. ಕವಿ ತನ್ನ ಕಾಲದ ದುರಿತಗಳ ಬಗ್ಗೆ ಪ್ರತಿಮಾತ್ಮಕವಾಗಿ ಸೃಜಿಸಿದರೆ, ವಿಮರ್ಶಕನು ಅದೇ ದುರಿತಗಳ ಬಗ್ಗೆ ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕವಾಗಿ ತನ್ನ ಹರಿತವಾದ ಬರವಣಿಗೆಯ ಮೂಲಕ ನಿರೂಪಣೆಯನ್ನು ಮಾಡುತ್ತಾನೆ. ಈ ಸಂಕಲನದ ಉದ್ದಕ್ಕೂ ಶಿವಮಾಧು ಮಾಡಿರುವುದು ಕೂಡ ಇದನ್ನೆ.

ಡಿ.ಆರ್.ಎನ್ ಅವರು "ಸಾಂಸ್ಕೃತಿಕ ದಂಗೆಗಳಿಗೆ ಪ್ರಾಚೀನ ಸ್ಮೃತಿಗಳ ಅವಶ್ಯಕತೆ ಇದೆ" ಎಂದು ಹೇಳುತ್ತಾರೆ. ಇಂತಹ ಒಂದು ಪ್ರಾಚೀನ ಸ್ಮೃತಿಯನ್ನು ಶಿವಮಾಧು ಅವರ ಬರವಣಿಗೆಯಲ್ಲಿ ಗುರ್ತಿಸಲು ಸಾಧ್ಯವಿದೆ. 'ಹೊಸ ತಲೆಮಾರಿನ ಹಲವು ತಲ್ಲಣಗಳ ನಡುವೆ' ಮತ್ತು 'ಯುವ ಕಾವ್ಯ ಮೀಮಾಂಸೆ ಮತ್ತು ಸಮಾಕಾಲೀನತೆ' ಲೇಖನಗಳಲ್ಲಿ ಇಂತಹ ಸ್ಮೃತಿಯನ್ನು ಕಾಣಬಹುದು. ಆಂತರಿಕ ಬೇಗುದಿಗಳ ಜೊತೆಗೆ ಪ್ರಾಚೀನ ಮತ್ತು ಸಮಕಾಲೀನ ಸಾಂಸ್ಕೃತಿಕ ಅಂಶಗಳನ್ನು ರಕ್ತಗತಗೊಳಿಸಿಕೊಳ್ಳುವ ಕವಿಯು ತನ್ನ ತನದ ಸದಾ ಫ್ರೆಶ್ ಆದ ಕಾವ್ಯಭಾಷೆಯನ್ನು ದುಡಿಸಿಕೊಳ್ಳಬೇಕು ಎಂದು ಹೇಳುತ್ತಾರೆ. ಕಾವ್ಯವು ಸತ್ಯದ ಭಾಷೆಯಾಗಿರಬೇಕು ಎನ್ನುವ ವ್ಯಾಖ್ಯಾನವನ್ನು

ಲೇಖನದ ಉದ್ದಕ್ಕೂ ಸಾಬೀತು ಮಾಡಿರುವುದನ್ನು ಕಾಣಬಹುದಾಗಿದೆ. ಆ ಮೂಲಕ ತನ್ನ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕತೆಗೆ ಕವಿ ಒಡ್ಡುವ ಪ್ರತಿರೋಧದ ಬಗೆಯನ್ನು ಹುಡುಕುವಲ್ಲಿ ಯಶಸ್ವಿಯಾಗಿದ್ದಾರೆ.

'ಪ್ರಭುತ್ವಕ್ಕೊಂದು ಪ್ರತಿಕ್ರಿಯೆ' ಲೇಖನವು ಭಾರತದ ಪ್ರಜಾಪ್ರಭುತ್ವದ ಪವರ್ ಪಾಲಿಟಿಕ್ಸ್‌ನ ಭಾವನಾತ್ಮಕ ರಾಜಕೀಯ ಚಟುವಟಿಕೆಗಳಿಗೆ ಸಮಕಾಲೀನ ಕನ್ನಡ ಕಾವ್ಯ ತೋರಿದ ಪ್ರತಿರೋಧವನ್ನು ತೆರೆದು ತೋರಿಸಿದ್ದಾರೆ. ಮಾನವೀಯತೆಯ ಹಂದರವು ಕಂದರವಾಗಿ ನುಂಗುವ ಪ್ರಕ್ರಿಯೆಯ ಸ್ವರೂಪವನ್ನು ಬಿಡಿಸಿ ಹೇಳುತ್ತಾರೆ. ರಾಮ ಮತ್ತು ಗೋವು ಇಂದಿನ ರಾಜಕೀಯ ಐಕಾನ್‌ಗಳಾಗಿ, ರಾಷ್ಟ್ರ ಪ್ರೇಮ, ಸ್ವಚ್ಛ ಭಾರತ, ನೋಟು ಅಮಾನ್ಯೀಕರಣ ಇವೇ ಮೊದಲಾದ ರಾಜಕೀಯ ಹೈಡ್ರಾಮಗಳಿಗೆ ಕಾವ್ಯದ ಮೂಲಕ ಪ್ರತಿಕ್ರಿಯೆ ನೀಡಿದ ಅಕ್ಷತಾ ಹುಂಚದಕಟ್ಟೆ, ಬಸವರಾಜ ಹುಸಾಕ್ಸಿ, ಆರೀಫ್‌ರಾಜ, ವಿಲ್ಸನ್ ಕಟೀಲ್, ಕುಮಾರ ಇಂದ್ರಬೆಟ್ಟ – ಇವರೇ ಮೊದಲಾದವರ ಕವಿತೆಗಳನ್ನು ವಿಶ್ಲೇಷಿಸುತ್ತಾ ಪಾಬ್ಲೊ ನೆರುಡಾನ "ಹೂವು ಅರಳುವುದನ್ನು ತಡೆಯುವಿರಿ, ಆದರೆ ವಸಂತ ಬರುವುದನ್ನು ತಡೆಯಲಾರಿರಿ" ಕವನದ ಸಾಲುಗಳನ್ನು ಉಲ್ಲೇಖಿಸುತ್ತಾರೆ. ಆ ಮೂಲಕ ಕನ್ನಡ ಕಾವ್ಯವು ಪವರ್ ಪಾಲಿಟಿಕ್ಸ್‌ನ ಸಾಂಸ್ಕೃತಿಕ ರಾಜಕೀಯದ ಬಣ್ಣವನ್ನು ಬಯಲು ಮಾಡುವ ಬಗೆಯನ್ನು ಗ್ರಹಿಸುವ ಮೂಲಕ ಕನ್ನಡ ಜಗತ್ತಿನ ಜೀವಂತಿಕೆಯ ಸಂದೇಶವನ್ನು ಓದುಗರ ಮುಂದಿಡಲಾಗಿದೆ. ಪ್ರಭುತ್ವದ 'ಪ್ರತಿಮೀಕರಣ' ಮತ್ತು 'ಏಜಾಕೀಕರಣ'ದ ಬಗ್ಗೆ ಆತಂಕಗಳನ್ನು ವ್ಯಕ್ತಪಡಿಸುತ್ತಲೇ ಬಹುತ್ವ ಭಾರತದ ಕನಸನ್ನು ಕಾಣುವ ಲಗುಬಗೆ ಶಿವಮಾಧು ಅವರಲ್ಲಿ ಕಂಡುಬರುತ್ತದೆ.

ವಿ.ಎಂ. ಮಂಜುನಾಥ ಅವರ 'ಅಸ್ಪೃಶ್ಯ ಗುಲಾಬಿ' ಕಾದಂಬರಿಗೆ ಪ್ರತಿಕ್ರಿಯೆಯನ್ನು ನೀಡುತ್ತಾ ಧರ್ಮ ಮತ್ತು ಲೈಂಗಿಕತೆಗೆ ಸಂಬಂಧಿಸಿದಂತೆ ನೀಡುವ ವ್ಯಾಖ್ಯಾನವು ವಿಮರ್ಶಕನ ಸಾಮಾಜಿಕ ನಿಲುವು ಏನೆಂಬುದು ತಿಳಿದು ಬರುತ್ತದೆ. "ಲೈಂಗಿಕತೆಯು ಸಾಮಾಜಿಕ ಮನಸ್ಸಿನ ಅಗೋಚರ ಸ್ಥಿತಿ ಪ್ರಜ್ಞೆಯಾಗಿಸಿದರೂ, ಅದು ವಸ್ತು ಸ್ಥಿತಿಯಲ್ಲಿ ಮಾತ್ರ ಧರ್ಮ, ಆಚರಣೆ, ಜಾತಿ, ವರ್ಣಗಳ ತೋರಿಕೆಯ ಮಂತ್ರಪಠಣವಾಗಿರುತ್ತದೆ" ಎಂದು ಹೇಳುತ್ತಾರೆ. ಲೈಂಗಿಕತೆ ಎನ್ನುವದು ಈ ಪ್ರಕೃತಿಯ ಒಂದು ಸಾಮಾನ್ಯ ಲಕ್ಷಣವಾಗಿ ಇದ್ದರೂ ಅದಕ್ಕೆ ಸಮಾಜ ನಿರ್ಮಿಸಿರುವ ಸಾಂಸ್ಥಿಕ ಸಂಸ್ಥೆಗಳು ಒಡ್ಡಿರುವ ಬಂಧನಗಳನ್ನು ಗುರುತಿಸಿದ್ದಾರೆ. ಆ ಮೂಲಕ ಧರ್ಮ ಮತ್ತು ಲೈಂಗಿಕತೆಯ ನಿಜವಾದ ಬಣ್ಣವನ್ನು ಕಾದಂಬರಿಯ ಮೂಲಕ ವಿಶ್ಲೇಷಿಸುತ್ತಾರೆ.

ಬಯಲ ಬಾಗಿಲು ಸಂಕಲನದ ಮತ್ತೊಂದು ಪ್ರಮುಖವಾದ ಲೇಖನವೆಂದರೆ 'ಸಂವಿಧಾನ ಓದು: ಅನಿವಾರ್ಯತೆ' ಲೇಖನವಾಗಿದೆ. ಅಲಿಖಿತ ಸಂವಿಧಾನ ಮತ್ತು ಲಿಖಿತ ಸಂವಿಧಾನದ ವಿಶ್ಲೇಷಣೆ ಮಾಡುತ್ತಾ, ಅಲಿಖಿತ ಸಂವಿಧಾನದ ಅಪಾಯಗಳನ್ನು ಇತಿಹಾಸ ಮತ್ತು ವರ್ತಮಾನದಲ್ಲಿನ ಪಲ್ಲಟವನ್ನು ಎತ್ತಿ ತೋರಿಸಿದ್ದಾರೆ. ಪ್ರಬಲ ಕೋಮಿನ ಸಾಂಸ್ಕೃತಿಕ ಆಧಿಪತ್ಯದ ಬಗೆಗೆ ಕಳವಳವನ್ನು ತೋರುತ್ತಲೇ ಸತ್ಯವನ್ನು ಹೇಳುವ ಭಂಡತನದ ಧೈರ್ಯವನ್ನು ಈ ಲೇಖನದಲ್ಲಿ ಕಾಣಬಹುದು. ರಾಜಕೀಯ ವಿಶ್ಲೇಷಣೆ ಮಾಡುವುದು ಅಪರಾಧ ಎಂದಾಗುತ್ತಿರುವ ಇಂದಿನ ಸಂದರ್ಭದಲ್ಲಿ ಪವರ್ ಪಾಲಿಟಿಕ್ಸ್‌ನ ಪ್ರಜಾಪ್ರಭುತ್ವದ ಪ್ರತಿನಿಧಿಗಳು ಸಂವಿಧಾನವನ್ನು ಕಂಡ ಬಗೆಯನ್ನು ಸೂಕ್ಷ್ಮವಾಗಿ ಗ್ರಹಿಸಿ ಓದುಗನ ಮುಂದಿಡುತ್ತಾರೆ. ಇಂದಿನ ಎಲ್ಲಾ ತಲ್ಲಣಗಳಿಗೆ ಪರಿಹಾರೋಪಾಯವಾಗಿ ಎಲ್ಲರೂ ಸಂವಿಧಾನವನ್ನು ಓದಲೇಬೇಕು ಎನ್ನುವ ತುರ್ತನ್ನು ಮುಂದಿಡುವ ಮೂಲಕ, ಸಂವಿಧಾನದ ಆಶಯಗಳನ್ನು ಜನಮನಸ್ಸಿನಲ್ಲಿ ತುಂಬುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ.

ಕ್ರಾಂತಿಯ ಕಿಡಿಯನ್ನು ತನ್ನ ಬರಹದ ಉದ್ದಕ್ಕೂ ಸುರಿಸಿರುವ ಶಿವಮಾಧು, 'ಆತ್ಮ ಅವಲೋಕನದ ದಾರಿ–ಚಿಂತನ–ಮಂಥನ' ಲೇಖನದಲ್ಲಿ ಪಿ. ಮಲ್ಲಿಕಾರ್ಜುನಪ್ಪ ಅವರ ಪದ್ಯಗಳನ್ನು ವಿಶ್ಲೇಷಿಸುತ್ತಾರೆ. ಆಧ್ಯಾತ್ಮಿಕತೆಯ ಆಳವನ್ನು ಅದರ ಆಂತರ್ಯವನ್ನು ಒರೆಗೆ ಹಚ್ಚುವ ಕೆಲಸವನ್ನು ಮಣ್ಣೊಳಗಿನ ತೇವದಂತೆ ಸಾವಧಾನಚಿತ್ತರಾಗಿ ಮಾಡುತ್ತಾರೆ. ಎರಡು ಧ್ರುವಗಳಾದ ಅಕ್ಕಮಹಾದೇವಿ ಮತ್ತು ಸಂಚಿಹೊನ್ನಮ್ಮಳನ್ನು ಒಂದೆ ಕೇಂದ್ರಕ್ಕೆ ತಂದು ಅವರಿಬ್ಬರ ಜೀವನಮೌಲ್ಯವನ್ನು ಸಾದರ ಪಡಿಸುವ ಮೂಲಕ ಅಧ್ಯಾತ್ಮ ಮತ್ತು ಲೌಕಿಕ ಬದುಕಿನ ದ್ವಂದ್ವಾತ್ಮಕತೆಯನ್ನು ವಿವರಿಸುತ್ತಾರೆ. ಅಕ್ಕ ಮತ್ತು ಹೊನ್ನಮ್ಮಳ ಅಧ್ಯಾತ್ಮ ಬದುಕಿನ ವೈರುಧ್ಯಗಳನ್ನು ಹೇಳುತ್ತಲೇ ಸಾಮಾಜಿಕ ಕ್ರಾಂತಿಗಾಗಿ ಇಬ್ಬರ ಕೊಡುಗೆಗಳನ್ನು ಗ್ರಹಿಸಿ ಲೋಕಕ್ಕೆ ನೀಡಲು ಯತ್ನಿಸಲಾಗಿದೆ.

ಮೊದಲ ಸಂಕಲನದಲ್ಲಿಯೇ ವಿಮರ್ಶೆಯ ಜಾಡನ್ನು ಭೇದಿಸಲು ಹೊರಟ ಬಯಲ ಬಾಗಿಲು ವಿಮರ್ಶಾ ಸಂಕಲನದ ಲೇಖಕ ಶಿವಮಾಧು ಅದರಲ್ಲಿ ಯಶಸ್ವಿಯಾಗಿರುವುದು ಕೂಡ ಕಾವ್ಯ ಸತ್ಯದಷ್ಟೆ ಸತ್ಯವಾಗಿದೆ. ಚರಿತ್ರೆಯಲ್ಲಿನ ರಾಜಕೀಯದಲ್ಲಿ ರಾಕ್ಷಸತನದ ಬೀಜ ಇರುತ್ತದೆ ಎಂಬುದನ್ನು ಅರಿತಿರುವ ಲೇಖಕ ಅದನ್ನು ವರ್ತಮಾನದ ಭೂತಗನ್ನಡಿಯಲ್ಲಿ ನೋಡುವ ಹಾಗೂ ಅವುಗಳನ್ನು ವಿಶ್ಲೇಷಿಸುವ ಹೊಸ ಪರಿಭಾಷೆಗಳನ್ನು ಹುಟ್ಟು ಹಾಕುವ ಪ್ರಾಮಾಣಿಕ ಪ್ರಯತ್ನವನ್ನು ಕೂಡ ಇಲ್ಲಿನ ಲೇಖನಗಳಲ್ಲಿ ಮಾಡಲಾಗಿದೆ. ಇಲ್ಲಿನ ಲೇಖನಗಳು ಸಂದರ್ಭೋಚಿತವಾಗಿ ರೂಪುಗೊಂಡಿರುವಂತೆ ಕಂಡುಬಂದರೂ ಅವುಗಳಲ್ಲಿ ಕಾಣಿಸಿದ ಲೋಕಸತ್ಯಗಳು ಮತ್ತು ಸಾಂಸ್ಕೃತಿಕ ರಾಜಕಾರಣದ ಶೋಧನೆಯಲ್ಲಿ ಯಶಸ್ವಿಯಾಗಿರುತ್ತಾರೆ. ಇಷ್ಟೆಲ್ಲಾ ಸಾಧ್ಯವಾಗಿದ್ದು ಲೇಖಕರು ತನ್ನ ಯೋಚನಾಲಹರಿಯನ್ನು ವಿಸ್ತರಿಸಲು ಹವಣಿಸಿ ಸಾಗಿದ ಸಾಹಿತ್ಯದ ಆಗರಗಳಾದ ಕಾವ್ಯಮನೆ, ದೀವಟಿಗೆ, ಸಂವಾದ, ಸಾಹಿತ್ಯವನ ಇವೇ ಮೊದಲಾದವುಗಳಲ್ಲಿನ ಅಕಾಡೆಮಿಕ್ ಆದ ಅಧ್ಯಯನ ಅವರ ಸೂಕ್ಷ್ಮತೆಗೆ ಸಾಕ್ಷಿಯಾಗಿದೆ. "ರೂಪಚರಿತ್ರೆಯ ಒಂದು ವಿಶಿಷ್ಟ ಆಂತರಿಕ ಮುಖಾಮುಖಿ ಮತ್ತು ಪರಸ್ಪರ ಬಳಕೆ–ಪರಿವರ್ತನೆಗಳ ಒಂದು ಸಂಕೀರ್ಣ ಪ್ರಕ್ರಿಯೆಯೂ ನಡೆದಿದೆ" ಎನ್ನುವ ಡಿಆರ್ ಅವರ ಮಾತುಗಳನ್ನು ಉಲ್ಲೇಖಿಸುತ್ತಾ ಇಲ್ಲಿನ ಲೇಖನಗಳು ಕೂಡ ಒಂದು ಕತ್ತಲ ಕಾಲದ ಸಂಕೀರ್ಣವಾದ ಪ್ರತಿಕ್ರಿಯೆ ಎಂದು ಹೇಳಬಹುದಾಗಿದೆ. ಆ ಮೂಲಕ ಒಡೆದ ಕನ್ನಡಿಯೊಳಗಿನ ಚೂರುಗಳಲ್ಲಿ ತನ್ನ ಪ್ರತಿಬಿಂಬವನ್ನು ಕಾಣುತ್ತಲೇ ಹೊಸ ಹುಡುಕಾಟದ ಶೋಧವನ್ನು ಈ ಲೇಖನಗಳಲ್ಲಿ ಗುರ್ತಿಸಬಹುದಾಗಿದೆ.

**ಪುನೀತ್‌ಕುಮಾರ್ ಎಲ್.**
email : jskpuni@gmail.com

## ಮನು ಪಾಟೀಲ ಅವರಿಗೆ ಅಭಿನಂದನೆ

ಕನ್ನಡ ನಾಡು ನುಡಿ ಚಿಂತಕರೂ, ಕ್ರಿಯಾಶೀಲ ಮನಸ್ಸಿನ ಶ್ರೀ ಮನು ಪಾಟೀಲ ಅವರಿಗೆ 'ಕಿ.ರಂ. ನಾಗರಾಜ ಪ್ರಶಸ್ತಿ' ಕೊಡಲಾಗಿದೆ. ಹೊಸತು ಪತ್ರಿಕೆಯ ಹಿತೈಷಿಗಳಾದ ಶ್ರೀಯುತರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದಿಂದ ಹಾರ್ದಿಕ ಅಭಿನಂದನೆಗಳು.

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

**ಆಲ್ ಇಂಡಿಯ ಟ್ರೇಡ್ ಯೂನಿಯನ್ ಕಾಂಗ್ರೆಸ್**
**(ಎ.ಐ.ಟಿ.ಯು.ಸಿ.) ಕರ್ನಾಟಕ ರಾಜ್ಯ ಸಮಿತಿ**
ಬೆಂಗಳೂರು **ರೂ. 50,000/–**

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**– ಪ್ರಕಾಶಕ**



# ಸಂಗೀತ - ಸಂಶೋಧನೆ ಆಕರಗಳ ಸಮಸ್ಯೆ

**ಸಂ**ಶೋಧನೆ ಹೆಚ್ಚು ಖಚಿತವೂ ವಸ್ತುನಿಷ್ಠವೂ ಆಗಬೇಕಾದರೆ; ಆಕರಗಳು ಮಹತ್ವದ ಪಾತ್ರ ವಹಿಸುತ್ತವೆ. ವಿಶೇಷವಾಗಿ ಸಾಹಿತ್ಯ, ಸಂಸ್ಕೃತಿ, ಸಮಾಜ ವಿಜ್ಞಾನಗಳ ಕ್ಷೇತ್ರದಲ್ಲಿನ ಸಂಶೋಧನೆಗೆ ಹೆಚ್ಚು ವಿಶ್ವಾಸಾರ್ಹತೆ ಮತ್ತು ಅಧಿಕೃತತೆ ಪ್ರಾಪ್ತವಾಗಬೇಕಾದರೆ 'ಆಕರಗಳು' ನಿರ್ಣಾಯಕವೆನಿಸುತ್ತವೆ. 'ಸತ್ಯದ' ಹುಡುಕಾಟದ ಪ್ರಕ್ರಿಯೆಯಲ್ಲಿ 'ಯಃಕಶ್ಚಿತ' ಎನ್ನಬಹುದಾದ ಆಕರವೂ ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ. ಸಾಹಿತ್ಯ–ಸಂಸ್ಕೃತಿ ಹಾಗೂ ಲಲಿತಕಲೆಗಳಿಗೆ ಸಂಬಂಧಿಸಿದ ಸಂಶೋಧನೆ ಕೈಗೊಳ್ಳುವಾಗ ಮೂಲ ಪಠ್ಯಗಳ ಜೊತೆಗೆ ಐತಿಹ್ಯ, ಪುರಾಣ, ಜಾನಪದ ಮಿತಗಳು ಹಾಗೂ ಶಾಸನಗಳಲ್ಲಿ ಪ್ರಕಟವಾದ ಮಾಹಿತಿ–ಅಭಿಪ್ರಾಯಗಳೂ ಗಂಭೀರವಾಗಿ ಪರಿಗಣಿಸಲ್ಪಡುತ್ತವೆ. ಸಂಶೋಧನೆಯಲ್ಲಿ 'ಸತ್ಯದ' ಹುಡುಕಾಟವೆನ್ನುವುದು ಸಾಪೇಕ್ಷವಾದುದು ಮಾತ್ರವಲ್ಲ ಬಹುಮುಖಿ ಆಯಾಮ ಹೊಂದಿರುವಂತಹುದು.

ನೂರಾರು ವರ್ಷಗಳ ಸಂಶೋಧನೆಯ ಫಲವಾಗಿ 'ಸ್ಥಾಪಿತವಾದ' ಸತ್ಯಗಳನ್ನು ಒಂದು ಅನೂಹ್ಯ 'ಆಕರ' ಎಲ್ಲವನ್ನೂ ಬುಡಮೇಲು ಮಾಡಬಹುದು... ಹಾಗಾಗಿಯೇ ಒಟ್ಟಾರೆ ಸಂಶೋಧನೆಯ ಫಲಿತವೆನ್ನುವುದು ಇಲ್ಲಿಯವರೆಗೆ ನಾನು ನಂಬಿಕೊಂಡು ಬಂದ ಭ್ರಮಾತ್ಮಕ ಸತ್ಯ. ಇದಮಿತ್ಥಂ ಎನ್ನುವುದು ಸಾಹಿತ್ಯ–ಸಂಸ್ಕೃತಿ, ಸಮಾಜ ವಿಜ್ಞಾನಗಳಲ್ಲಿ ಮಾತ್ರವಲ್ಲ ಅಪ್ಪಟ ಭೌತವಿಜ್ಞಾನಗಳ ಸಂಶೋಧನೆಯಲ್ಲೂ ಸಾಧ್ಯವಿಲ್ಲ. ವಿಜ್ಞಾನಿ ನ್ಯೂಟನನ 'ಗುರುತ್ವಾಕರ್ಷಣೆ'ಯ ತತ್ವ ಒಂದು ಕಾಲದ ವಿಸ್ಮಯಕಾರಿ ಆವಿಷ್ಕಾರ... ಮತ್ತೊಬ್ಬ ವಿಜ್ಞಾನಿ ಐನ್‌ಸ್ಟೈನ್ 'ಸಾಪೇಕ್ಷ ಸಿದ್ಧಾಂತ' ಮಂಡಿಸಿದ ಮೇಲೆ ಹಿಂದಿನ ಆವಿಷ್ಕಾರಗಳೆಲ್ಲ ಅರ್ಧ ಸತ್ಯ ಎಂಬುದು ರುಜುವಾತಾಯಿತು. ಆನ್ವಯಿಕ ವಿಜ್ಞಾನ ಕ್ಷೇತ್ರದಲ್ಲಿನ 'ಸಂಶೋಧನೆ'ಗಳಿಗೇ ಈ ಗತಿ ಒದಗಿಬರಬೇಕಾದರೆ, ಇನ್ನು ಸಾಹಿತ್ಯ–ಸಂಸ್ಕೃತಿ, ಸಮಾಜವಿಜ್ಞಾನ ಹಾಗೂ ಲಲಿತಕಲೆಗಳ ಕ್ಷೇತ್ರದಲ್ಲಿನ ಸಂಶೋಧನೆಯ ಫಲಿತಗಳನ್ನು ಒಂದು ಸಾಧ್ಯತೆಯನ್ನಾಗಿ ಪರಿಗಣಿಸುವುದೆ ಹೆಚ್ಚು ಸೂಕ್ತವೆನಿಸುತ್ತದೆ.

ಅಪಾರ ಪ್ರಮಾಣದ 'ಆಕರ' ಸಾಮಗ್ರಿಯ ಲಭ್ಯತೆ ಇರುವ ಸಾಹಿತ್ಯ–ಸಂಸ್ಕೃತಿ ಕ್ಷೇತ್ರದ ಸಂಶೋಧನೆಯಲ್ಲಿ 'ಕವಿ–ಕಾಲ' ನಿರ್ಣಯವನ್ನು ಒಮ್ಮತದಿಂದ ಕೈಗೊಳ್ಳಲಾಗಿಲ್ಲ. ಚರಿತ್ರೆ ಪುರಾಣ ಐತಿಹ್ಯ–ಜಾನಪದ ಮಿತಗಳು ಹಾಗೂ ಶಾಸನಗಳಲ್ಲಿ ದಾಖಲಾದ ಅಭಿಪ್ರಾಯಗಳನ್ನು ಪರಿಗಣನೆಗೆ ತೆಗೆದುಕೊಂಡ ಮೇಲೂ ಇತ್ಯರ್ಥವಾಗದ ಹಲವಾರು ಸಂಗತಿಗಳು ನಮ್ಮ ಕಣ್ಣೆದುರಿಗಿವೆ. ಹಿರಿಯ ಸಂಶೋಧಕರಾದ ಡಾ॥ ಎಂ. ಎಂ. ಕಲಬುರ್ಗಿಯವರ 'ಮಾರ್ಗ'ದ ಎಲ್ಲ ಸಂಪುಟಗಳಲ್ಲೂ ಈ ಬಗೆಯ ಚರ್ಚೆ ವಾಗ್ವಾದಗಳು ನಡೆದಿರುವುದನ್ನು ಗಮನಿಸಬಹುದು. ಹಾಗೆ ನೋಡಿದರೆ ಸಾಹಿತ್ಯ–ಸಂಸ್ಕೃತಿ ಕ್ಷೇತ್ರದ ಸಂಶೋಧಕರಿಗೆ ಅಧಿಕೃತ ಎನ್ನಬಹುದಾದ ಅಪಾರ ಪ್ರಮಾಣದ ಆಕರ ಸಾಮಗ್ರಿ ಲಭ್ಯವಿದೆ. ಕವಿರಾಜಮಾರ್ಗದಿಂದ ಹಿಡಿದು ೧೯ನೇ ಶತಮಾನದ ತತ್ವಪದಕಾರರವರೆಗೆ ಅಸಂಖ್ಯಾತ ಮೂಲ ಪಠ್ಯಗಳು ತಾಳೆಗರಿಯಲ್ಲೋ, ಹಸ್ತಪ್ರತಿಯಲ್ಲೊ, ಶಾಸನರೂಪದಲ್ಲೋ ದೊರೆತಿವೆ. ನಮ್ಮ ಕಾಲಕ್ಕಂತೂ ಕನ್ನಡದ ಬಹುಪಾಲು ಕೃತಿಗಳು ಪರಿಷ್ಕೃತ ರೂಪದಲ್ಲೇ ದೊರೆಯುತ್ತವೆ.

ಒಂದು ನಿರ್ದಿಷ್ಟ ವಿಷಯದ ಸಂಶೋಧನೆ ಕೈಗೊಳ್ಳುವಾಗ ಮೂಲ ಪಠ್ಯಗಳು ಅದಕ್ಕೆ ಸಂಬಂಧಿಸಿದ ಟೀಕು, ವಿಮರ್ಶೆಗಳಂತಹ ಪ್ರಮುಖ ಆಕರಗಳು ದೊರೆತರೆ ಆಕರಗಳ ಸಾಚಾತನ ಅವುಗಳಲ್ಲಿನ ವೈರುಧ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನಿರ್ಣಯಕ್ಕೆ ಬರುವುದು ಕಷ್ಟದ ಸಂಗತಿಯೇನಲ್ಲ. ಆದರೆ ಸಂಗೀತ ಸಂಬಂಧಿ ಸಂಶೋಧನೆಗಳು ಪ್ರಮುಖ ಆಕರಗಳನ್ನು ದೊರಕಿಸಿಕೊಳ್ಳುವ ಹಂತದಲ್ಲೇ ಪರದಾಡಬೇಕಾಗುತ್ತದೆ... ಕನ್ನಡದ ಮೊದಲ ಶಾಸ್ತ್ರಗ್ರಂಥವಾದ ಕವಿರಾಜಮಾರ್ಗದಲ್ಲಿ ಪ್ರಸ್ತಾಪಿಸಲಾದ ಹಲವಾರು ಕೃತಿಗಳ ಪಠ್ಯಗಳು ತಾಳೆಗರಿ ಸೇರಿದಂತೆ ಯಾವ ರೂಪದಲ್ಲೂ ದೊರೆಯಲಿಕ್ಕಿಲ್ಲ. ಆದರೆ ಕವಿ–ಕಾವ್ಯ ಅದರ ಸ್ವರೂಪದ ಬಗ್ಗೆ ದಾಖಲಾಗಿರುವ ಸಂಗತಿಗಳು ಸಂಶೋಧನೆಗೆ ಸತ್ಯ ಶೋಧನೆಯ ಹಾದಿಯಲ್ಲಿ ದಿಕ್ಸೂಚಿಯಾಗಿಯಂತೂ ನಿಲ್ಲುತ್ತವೆ. ಸಂಗೀತ ಸಂಬಂಧಿ ಸಂಶೋಧನೆಗಳಿಗೆ ಶಾಸ್ತ್ರಗ್ರಂಥಗಳು ದೊರೆಯುತ್ತವೆಯೇ ಹೊರತು ಅನಾದಿ ಕಾಲದ ಗಾಯಕರ ಮೂಲ ಗಾಯನ ಕೇಳಲು ಸಿಗುವುದಿಲ್ಲ. ಅನಾದಿ ಕಾಲದ ಮಾತು ಬಿಡಿ, ಗಾನ ತಟ್ಟೆ ಬರುವುದಕ್ಕೆ ಮುಂಚಿನ ಮಹಾಚೇತನಗಳ ಮೂಲಗಾಯನವನ್ನು ಕೇಳುವ, ಆಸ್ವಾದಿಸುವ ಮತ್ತು ವಿಶ್ಲೇಷಿಸುವ ಸೌಭಾಗ್ಯ ಇಂದಿನ ಸಂಗೀತ ಸಂಶೋಧಕರಿಗೆ ಇಲ್ಲ.

ಪಂಪನ ಕಾವ್ಯಗಳನ್ನು ಬಹುಮುಖಿ ಆಯಾಮದಲ್ಲಿ ಅಧ್ಯಯನಕ್ಕೊಳಪಡಿಸಬಹುದು. ಪಂಪ ಮಾತ್ರವಲ್ಲ ಹಳೆಗನ್ನಡ ಕವಿಗಳ ಸಾಹಿತ್ಯದ ಮೇಲೆ ನೂರಾರು ಸಂಶೋಧನೆಗಳು ನಡೆದಿವೆ. ಪ್ರತಿ ಸಂಶೋಧಕ ತನ್ನ ಕಾಲದ ಕಣ್ಣೋಟದಲ್ಲಿ 'ಕಾವ್ಯಗಳನ್ನು' ವ್ಯಾಖ್ಯಾನಿಸಿ ಹೊಸ ಒಳನೋಟಗಳನ್ನು ಪಡೆದುಕೊಳ್ಳುವಲ್ಲಿ ಸಾಧ್ಯವಿದೆ–ಪಡೆದುಕೊಂಡಿದ್ದಾರೆ. ಆದರೆ ಸಂಗೀತ ಕ್ಷೇತ್ರದ ಸಂಶೋಧಕರಿಗೆ 'ಶಾಸ್ತ್ರಗ್ರಂಥಗಳಲ್ಲಿನ' ಮಾಹಿತಿಯನ್ನು ಮುಂದಿನ ಪೀಳಿಗೆಗೆ ರವಾನಿಸುವುದು ಬಿಟ್ಟು ಮತ್ತೇನನ್ನೂ ಮಾಡಲು ಸಾಧ್ಯವಾಗುತ್ತಿಲ್ಲ. ಆ ಕಾರಣಕ್ಕೆ ಸಂಗೀತ ಸಂಶೋಧನೆಯ ಮೆಥಡಾಲಜಿಯೆ ಬದಲಾಗುವುದು ಅಗತ್ಯವಿದೆ. ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ಭಾರತದಲ್ಲಿ ಅಸಂಖ್ಯಾತ ಶ್ರೇಷ್ಠ ಮಟ್ಟದ ಸಂಗೀತ ಕಲಾವಿದರು ಸಾಧನೆಗೈದು ಹೋಗಿದ್ದಾರೆ. ಸಾಧನೆಗೈಯುತ್ತಿದ್ದಾರೆ. ಆದರೆ ಸಂಗೀತ ಸಂಶೋಧಕರ ಸಂಖ್ಯೆ ಅದೇ ಪ್ರಮಾಣದಲ್ಲಿ ಹೆಚ್ಚುತ್ತಿಲ್ಲ.

ಸಂಗೀತ ಕ್ಷೇತ್ರಕ್ಕೆ ಸಂಬಂಧಿಸಿದ ಸಂಶೋಧನೆಗಳು ಸಂಗೀತ ಕಲೆಯ ಸ್ವರೂಪಕ್ಕೆ ತಕ್ಕಂತೆ 'ರೀಸರ್ಚ್ ಮೆಥಡಾಲಜಿ' ಅಳವಡಿಸಿಕೊಳ್ಳಬಹುದಿತ್ತು. ಆದರೆ ಈ ಹೊತ್ತಿಗೂ ಸಂಗೀತ ಹಾಗೂ ಸಂಗೀತ ಸಂಶೋಧಕರು ಸಾಹಿತ್ಯ–ಸಂಸ್ಕೃತಿಯ ಸಂಶೋಧಕರನ್ನೇ ಅನುಕರಿಸುತ್ತಿದ್ದಾರೆ. ಹಾಗಾದರೆ ಸಂಗೀತ ಸಂಶೋಧನೆಯಲ್ಲಿ ಸ್ವೋಪಜ್ಞತೆ ತಂದುಕೊಳ್ಳಲು ಸಾಧ್ಯವೆ? "ಭಾರತೀಯ ವೈದಿಕಯುಗದ ಸಂಗೀತ ಹಾಗೂ ಸಂಗೀತ ಸಾಧನೆಯ ಬಗೆಗೆ ಸಾಕಷ್ಟು ಉಲ್ಲೇಖಗಳು ಸಿಗುತ್ತವೆ. ವೇದ, ಬ್ರಾಹ್ಮಣ, ಉಪನಿಷತ್ತು ಹಾಗೂ ಆರಣ್ಯಕ ಗ್ರಂಥಗಳಲ್ಲಿ ಆ ಕಾಲದ ಸಂಗೀತದ ಸ್ಥಿತಿ, ಸಂಗೀತದ ಬಗೆಗಿದ್ದ ಜನರ ಮನೋಭಾವನೆ ಮತ್ತು ಆಗ ಪ್ರಚಾರದಲ್ಲಿದ್ದ ಸಂಗೀತದ ಬಗೆಗೂ ಹಲವಾರು ಅಂಶಗಳು ತಿಳಿದುಬರುತ್ತವೆ. ಋಗ್ವೇದ ಕಾಲದಲ್ಲಿ ಸಂಗೀತದ ಅಂಗಗಳಾದ ಗೀತ, ವಾದ್ಯ ಹಾಗೂ ನೃತ್ಯಗಳ ಪ್ರಚಾರವಿತ್ತೆಂಬುದು ಕಂಡುಬರುತ್ತದೆ" (ಡಾ॥ ಬಿಂದು ಮಾಧವ ಪಾಠಕ – ಭಾರತೀಯ ಸಂಗೀತ ಚರಿತ್ರೆ) – ಈ ಬಗೆಯ ಬರವಣಿಗೆ ಸಂಗೀತ ಸಂಶೋಧಕರಿಗೆ 'ಮಾದರಿ'ಯಾಗಿಬಿಟ್ಟಿದೆ.

ಎಂ.ಫಿಲ್, ಪಿಎಚ್‌ಡಿ ಪದವಿಗಾಗಿ ಸಿದ್ಧಪಡಿಸುವ ಬಹುಪಾಲು ಸಂಗೀತ ಸಂಬಂಧಿ ಸಂಶೋಧನಾ ಮಹಾಪ್ರಬಂಧಗಳು ಎಲ್ಲ ಬಗೆಯಲ್ಲೂ ಸಾಹಿತ್ಯ ಸಂಶೋಧಕರ ಮಾದರಿಯನ್ನೇ ಅನುಸರಿಸುತ್ತಿವೆ. ಲಭ್ಯ ಇರುವ ಕೆಲವೇ ಕೆಲವು ಸಂಗೀತ ಗ್ರಂಥಗಳ ಉಲ್ಲೇಖ, ಅವುಗಳ ಸಾರಸಂಗ್ರಹ ಅಭಿಪ್ರಾಯಗಳು ಪುನರಾವರ್ತನೆಗೊಳ್ಳುತ್ತಲೇ ಇರುತ್ತವೆ.

**ಡಾ॥ ಜಯದೇವಿ ಜಂಗಮಶೆಟ್ಟಿ**

ಈಗಾಗಲೇ ಆಧುನಿಕ ಸಂಗೀತ ಕ್ಷೇತ್ರದಲ್ಲಿ ಮಾನ್ಯವಾಗಿರುವ ಸಂಗೀತ ಶಾಸ್ತ್ರ ಗ್ರಂಥಗಳನ್ನು (ಸಾರಂಗದೇವನ–ಸಂಗೀತ ರತ್ನಕರ, ಭರತಮುನಿಯ – ನಾಟ್ಯಶಾಸ್ತ್ರ, ಮತಂಗಮುನಿಯ – ಬೃಹದ್ದೇಶಿ, ವೆಂಕಟಮುಖಿಯ – ಚತುರ್ದಂಡಿ ಪ್ರಕಾಶಿಕ, ರಮಾಮಾತ್ಯನ – ಸ್ವರಮೇಳ ಕಲಾನಿಧಿ, ಅಹೋಬಲನ – ಸಂಗೀತಪಾರಿಜಾತ, ಪಂ. ಸೋಮನಾಥನ – ರಾಗವಿಬೋಧ, ಲೋಚನನ–ರಾಗತರಂಗಿಣಿ, ಪಂ. ದಾಮೋದರನ–ಸಂಗೀತ ಶಾಸ್ತ್ರ ದರ್ಪಣ) ಅಭ್ಯಸಿಸುತ್ತಲೇ ನಮ್ಮ ಕಾಲದ ಅತ್ಯುತ್ಕೃಷ್ಟ ಸಂಗೀತವನ್ನು (ದಾಖಲೀಕರಣಗೊಂಡ) ಸಂಶೋಧನೆಗೊಳಪಡಿಸುವ ಅಗತ್ಯವಿದೆ. ಸಂಗೀತ ಸಂಬಂಧಿ ಸಂಶೋಧನೆಗಳು : ಹಳೆಯ ಕಾಲದ ಸಂಗೀತ ಶಾಸ್ತ್ರ ಗ್ರಂಥಗಳ ಸಾರಸಂಗ್ರಹ ಮತ್ತು ನಮ್ಮ ಕಾಲದ ಸಂಗೀತಗಾರರ 'ಜೀವನ' ಚಿತ್ರಗಳನ್ನು ಕಟ್ಟಿಕೊಡುವಲ್ಲಿ ತೃಪ್ತಿಪಟ್ಟುಕೊಳ್ಳುತ್ತಿವೆ. ಹೆಚ್ಚೆಂದರೆ; ಸಂಗೀತ ಘರಾಣೆಗಳ ಮಹತ್ವ ಪ್ರತಿಪಾದಿಸುವ ಹಳಸಲು ಮಾಹಿತಿಯ ಸಂಶೋಧನೆಗಳಿಗೆ ಕಟ್ಟಿಹಾಕಿಕೊಂಡಿದ್ದಾರೆ. ನಿಜವಾದ ಅರ್ಥದಲ್ಲಿ ಸಂಗೀತಾತ್ಮಕ ಅಧ್ಯಯನಗಳ ಯುಗ ಪ್ರಾರಂಭವಾಗಬೇಕಿದೆ.

ಹಾಗಂತ ನಾನು ಸಂಗೀತ ಕ್ಷೇತ್ರದಲ್ಲಿ ನಡೆದ, ನಡೆಯುತ್ತಿರುವ ಸಂಶೋಧನೆಯ ಗುಣಮಟ್ಟವನ್ನಾಗಲಿ, ಸಂಶೋಧನಾ ಕಾರ್ಯವನ್ನಾಗಲಿ ಗೌಣವಾಗಿ ಕಾಣುತ್ತಿಲ್ಲ. ಅದರಲ್ಲೂ ನಮ್ಮ ಹಿರಿಯರು ಸಂಗೀತ ಶಾಸ್ತ್ರಗ್ರಂಥಗಳನ್ನು ಅಪರೂಪದ ವ್ಯಾಖ್ಯಾನದೊಂದಿಗೆ ಈ ಕಾಲದ ಪೀಳಿಗೆಗೆ ಪರಿಚಯಿಸಿದ್ದೂ ದೊಡ್ಡ ಸಾಧನೆಯೇ. ಕೇವಲ ಸಂಗೀತದ ಮೇಲಿನ ಪ್ರೀತಿಯಿಂದ ಶ್ರೀ ರಾ. ಸತ್ಯನಾರಾಯಣ, ಶ್ರೀ ಸದಾನಂದ ಕನವಳ್ಳಿಯವರು ಸೇರಿದಂತೆ ಹಲವರು ಕೈಗೊಂಡ 'ಸಂಗೀತ ಶೋಧನೆ' ಹೊಸ ಪೀಳಿಗೆಯ ಸಂಶೋಧಕರಿಗೆ ಬಹುದೊಡ್ಡ ಆಕರದ ಗಣಿಯಾಗಿದೆ. ನಮ್ಮ ಕಾಲದ ಅಕಾಡೆಮಿಕ್ ಸಂಶೋಧನೆ ಒಟ್ಟಾರೆ ಸ್ವರೂಪದಲ್ಲಿ ಸ್ವೋಪಜ್ಞತೆ ಬರಬೇಕಾದರೆ ಸಾಹಿತ್ಯ ಸಂಶೋಧಕರನ್ನು ಅನುಕರಿಸುವುದನ್ನು ಬಿಡಬೇಕಿದೆ. ಸಂಗೀತ ಮೂಲತಃ ಪ್ರದರ್ಶನ ಕಲೆ. ಪ್ರದರ್ಶನ ಕಲೆಗಳು ಆಯಾ ಕಾಲದ ಮಹತ್ವದ ಸಾಧನೆಗಳು. ಆದರೆ ಎಲ್ಲಾ ಕಾಲದ ಮಹತ್ವದ ಕಲೆ ಎಂಬುದು ಸಾಬೀತಾಗಬೇಕಾದರೆ ದಾಖಲೀಕರಣ ಅತ್ಯಗತ್ಯ. ಪಂಪ, ರನ್ನ, ಜನ್ನ, ಬಸವಾದಿಶರಣರ ವಚನಗಳು, ಕುಮಾರವ್ಯಾಸ, ಲಕ್ಷ್ಮೀಶ, ಹರಿಹರ, ರಾಘವಾಂಕರ ಸಾಹಿತ್ಯ ಕೃತಿಗಳು ನಮ್ಮ ಕಾಲಕ್ಕೆ ಲಭ್ಯವಾಗಿದ್ದರಿಂದಲೇ ಅವು ಹೆಚ್ಚು ಸಮಕಾಲೀನವೂ, ಪ್ರಸ್ತುತವೂ ಎನಿಸಿಕೊಳ್ಳುತ್ತಿವೆ.

ಹಿಂದಿನವರ ಸಾಹಿತ್ಯದ ಬಗ್ಗೆ ಯಾರೋ ದಾಖಲಿಸಿದ ಅಭಿಪ್ರಾಯಗಳನ್ನೇ ನಾವು ಕಣ್ಣುಮುಚ್ಚಿ ಒಪ್ಪಿಕೊಳ್ಳುತ್ತಿಲ್ಲ. ಕನ್ನಡ ಸಾಹಿತ್ಯದ ಎಲ್ಲ ದಿಗ್ಗಜರನ್ನು ನಮ್ಮ ಕಾಲದ ಕಣ್ನೋಟದಲ್ಲಿ ಅರ್ಥೈಸಿ ಅವರ ಮಹತ್ವ ಪ್ರತಿಪಾದಿಸುತ್ತಿದ್ದೇವೆ. ಈ ವಿಷಯದಲ್ಲಿ ಸಾಹಿತ್ಯ ಸಂಶೋಧಕರು ಅದೃಷ್ಟವಂತರು. ಸ್ವಾಮಿ ಹರಿದಾಸ, ತಾನ್‌ಸೇನ್, ಬೈಜೂಬಾವರಾ ಸೇರಿದಂತೆ ಹಿಂದಿನ ಅನೇಕ ಸಂಗೀತಗಾರರ ಹಾಡುಗಾರಿಕೆಯ ದಾಖಲೀಕರಣ ಅಲಭ್ಯವಾಗಿರುವುದರಿಂದ ಬೇರೊಬ್ಬರ ಅಭಿಪ್ರಾಯಗಳನ್ನಷ್ಟೇ ಒಪ್ಪಿಕೊಂಡು ಮುಂದೆ ಸಾಗಬೇಕಾಗಿದೆ. ಈ ಮಾತು ಕೇವಲ ಗಾಯಕರಿಗೆ ಮಾತ್ರ ಅನ್ವಯಿಸಿ ಹೇಳುತ್ತಿಲ್ಲ; ದಾಖಲಾಗದೆ ಹೋದ ಅಸಂಖ್ಯಾತ ವಾದಕರು–ನುಡಿಸಿದ ಶ್ರೇಷ್ಠ ಸಂಗೀತ ಕಲಿಯಲು, ವಿಮರ್ಶಿಸಲು, ವಿಶ್ಲೇಷಿಸಲು ಸಿಗದಿರುವುದರಿಂದ ಲಭ್ಯ ಅಭಿಪ್ರಾಯಗಳನ್ನು ಒಪ್ಪಿಕೊಳ್ಳುವುದು ಮಾತ್ರ ನಮ್ಮ ಕಾಲದ ಸಂಶೋಧಕರ ಪಾಡು.

ನಮ್ಮ ಕಾಲದ ಸಂಗೀತ ಸಂಶೋಧಕರಿಗೆ 'ಪೂರ್ವಜರ ಸಂಗೀತ'ವೆಂದರೆ; ಯಾರೋ ಬರೆದಿಟ್ಟ ಅಭಿಪ್ರಾಯಗಳ ಮೊತ್ತವಷ್ಟೇ. ಹಿಂದಿನವರ ಅಭಿಪ್ರಾಯಗಳನ್ನು ಒರೆಗೆ ಹಚ್ಚುವಂತಿಲ್ಲ, ವಿಮರ್ಶಿಸುವಂತಿಲ್ಲ. ಅವರ ಅಭಿಪ್ರಾಯಗಳನ್ನು ಪುನರ್ ವ್ಯಾಖ್ಯಾನಿಸುವುದು ದೂರದ ಮಾತು. ಸಂಗೀತ ಚರಿತ್ರೆಯ 'ಮಿಸಿಂಗ್ ಲಿಂಕ್'ಗಳನ್ನು, ದಾಖಲಾಗದೆ ಹೋದ ಅಸಂಖ್ಯಾತ ಗಾಯಕ/ಗಾಯಕಿಯರನ್ನು ಪರಂಪರೆಯ ಅನೂಹ್ಯ ಸಂಗೀತ ಕಣಜದ ಭಾಗವಾಗಿ ಗ್ರಹಿಸಬೇಕಷ್ಟೇ. ಹಾಗೆ






ನೋಡಿದರೆ; ನಮ್ಮ ಕಾಲದ ಸಂಗೀತ ಸಂಶೋಧಕರಿಗೆ 'ಸಂಗೀತ ಚರಿತ್ರೆ' ಎಂಬುದು ಗತವಾದ ವೈಭವ ಮಾತ್ರ. ಹೆಚ್ಚೆಂದರೆ ಶಿಲ್ಪಗಳಲ್ಲಿ ನೆಲೆ ನಿಂತ ಸಂಗೀತಗಾರರು ಮತ್ತು ವಾದಕರ ಭಾವಭಂಗಿಗಳಲ್ಲಿ ವ್ಯಕ್ತವಾಗುವ ಅನಾಹತನಾದವನ್ನು ನಮ್ಮದಾಗಿಸಿಕೊಳ್ಳಬೇಕು.

ಸಂಗೀತ ಸಂಶೋಧನೆಯ ಒಟ್ಟಾರೆ ಸ್ವರೂಪದಲ್ಲಿ ಬದಲಾವಣೆಯಾಗಬೇಕೆಂದು ಹೇಳುವುದು ಸುಲಭ. ಅದರ ಸ್ವರೂಪ ಹೇಗಿರಬೇಕೆಂಬುದನ್ನು ನಿರ್ಧರಿಸುವುದು ಕಷ್ಟ. ಸಂಗೀತ ಪರಂಪರೆಯ ಅಧ್ಯಯನವಂತೂ ಸಂಗೀತ ಶಾಸ್ತ್ರಗ್ರಂಥಗಳ ಪರಾಮರ್ಶನೆಗೆ ಸೀಮಿತಗೊಳಿಸುವುದು 'ಮೂಲ ಆಕರಗಳ' ಅಲಭ್ಯತೆಯಿಂದ ಅನಿವಾರ್ಯ. ಆದರೆ ಕಳೆದ ಒಂದು ಶತಮಾನದಿಂದೀಚೆಗೆ ಗಾಯನ–ವಾದನ ಸೇರಿದಂತೆ ಅತ್ಯಂತ ಶ್ರೇಷ್ಠ ಸಂಗೀತ ದಾಖಲೀಕರಣಗೊಂಡಿದೆ. ಪರಂಪರೆಯ ಭಾಗವಾಗಿರುವ, ಸಂಗೀತ ಶಾಸ್ತ್ರ ಗ್ರಂಥಗಳಲ್ಲಿ ಅಡಕಗೊಂಡಿರುವ ಸಂಗೀತ ಜ್ಞಾನವನ್ನು ದಾಖಲೀಕರಣಗೊಂಡ ಶ್ರೇಷ್ಠ ಸಂಗೀತದೊಂದಿಗೆ ಮುಖಾಮುಖಿಯಾಗಿಸಿ ಹೊಸ ಬಗೆಯ ಸಂಶೋಧನಾ ಮಾದರಿಗಳನ್ನು ರೂಪಿಸಿಕೊಳ್ಳಬೇಕಿದೆ. ಸಂಗೀತದ ದಾಖಲೀಕರಣವೂ ಪೂರ್ವಾಗ್ರಹಗಳಿಂದ ಹೊರತಾಗಿಲ್ಲ. ಗಾನ ತಟ್ಟೆ ಆಗಮಿಸಿ ಹಳೆಯ ಕಾಲವಾಯಿತು. ಆದರೆ ಜಾನಪದ ಸಂಗೀತವು ಸೇರಿದಂತೆ ಬಹುಪಾಲು ಪ್ರದರ್ಶನ ಕಲೆಗಳು ದಾಖಲೀಕರಣಗೊಂಡಿದ್ದು ಇತ್ತೀಚಿನ ದಶಕಗಳಲ್ಲಿ.

ಸಂಗೀತ ಬೆಳವಣಿಗೆಯಲ್ಲಿ ಆಕಾಶವಾಣಿ / ದೂರದರ್ಶನದ ಪಾತ್ರ ಅಲ್ಲಗಳೆಯಲಾಗದು. ಆದರೆ ಅಲ್ಲಿ ದಾಖಲೀಕರಣಗೊಂಡ ಸಂಗೀತ ಎಲ್ಲ ಸಮುದಾಯಗಳ ಪ್ರತಿಭಾವಂತರನ್ನು ಒಳಗೊಂಡಿದೆ ಎಂದು ಹೇಳಲಾಗದು. ಆ ಕಾರಣಕ್ಕೆ ಸಂಗೀತ ಸಂಶೋಧನೆಯ ಮೆಥಡಾಲಜಿ ಆಕರಗಳನ್ನು ಸೃಷ್ಟಿಸುವ ಮೂಲಕ ಶುರುವಾಗಬೇಕು. ಲಭ್ಯ ಆಕರಗಳನ್ನು ಮಾತ್ರ ಅವಲಂಬಿಸಿ 'ಸಂಗೀತ ಚರಿತ್ರೆ' ಕಟ್ಟಿಕೊಳ್ಳುವ ಸ್ಥಿತಿಯಲ್ಲಿ ನಾವಿಲ್ಲ. ಎಲ್ಲ ಮೂಲಗಳಿಂದ ಆಕರಗಳನ್ನು ಸಂಗ್ರಹಿಸಿ ಈಗಾಗಲೇ ದಾಖಲೀಕರಣಗೊಂಡ ಆಕರಗಳನ್ನೂ ಸಂಶೋಧನೆಗೆ ಬಳಸಿಕೊಂಡಾಗ ಮಾತ್ರ ಸಂಗೀತಾತ್ಮಕ ಅಧ್ಯಯನಗಳಿಗೆ ಅಧಿಕೃತತೆ ಪ್ರಾಪ್ತವಾಗುತ್ತದೆ. ಸಂಗೀತದ ಮೂಲ ಪಾಠಗಳ ಸಾರಸಂಗ್ರಹಗಳನ್ನು ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಅನೂಚಾನವಾಗಿ ಹೇಳಿಕೊಡುತ್ತಲೇ ಇದ್ದೇವೆ. ಸಂಗೀತ ಪ್ರದರ್ಶನ ಕಲೆಯಾಗಿದ್ದರಿಂದ ಸಮಕಾಲೀನ ಸಂಗೀತದ ಶ್ರೇಷ್ಠ ಮಾದರಿಗಳನ್ನು 'ಸಂಗೀತ ಪಠ್ಯ'ವೆಂದು ಬೋಧಿಸಲು ಮುಂದಾದಾಗ ಮಾತ್ರ ಪಿಹೆಚ್‌ಡಿ ಹಂತದಲ್ಲಿ ಸಂಗೀತಾತ್ಮಕ ಸಂಶೋಧನ ಮಹಾಪ್ರಬಂಧಗಳು ಹೊರಬರಲು ಸಾಧ್ಯ.

ಸಂಗೀತ ಸಂಶೋಧಕರು ಆಕರ ಸಂಗ್ರಹದಿಂದ ಹಿಡಿದು ಎಲ್ಲ ಹಂತದಲ್ಲೂ ಸಾಹಿತ್ಯದ ರೀಸರ್ಚ್ ಮೆಥಡಾಲಜಿಯನ್ನು ಅನುಸರಿಸುತ್ತೇವೆ. ಆದರೆ ಸಾಹಿತ್ಯದ ವಿದ್ಯಾರ್ಥಿಗಳಿಗೆ ಪಂಪ, ರನ್ನ,

ಕುಮಾರವ್ಯಾಸ, ಕುವೆಂಪು, ಕಾರಂತ, ಬೇಂದ್ರೆಯವರ ಮೂಲ ಪಠ್ಯಗಳ ಶ್ರೇಷ್ಠ ಮಾದರಿಗಳನ್ನು ಕಲಿಸುವ ಮೂಲಕ ಸಾಹಿತ್ಯ ಚರಿತ್ರೆಯ ಮಿತಿ ಮತ್ತು ಸಾಧ್ಯತೆಗಳನ್ನು ಅರ್ಥ ಮಾಡಿಕೊಳ್ಳಲೂ ಅನುವು ಮಾಡಿಕೊಡುತ್ತಾರೆ. ಸಂಗೀತದ ಶಾಸ್ತ್ರದ ಮೂಲ ಪಾಠಗಳ ಜೊತೆಗೆ ಭಾರತರತ್ನ ಭೀಮಸೇನ ಜೋಶಿ, ಪದ್ಮವಿಭೂಷಣರಾದ ಪಂ. ಡಾ॥ ಮಲ್ಲಿಕಾರ್ಜುನ ಮನಸೂರ್, ಪಂ. ಕುಮಾರ ಗಂಧರ್ವ ಹಾಗೂ ಡಾ॥ ಬಸವರಾಜ ರಾಜಗುರು, ವಿದುಷಿ ಡಾ॥ ಗಂಗೂಬಾಯಿ ಹಾನಗಲ್ ಹೀಗೆ ಹಲವಾರು ಹಿರಿಯ ಗಾಯಕರ ಶ್ರೇಷ್ಠ ಗಾಯನದ ರಾಗಗಳನ್ನು ಮತ್ತು ಗಾಯಕಿ ಶೈಲಿ ಜೊತೆಗೆ ಅವರ ಗಾಯನದ ಮಾದರಿಗಳನ್ನು 'ಸಂಗೀತ ಪಠ್ಯ'ವನ್ನಾಗಿಸಿ ಕೇಳಿಸುವುದರೊಂದಿಗೆ ಕಲಿಸಿದರೆ ಸಂಗೀತ ಶಾಸ್ತ್ರದ ಸೃಜನಶೀಲ ಸಾಧ್ಯತೆಯನ್ನು ಅರ್ಥ ಮಾಡಿಕೊಳ್ಳಲು ಸಹಾಯವಾಗುತ್ತದೆ. ಗಾಯನದ ಪ್ರಾಯೋಗಿಕ ಕ್ರಿಯೆಯನ್ನು ಸಂಗೀತ ಸಂಬಂಧಿ ಪಾರಿಭಾಷಿಕ ಪದಗಳಾದ ಮೀಂಡ್, ಕಟ್ಕಾ, ಮುರ್ಕಿ, ಗಮಕ, ಕಣ್‌ಸ್ವರ, ಆಂದೋಲನ, ಕಂಪನ, ಲಯಕಾರಿ, ತಿಹಾಯಿ, ರಂಜಕತೆ, ಉಠಾವ್, ನ್ಯಾಸ, ಅಲ್ಪತ್ವ-ಬಹುತ್ವ, ಗಾಯಕಿ-ನಾಯಕಿ, ಬಹಲಾವ ಮತ್ತು ತಾನ ಪ್ರಕಾರಗಳಾದ ಸರಳತಾನ್, ಕೂಟತಾನ್, ಬೋಲ್‌ತಾನ್, ಮೇರುಖಂಡತಾನ್, ವಕ್ರತಾನ್, ಖಟ್ಕೆತಾನ್, ಝುಟ್ಕೆತಾನ್, ಸಪಾಟತಾನ್, ಗಿಟಕಿಡಿತಾನ್, ಗಮಕತಾನ್, ಮಿಶ್ರತಾನ್, ಜಬಡೆಕಿತಾನ್, ಫಿರತ್ಕಿತಾನ್, ಮುರ್ಕಿತಾನ್ – ಹೀಗೆ ಅನೇಕ ವಿಷಯಗಳನ್ನು ಸಂಶೋಧನೆಯಲ್ಲಿ ಅಳವಡಿಸಿ ಕೊಳ್ಳುವ ಅಗತ್ಯವಿದೆ. ಸಂಗೀತ ಶಾಸ್ತ್ರ ಮತ್ತು ಸಂಗೀತ ಪಠ್ಯ ಒಟ್ಟೊಟ್ಟಿಗೆ ಸಾಗಬೇಕು.

ಸಂಗೀತ ಸಂಶೋಧಕರ ಬಹುದೊಡ್ಡ ದೋಷವೆಂದರೆ, ಬರವಣಿಗೆ ಬಗೆಗಿರುವ ಅನಾದರ. ಗಾಯನ–ಬೋಧನೆ– ಸಂಶೋಧನೆ ಒಟ್ಟೊಟ್ಟಿಗೆ ಸಾಗಿದಾಗಲೇ ಗುಣಮಟ್ಟದ ಸಂಶೋಧನೆ ಸಾಧ್ಯವಾಗುತ್ತದೆ. ಸಂಗೀತ ಪರಂಪರೆಯ ಆಳವಾದ ಅರಿವು. ಸಂಗೀತ ಶಾಸ್ತ್ರದ ಸಮಗ್ರ ತಿಳುವಳಿಕೆ ಹಾಗೂ ಸಮಕಾಲೀನ ಸಂಗೀತದ ಶ್ರೇಷ್ಠ ಮಾದರಿಗಳ ಸೃಜನಾತ್ಮಕತೆಯ ಗ್ರಹಿಕೆ ಇದ್ದಾಗಲೇ ಸಂಗೀತ ಸಂಶೋಧನೆಗೆ ಆಳವೂ, ವಿಸ್ತಾರವೂ, ಘನತೆಯೂ ಪ್ರಾಪ್ತವಾಗುತ್ತದೆ. ಎಲ್ಲದಕ್ಕೂ ಮಿಗಿಲಾಗಿ ಪಿಹೆಚ್‌ಡಿ ಸಂಶೋಧನಾ ಮಹಾಪ್ರಬಂಧಗಳ ಪರಿವಿಡಿಯ ಸಿದ್ಧಮಾದರಿಯನ್ನು ತೆಗೆದುಹಾಕಬೇಕಿದೆ. ಅಷ್ಟು ಮಾತ್ರವಲ್ಲ, ಕೋರ್ಸ್‌ವರ್ಕ್ ಸಂದರ್ಭದಲ್ಲಿ ಸಂಗೀತದ ಸೃಜನಾತ್ಮಕತೆಯನ್ನು ಸಂಶೋಧನಾರ್ಥಿಗೆ ಮನವರಿಕೆ ಮಾಡಿಕೊಡುವ 'ಪಠ್ಯ' ಸಿದ್ಧಗೊಳಿಸಬೇಕಿದೆ.

ಸಂಗೀತ ಮತ್ತು ಸಂಗೀತಗಾರರ ಬಗ್ಗೆ ಸಂಗೀತಾಸಕ್ತರು ಬರೆಯುವುದು, ಅಧ್ಯಯನ ಕೈಗೊಳ್ಳುವುದು 'ವ್ಯಕ್ತಿ ಪ್ರತಿಷ್ಠಾಪನೆಯ' ಕಾರಣಕ್ಕಾಗಿ. ಅದು ಜೀವನ ಚರಿತ್ರೆಗಿಂತಲೂ ಭಿನ್ನವಾಗಿರುವುದಿಲ್ಲ. ಅಷ್ಟಕ್ಕೂ ಆ ಬಗೆಯ ಅಧ್ಯಯನಗಳಲ್ಲಿ ಸಂಗೀತಾತ್ಮಕ ಅಂಶಗಳು ಮಾಯವಾಗಿರುತ್ತವೆ. ಸಂಗೀತ ಮತ್ತು ಸಂಗೀತಗಾರರ ಕುರಿತು ಬಹುಪಾಲು ಅಧ್ಯಯನಗಳಲ್ಲಿ ಬರವಣಿಗೆಯ ಶೈಲಿ, ಭಾಷೆ ಚೆನ್ನಾಗಿರುತ್ತದೆ. ಆದರೆ ಮೂಲತಃ ಸಂಗೀತದ ಆಳವಾದ ಜ್ಞಾನವಿರುವುದಿಲ್ಲ. ಸಂಗೀತ ಸಂಶೋಧನೆ ಉಳಿದೆಲ್ಲ ಜ್ಞಾನ ಶಾಖೆಗಳಂತೆ ಅಕಾಡೆಮಿಕ್ ಆಗಿಯೇ ಬೆಳೆಯುವ, ವಿಸ್ತಾರಗೊಳ್ಳುವ ಅಗತ್ಯವಿದೆಯೇ. ಸಂಗೀತ ಸಂಶೋಧಕರು ಸಂಗೀತ ಮಾತ್ರವಲ್ಲ ಅನ್ಯಜ್ಞಾನ ಶಿಸ್ತುಗಳ ತಿಳುವಳಿಕೆ ಹೊಂದುವುದು ಕಾಲದ ಅಗತ್ಯವೆನಿಸಿದೆ. ಸಂಗೀತ ಪರಂಪರೆ ಸುದೀರ್ಘವೂ, ಹಿರಿದಾದುದೂ ಆಗಿದೆ. ಅಷ್ಟೇ ಅಲ್ಲ ಸಮಕಾಲೀನ ಭಾರತೀಯ ಸಂಗೀತ ಪ್ರಪಂಚವನ್ನೇ ಪ್ರಭಾವಿಸಿದೆ. ಭಾರತೀಯ ಸಂಗೀತ ಶಾಸ್ತ್ರಕಾರರು ಅಮೂಲ್ಯವಾದುದನ್ನು ಕಟ್ಟಿಕೊಟ್ಟಿದ್ದಾರೆ. ಈ ಎಲ್ಲವನ್ನು ಬೆನ್ನಿಗೆ ಕಟ್ಟಿಕೊಂಡೇ ಸಂಗೀತ ಸಂಶೋಧಕ ಸಮಕಾಲೀನವೂ, ಶ್ರೇಷ್ಠವಾಗಿದ್ದರ ಹುಡುಕಾಟ ನಡೆಸಬೇಕಿದೆ.

**ಡಾ॥ ಜಯದೇವಿ ಜಂಗಮಶೆಟ್ಟಿ**
ಸಹಾಯಕ ಪ್ರಾಧ್ಯಾಪಕರು, ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ
email : jayadevijangamashetti@gmail.com

# ಗಾಂಧಿಯ ಆತ್ಮ ಪಿಸುಗುಟ್ಟಿತು






ದೇಶದ ತುಂಬೆಲ್ಲಾ
ದ್ವೇಷ ಹರಡಿ
ಕಲ್ಲು ಮಣ್ಣಿನ
ಗುಡಿ ಕಟ್ಟಲು
ಹೃದಯ ಮಂದಿರಗಳ

ಒಡೆದು ಅವರು
ಘೋಷಣೆ ಕೂಗಿದರು
ಜೈ ಶ್ರೀರಾಮ್
ಆಗ
ಗಾಂಧಿಯ ಆತ್ಮ
ಪಿಸುಗುಟ್ಟಿತು
ಹೇ! ರಾಮ್....

ದನಗಳಿಗಾಗಿ
ಜನಗಳ ಕೊಂದು
ರಕ್ತ–ಸಿಕ್ತ ಕೈಗಳ
ಮೇಲೆತ್ತಿ ಅವರು
ಕೂಗಿದರು
ಯುದ್ಧೋನ್ಮಾದದಲಿ
ಜೈ ಶ್ರೀರಾಮ್
ಆಗ
ಗಾಂಧಿಯ ಆತ್ಮ
ಪಿಸುಗುಟ್ಟಿತು
ಹೇ! ರಾಮ್....

ಹಂತಕನಿಗೊಂದು
ಗುಡಿಕಟ್ಟಿ
ಗಂಟೆ ಬಾರಿಸುತ್ತಾ
ಘೋಷಣೆ ಕೂಗಿದರು
ಜೈ ಶ್ರೀರಾಮ್
ಆಗ
ಗಾಂಧಿಯ ಆತ್ಮ ಪಿಸುಗುಟ್ಟಿತು
ಹೇ! ರಾಮ್....

ಖಾವಿಯೊಳಗೆ
ಕಾಮ ಹರಿದಾಡಿದಾಗ
ಬಡಸೀತೆಯರ
ಮಾನಭಂಗ
ಆಗಲೂ
ಅವರು ಕೂಗಿದರು
ಜೈ ಶ್ರೀರಾಮ್

ಆಗ
ಗಾಂಧಿಯ ಆತ್ಮ
ನೊಂದು
ಪಿಸುಗುಟ್ಟಿತು
ಹೇ! ರಾಮ್....

**ಹುಲಿಕಟ್ಟಿ ಚನ್ನಬಸಪ್ಪ**
email : channabasappach250@gmail.com

# ಅಯೋಧ್ಯೆ ವಿವಾದದಲ್ಲಿ ಸುಪ್ರೀಂ ತೀರ್ಪು

## – ಒಂದು ವಿಮರ್ಶೆ

ಅಯೋಧ್ಯೆಯ ವಿವಾದದಲ್ಲಿ ಸುಪ್ರೀಂ ಕೋರ್ಟ್‌ನ ಐವರು ನ್ಯಾಯಾಧೀಶರ ಸಂವಿಧಾನ ಪೀಠ ನವೆಂಬರ್ ೯ರಂದು ಸರ್ವಸಮ್ಮತ ತೀರ್ಪು ಪ್ರಕಟಿಸಿದೆ. ವಿವಾದದ ಇತಿಹಾಸವು ೧೮೫೦ರಷ್ಟು ಹಳೆಯದು. ಒಂದೂವರೆ ಶತಮಾನದ ವಿವಾದಕ್ಕೆ ಒಂದು ರೀತಿಯಲ್ಲಿ ಐತಿಹಾಸಿಕ ತೀರ್ಪು ಬಂದಿದೆ. ಐತಿಹಾಸಿಕ ಅನ್ನುವುದಕ್ಕೆ ಪ್ರಮುಖ ಕಾರಣ, ದೇಶದ ಯಾವುದೇ ಭಾಗದಲ್ಲಿಯೂ ಅಹಿತಕರ ಘಟನೆಗಳು ನಡೆಯಲಿಲ್ಲ. ಶಾಂತಿ, ಸೌಹಾರ್ದತೆ, ಮತೀಯ ಸಾಮರಸ್ಯ, ಜನಗಳ ಐಕ್ಯತೆ – ಇವುಗಳೇ ಮುಖ್ಯ ಎಂಬ ತೀರ್ಪನ್ನು ನೂರ ಇಪ್ಪತ್ತು ಕೋಟಿ ಭಾರತೀಯರು ನೀಡಿದ್ದಾರೆ. ಧರ್ಮ ನಿರಪೇಕ್ಷತೆ ಅಥವಾ ಜಾತ್ಯತೀತತೆಗೆ ದೊರಕಿದ ದೊಡ್ಡ ಅಂಗೀಕಾರ ಇದು. ತೀರ್ಪನ್ನು ಜನ ಅತ್ಯಂತ ಪ್ರಬುದ್ಧವಾಗಿ ಸ್ವೀಕರಿಸಿದ್ದಾರೆ. ದೇಶವನ್ನು, ದೇಶದ ಜನರನ್ನು ಒಡೆಯುವ ಮತಾಂಧರಿಗೆ ಸಾಮಾನ್ಯ ಜನ ಪಾಠ ಕಲಿಸಿದ್ದಾರೆ. ಜನತಾ ಜನಾರ್ಧನನ ತೀರ್ಪಿಗೆ ಸುಪ್ರೀಂ ಕೋರ್ಟ್ ತೀರ್ಪು ಇಂಬು ಕೊಟ್ಟಿದೆ. ಇದಕ್ಕೆ ಕಾರಣ, ಜನರಲ್ಲಿ ಹುದುಗಿದ್ದ ಸಹಜ ಮಾನವ ಪ್ರಜ್ಞೆಯೇ ಅನ್ನುವುದು ಸತ್ಯ. ಜನಗಳ ಐಕ್ಯತೆಯನ್ನು, ಅವರುಗಳ ಬದುಕು ಇನ್ನಿತರ ಹಿತಾಸಕ್ತಿಗಳನ್ನು ಸಂರಕ್ಷಿಸಲು ಹೋರಾಡುತ್ತಿರುವ ಎಲ್ಲ ಸಾಮಾಜಿಕ ಶಕ್ತಿಗಳಿಗೆ ಇದು ಶಕ್ತಿವರ್ಧಕ.

**ಸುಪ್ರೀಂ ಕೋರ್ಟ್ ತೀರ್ಪು ಮೂರು ಮುಖ್ಯ ವಿಚಾರಗಳನ್ನು ಒಳಗೊಂಡಿದೆ**

➤ ಒಂದು, ವಿವಾದಾತ್ಮಕ ೨.೭೭ ಎಕರೆ ನಿವೇಶನ ಸಂಪೂರ್ಣ ರಾಮಲಲ್ಲಾಗೆ ಸೇರಿದ್ದು. ('ಲಲ್ಲಾ' ಅಂದರೆ ಕಿರಿಯ ಮೂರ್ತಿ)

➤ ಎರಡು, ಇನ್ನೊಬ್ಬ ಕಕ್ಷಿದಾರರಾಗಿದ್ದ ಸುನ್ನಿ ವಕ್ಫ್ (ವಕ್ಫ್ [WAKF] ಅಂದರೆ ಧಾರ್ಮಿಕ ದತ್ತಿ ಎಂದು ಅರ್ಥ ಮಾಡಬಹುದು) ಮಂಡಳಿಗೆ ಮಸೀದಿ ನಿರ್ಮಾಣಕ್ಕಾಗಿ ಅಯೋಧ್ಯೆಯ ಪ್ರಮುಖ ಜಾಗದಲ್ಲಿ ಪರ್ಯಾಯವಾಗಿ ಐದು ಎಕರೆ ಜಮೀನು.

➤ ಮೂರು, ೧೬ನೇ ಶತಮಾನದ ಬಾಬರಿ ಮಸೀದಿಯನ್ನು ಒಡೆದು ಹಾಕಿದ್ದು ಕಾನೂನು ಬಾಹಿರ.

ಈ ಮೂರು ಮುಖ್ಯ ಅಂಶಗಳನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸುವುದಾದರೆ ಪ್ರಮುಖ ವಿರೋಧಾಭಾಸಗಳನ್ನು ಗುರುತಿಸಬಹುದು. ಬಾಬರಿ ಮಸೀದಿಯನ್ನು ಡಿಸೆಂಬರ್ ೬, ೧೯೯೨ರಲ್ಲಿ ಧ್ವಂಸ ಮಾಡಿದ್ದು ತಪ್ಪು, ಕಾನೂನಿನ ಅಪರಾಧ ಎಂದು ಕಟುವಾಗಿ ಸುಪ್ರೀಂ ಕೋರ್ಟ್ ನಿಂದಿಸಿದೆ. ಇದನ್ನು ಒಪ್ಪಿಕೊಳ್ಳುವುದಾದರೆ, ಮಸೀದಿಯನ್ನು ಕೆಡವಿದ ಅದೇ ಜಾಗದಲ್ಲಿ ಮತ್ತೆ ಅದೇ ಮಸೀದಿಯನ್ನು ಪುನರ್ ನಿರ್ಮಾಣ ಮಾಡುವುದೇ ಸಮಂಜಸ ಅಥವಾ ತರ್ಕಬದ್ಧವಾಗಿರುತ್ತದೆ. ಅದು ಸಹಜ ನ್ಯಾಯವೂ ಸಹ ಆಗಿರುತ್ತದೆ. ಆದ್ದರಿಂದ ಅದೇ ಜಾಗದಲ್ಲಿ ರಾಮನ ಗುಡಿಯನ್ನು ಕಟ್ಟಿಸುವುದು ಹೇಗೆ ನ್ಯಾಯ? ಬೇರೊಂದು ಪ್ರದೇಶದಲ್ಲಿ ಮಸೀದಿಯನ್ನು ಕಟ್ಟುವುದಕ್ಕೆ ಐದು ಎಕರೆ ಜಮೀನು ನೀಡುವ ಆದೇಶ ಬೇಕಿರಲಿಲ್ಲ. ಇನ್ನೊಂದು ವಿಚಾರ. ವಿವಾದಿತ ೨.೭೭ ಎಕರೆ ಜಮೀನಿನಲ್ಲೇ ರಾಮ ಮಂದಿರ ಕಟ್ಟಬೇಕೆಂದು ಆಜ್ಞೆಯಾಗಿರುವುದರಿಂದ, ಡಿಸೆಂಬರ್ ೬, ೧೯೯೨ರಲ್ಲಿ ಬಾಬರಿ ಮಸೀದಿಯನ್ನು ಧ್ವಂಸ ಮಾಡಿದ್ದನ್ನು ಸಮರ್ಥಿಸಿದಂತೆಯೂ ಆಗುವುದು. ಎಲ್ಲೋ ಲಾಜಿಕ್‌ನಲ್ಲಿ ದೊಡ್ಡ ತೂತು! Logic is the life of law ಎಂಬ ಮಾತಿದೆ.

ತೀರ್ಪು ೧೦೪೫ ಪುಟಗಳನ್ನು ಒಳಗೊಂಡಿದೆ ಹಾಗೂ ಒಬ್ಬ ನ್ಯಾಯಮೂರ್ತಿಯ (ಹೆಸರು ಪ್ರಕಟಿಸಿಲ್ಲ) ೧೧೬ ಪುಟಗಳ ತೀರ್ಪು ನೀಡಲು ಕಾರಣಗಳನ್ನೊಳಗೊಂಡ ಅನುಬಂಧ (Addendum) ಸಹ ಇದೆ.

ತೀರ್ಪಿನಲ್ಲಿ ಅಡಕವಾಗಿರುವ ಕೆಲ ಭಾಗಗಳನ್ನು ನಾವು ಗಮನಿಸಬಹುದು.

✴ ಅಯೋಧ್ಯೆಯ ವಿವಾದ ಸ್ಥಿರ ಆಸ್ತಿಗೆ ಸಂಬಂಧಿಸಿದ್ದು. ಈ ವಿವಾದವನ್ನು ಧರ್ಮ ಅಥವಾ ನಂಬಿಕೆಯ ಆಧಾರದಲ್ಲಿ

**ನ. ಸುಂದರಮೂರ್ತಿ**

ದೇಶದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಪ್ರಕಟವಾಗಿದೆ. ತೀರ್ಪು ದೋಷಾತೀತವಲ್ಲ. ಆದರೆ ಸುಪ್ರೀಂ ಕೋರ್ಟ್ ನಿಜವಾಗಿಯೂ ಸುಪ್ರೀಂ. ಆದ್ದರಿಂದ ತೀರ್ಪನ್ನು ಒಪ್ಪಿ ಸುಪ್ರೀಂ ಕೋರ್ಟ್‌ಗೆ ಗೌರವ ಸಲ್ಲಿಸಬೇಕು. ತೀರ್ಪಿಗೆ ಎಲ್ಲರೂ ಬದ್ಧರು. ದೇಶದ ಬಹುಸಂಖ್ಯಾತ ಧರ್ಮದವರು ತೀರ್ಪನ್ನು ಸ್ವಾಭಾವಿಕವಾಗಿಯೇ ಸ್ವೀಕರಿಸುತ್ತಾರೆ. ಸ್ವೀಕರಿಸಿದ್ದಾರೆ. ಅಲ್ಪಸಂಖ್ಯಾತರು ಒಂದೂವರೆ ಶತಮಾನದ ವ್ಯಾಖ್ಯಾನದಿಂದ ಬಳಲಿ ಬೆಂಡಾಗಿ ವಿವಾದ ಮುಕ್ತಾಯಕ್ಕೆ ಬಂದರೆ ಸಾಕು ಅನ್ನುವ ಅಭಿಪ್ರಾಯದಲ್ಲಿದ್ದರು. ಆದ್ದರಿಂದ ಅಂತಿಮ ತೀರ್ಪು ಬಂದಾಗ ಜನ ನಿಟ್ಟುಸಿರು ಬಿಟ್ಟಿದ್ದಾರೆ.



ನಿರ್ಧರಿಸುವುದು ಸಾಧ್ಯವಿಲ್ಲ. ಸಾಕ್ಷ್ಯಗಳ ಆಧಾರದಲ್ಲಿ ಮಾತ್ರ ತೀರ್ಪು ನೀಡಲು ಸಾಧ್ಯ.

* ವಿವಿಧ ಧರ್ಮಗಳ ನಂಬಿಕೆಯ ನಡುವೆ ತಾರತಮ್ಯಕ್ಕೆ ಸಂವಿಧಾನದಲ್ಲಿ ಅವಕಾಶವಿಲ್ಲ. ಎಲ್ಲ ರೀತಿಯ ನಂಬಿಕೆ, ಪೂಜೆ ಮತ್ತು ಪ್ರಾರ್ಥನೆಗಳೆಲ್ಲವೂ ಸಮಾನ.
* ಸಿದ್ಧಾಂತ ಮತ್ತು ಧರ್ಮಕ್ಕೆ ಸಂಬಂಧಿಸಿದ ರಾಜಕೀಯ ತಕರಾರುಗಳಿಗಿಂತ ಕಾನೂನು ಬೇರೆಯಾಗಿಯೇ ಇರಬೇಕು.
* ೧೯೪೯ರಲ್ಲಿ ರಾಮನ ಮತ್ತು ಸೀತೆಯ ವಿಗ್ರಹಗಳನ್ನು ಮಸೀದಿಯಲ್ಲಿ ಇರಿಸಿದ್ದು ಹಾಗೂ ಡಿಸೆಂಬರ್ ೬, ೧೯೯೨ರಲ್ಲಿ ಮಸೀದಿಯನ್ನು ನಿರ್ಮೂಲ ಮಾಡಿದ್ದು ಕಾನೂನು ಬಾಹಿರ ಮತ್ತು ಅಪರಾಧ.
* ಮುಸಲ್ಮಾನರು ಮಸೀದಿಯಿಂದ ವಂಚಿತರಾಗಿದ್ದಾರೆ. ಈ ಅಂಶವನ್ನು ಪರಿಗಣಿಸದಿದ್ದರೆ ಅವರಿಗೆ ನ್ಯಾಯ ಮಾಡಿದಂತಾಗುವುದಿಲ್ಲ.
* ಕಂದಾಯ ದಾಖಲೆಗಳ ಪ್ರಕಾರ, ವಿವಾದಿತ ನಿವೇಶನವು ಸರ್ಕಾರಿ ಭೂಮಿ.

ಮೇಲ್ಕಂಡ ಅಂಶಗಳು ಒಂದೆಡೆ ಇರಲಿ. ಈಗ ನ್ಯಾಯಮೂರ್ತಿಗಳು ತೀರ್ಪಿನಲ್ಲಿ ಹೇಳಿದ ಕೆಲವು ಅಂಶಗಳನ್ನು ವಿಶ್ಲೇಷಿಸೋಣ.

"ವಿವಾದಿತ ಸ್ಥಳದಲ್ಲಿಯೇ ಭಗವಂತ ರಾಮ ಜನಿಸಿದ್ದು ಎಂಬ ಹಿಂದುಗಳ ನಂಬಿಕೆ ನಿರ್ವಿವಾದವಾದದ್ದು." – ಮುಖ್ಯ ನ್ಯಾಯಮೂರ್ತಿ ರಂಜನ್ ಗೋಗೋಯಿ.

"ವಿವಾದಿತ ನಿವೇಶನದ ಹೊರ ಅಂಗಳ ಹಿಂದುಗಳ ವಶದಲ್ಲಿ (ಸುಪರ್ದಿಯಲ್ಲಿ) ಇತ್ತು ಅನ್ನುವುದು ಸಾಬೀತಾಗಿದೆ. ಅಷ್ಟೇ ಅಲ್ಲದೆ, ಅವಧ್ (ಈಗಿನ ಅಯೋಧ್ಯೆ) ರಾಜ್ಯವನ್ನು ಬ್ರಿಟಿಷರು ೧೮೫೭ರಲ್ಲಿ ತಮ್ಮದಾಗಿಸಿಕೊಳ್ಳುವುದಕ್ಕೂ ಹಿಂದಿನಿಂದಲೂ, ವಿವಾದಿತ ಪ್ರದೇಶದ ಒಳ ಭಾಗದಲ್ಲೂ ಹಿಂದುಗಳು ಪೂಜೆ ಪ್ರಾರ್ಥನೆಗಳನ್ನು ಸಲ್ಲಿಸುತ್ತಿದ್ದರು ಅನ್ನುವುದು ಪ್ರಬಲವಾದ ಸಂಭವನೀಯ ಕಾರಣಗಳಿಂದ ಸಾಬೀತಾಗಿದೆ."

೧೮೫೭ರಲ್ಲಿ ಕಬ್ಬಿಣದ ಬೇಲಿ ಮತ್ತು ತಡೆಗೋಡೆಗಳನ್ನು ಬ್ರಿಟಿಷರು ನಿರ್ಮಿಸಿದ ಮೇಲೂ ಹೊರವಲಯದಲ್ಲಿ ಹಿಂದುಗಳು ಪೂಜೆಯನ್ನು ಮಾಡುತ್ತಿದ್ದರು.

ಸುಪ್ರೀಂ ಕೋರ್ಟ್‌ನ ತೀರ್ಪಿನಲ್ಲಿ ವ್ಯಕ್ತವಾಗಿರುವ ಈ ಮುಖ್ಯ ವಿಚಾರಗಳನ್ನು ಗಮನಿಸಿದ ಮೇಲೆ, ಮೂಡುವ ಅತಿ ಮುಖ್ಯ ಪ್ರಶ್ನೆ – ಯಾವ ಪುರಾವೆ, ಸಾಕ್ಷಿ ಆಧಾರಗಳ ಮೇಲೆ ಸುಪ್ರೀಂ ಕೋರ್ಟ್ ಸರ್ವಾನುಮತದ ತೀರ್ಪನ್ನು ಮಂದಿರದ ಪರವಾಗಿ ಘೋಷಿಸಿತು ಅನ್ನುವುದು.

ಒಂದು, ನಂಬಿಕೆ, ಪೂಜೆ ಮತ್ತು ಪ್ರಾರ್ಥನೆಗಳು ಆಧಾರವಾಗುವುದಿಲ್ಲ. ಸಾಹಿತ್ಯ, ಕತೆ, ವಿದೇಶಿ ಯಾತ್ರಿಕರ ವರದಿಗಳು – ಇವುಗಳೂ ಆಧಾರವಾಗುವುದಿಲ್ಲ. ರಾಮಾಯಣ, ಸ್ಕಂದ ಪುರಾಣ ಮುಂತಾದ ಪುರಾಣಗಳು, ಪುರಾಣಗಳಷ್ಟೇ. ನಮ್ಮ ಹಿಂದು ಪುರಾಣಗಳಲ್ಲಿ ಬ್ರಹ್ಮಾಂಡದಲ್ಲಿ ಸ್ವರ್ಗ, ನರಕ, ಪಾತಾಳ, ನಾಗಲೋಕ ಮುಂತಾದ ಹದಿನಾಲ್ಕು ಲೋಕಗಳಿವೆ, ಇವೆಲ್ಲ ಲೋಕಗಳನ್ನೂ ಸರ್ವಶಕ್ತ ಭಗವಂತನೇ ನಿರ್ಮಿಸಿದನು ಎಂಬ ಉಲ್ಲೇಖವಿದೆ. ಇವೆಲ್ಲ ನಿಜವೇ? ಪುರಾಣಗಳು ಇತಿಹಾಸವಲ್ಲ. ಮೌಖಿಕ ಸಾಕ್ಷ್ಯಗಳನ್ನು ಸ್ವೀಕರಿಸುವುದು ಚರ್ಚೆಗೆ ಎಡೆ ಮಾಡುತ್ತವೆ. ಹಾಗಾಗಿ ರಾಮಜನ್ಮ ಭೂಮಿಯ ಮೇಲೆ ಮಸೀದಿ ಕಟ್ಟಲಾಗಿದೆ, ಮಸೀದಿ ಕಟ್ಟಲಾದ ಸ್ಥಳವೇ ರಾಮನ ಜನ್ಮಸ್ಥಾನ ಅನ್ನುವುದಕ್ಕೆ ಬೇರೆ ಯಾವುದು ಆಧಾರ? ಮಂದಿರ ನಿರ್ಮಾಣದ ಕುರಿತು ಯಾವುದೇ ದಾಖಲೆಗಳಿಲ್ಲ. ಅದೇ ರೀತಿ, ಮಂದಿರವನ್ನು ಕೆಡವಿ ಮಸೀದಿ ನಿರ್ಮಿಸಲಾಯಿತು ಎಂಬ ವಿಚಾರಕ್ಕೂ ಯಾವುದೇ ದಾಖಲೆಗಳಿಲ್ಲ. ಈ ನೈಜ ಸಂಗತಿಗಳನ್ನು ತಳ್ಳಿಹಾಕಲು ಸಾಧ್ಯವಿಲ್ಲ.

೨೦೦೩ರಲ್ಲಿ ಪ್ರಕಟಿತವಾದ ಭಾರತೀಯ ಪುರಾತತ್ವ ಇಲಾಖೆಯ ಉತ್ಖನನ ವರದಿಯ ಆಧಾರದಲ್ಲೇ ಮಂದಿರದ ಪರವಾಗಿ ನಿರ್ಧಾರಕ್ಕೆ ಬರಲಾಯ್ತು ಎಂದು ನ್ಯಾಯಪೀಠ ಹೇಳಿಕೊಂಡಿದೆ. ಇದು ಸೂಕ್ಷ್ಮ ಹಾಗೂ ಗಂಭೀರ ವಿಚಾರ. ಪುರಾತತ್ವ ಇಲಾಖೆಯ ವರದಿಯನ್ನು ಎಚ್ಚರದಿಂದ ಪರಿಶೀಲಿಸುವ ಅಗತ್ಯವಿದೆ. ಅದಕ್ಕೆ ಮುಂಚೆ ರಾಮಜನ್ಮಭೂಮಿ ವಿವಾದ ಸುಪ್ರೀಂ ಕೋರ್ಟ್‌ಗೆ ಬಂದ ವಿಚಾರದ ಬಗ್ಗೆ ಒಂದೆರಡು ಮಾತು.

ರಾಮಜನ್ಮಭೂಮಿಯ ವಿವಾದ ಈ ಹಿಂದೆ ಅಲಹಾಬಾದ್ ಹೈಕೋರ್ಟ್‌ನಲ್ಲಿತ್ತು. ೨೦೧೦ರಲ್ಲಿ ಹೈಕೋರ್ಟ್ ತನ್ನ ತೀರ್ಪು ನೀಡಿ, ವಿವಾದಾತ್ಮಕ ನಿವೇಶನವನ್ನು ಎಲ್ಲ ಕಕ್ಷಿದಾರರಿಗೂ ಸಮನಾಗಿ ಹಂಚಲು ಆದೇಶ ಹೊರಡಿಸಿತು. ಇದನ್ನು ಒಪ್ಪದ ಕಕ್ಷಿದಾರರು ಸುಪ್ರೀಂ ಕೋರ್ಟ್‌ಗೆ ಅರ್ಜಿ ಸಲ್ಲಿಸಿದರು. ಮಂದಿರವನ್ನು ಕೆಡವಿ ಮಸೀದಿಯನ್ನು ಕಟ್ಟಲಾಗಿತ್ತು ಎಂಬ ವಾದದಲ್ಲಿ ಹುರುಳಿಲ್ಲ ಎಂದು ಹೈಕೋರ್ಟ್ ಹೇಳಿತ್ತು.

ವಿವಾದವನ್ನು ಬಗೆಹರಿಸುವ ನಿಟ್ಟಿನಲ್ಲಿ ಸುಪ್ರೀಂ ಕೋರ್ಟ್ ಪುರಾತತ್ವ ಇಲಾಖೆಯ ೨೦೦೩ರ ಉತ್ಖನನ ವರದಿಯನ್ನು ಆಧಾರವನ್ನಾಗಿ ಮಾಡಿಕೊಂಡಿತು. ೨೦೦೩ರಲ್ಲಿ ನಡೆಸಲಾದ ಉತ್ಖನನ ಮೊದಲನೆಯದಲ್ಲ. ಇದಕ್ಕೂ ಹಿಂದೆ ಮೂರು ಬಾರಿ ವಿವಾದಿತ ಸ್ಥಳದಲ್ಲಿ ಸರ್ವೇಕ್ಷಣೆಯನ್ನು ಭಾರತೀಯ ಪುರಾತತ್ವ ಇಲಾಖೆ ನಡೆಸಿತ್ತು. ಮೊದಲನೇ ಸರ್ವೇಕ್ಷಣೆ ೧೮೬೨-೬೩ರಲ್ಲಿ ಬ್ರಿಟಿಷ್ ಅಧಿಕಾರಿ ಅಲೆಕ್ಸಾಂಡರ್ ಕನ್ನಿಂಗ್‌ಹ್ಯಾಂ ನಡೆಸಿದ್ದರು. ಎರಡನೆಯದು ೧೯೬೯ರಲ್ಲಿ ಎ. ಕೆ. ನಾರಾಯಣ್, ಟಿ.ಎನ್. ರಾಯ್ ಮತ್ತು ಡಾಕ್ಟರ್ ಪುರುಷೋತ್ತಮ್ ಸಿಂಗ್ ಅವರಿಂದ. ಮೂರನೆಯದು, ೧೯೭೦ರಲ್ಲಿ ಬಿ.ಬಿ. ಲಾಲ್‌ರವರಿಂದ. ಕೆಲವು ಮಾಧ್ಯಮಗಳಲ್ಲಿ ಅಯೋಧ್ಯೆಗೆ ಸಂಬಂಧಿಸಿದಂತೆ ಆರು ಸರ್ವೇಕ್ಷಣೆಗಳು ನಡೆದಿವೆ ಎಂದೂ ವರದಿಗಳಾಗಿವೆ. ಕಡೆಯ ಸರ್ವೇಕ್ಷಣೆ ನಡೆದದ್ದು ೨೦೦೩ರಲ್ಲಿ. ಅಲಹಾಬಾದ್ ಹೈಕೋರ್ಟ್ ಆದೇಶದ ಮೇರೆಗೆ ೨೦೦೩ರಲ್ಲಿ ಪುರಾತತ್ವ ಇಲಾಖೆ ಅಯೋಧ್ಯೆಯಲ್ಲಿ ಉತ್ಖನನ ನಡೆಸಿತು. ಸುಪ್ರೀಂ ಕೋರ್ಟ್ ಯಾವ ೨೦೦೩ರ ಪುರಾತತ್ವ ಇಲಾಖೆಯ ವರದಿಯನ್ನು ಆಧಾರವನ್ನಾಗಿ ಬಳಸಿಕೊಂಡಿದೆಯೋ ಆ ವರದಿ ಅಲಹಾಬಾದ್ ಹೈಕೋರ್ಟ್‌ನ ಆದೇಶದಡಿಯಲ್ಲಿ ಹೊರಬಂದ ವರದಿ ಎಂಬುದು ಗಮನಾರ್ಹ.

೨೦೦೩ರ ಸರ್ವೇಕ್ಷಣೆಯ ನಂತರ ಪುರಾತತ್ವ ಇಲಾಖೆ ಅಯೋಧ್ಯೆಯ ಬಾಬರಿ ಮಸೀದಿ ತಳಭಾಗದಲ್ಲಿ ಮಂದಿರ ಇತ್ತು ಅನ್ನುವುದಕ್ಕೆ ಅನೇಕ ಆಧಾರಗಳು ದೊರೆಕಿವೆ ಎಂದು ವರದಿ ಮಾಡಿತು. ಇದನ್ನು ಸುಪ್ರೀಂ ಕೋರ್ಟ್ ಸ್ವೀಕರಿಸಿ ವಿವಾದ ಸ್ಥಳವನ್ನು ಮಂದಿರದ ಪರ ಇದ್ದ ಕಕ್ಷಿದಾರರಿಗೆ ತೀರ್ಪಿನ ಮೂಲಕ ನೀಡಿದೆ. ತನ್ನ ಸರ್ವಾನುಮತದ ತೀರ್ಪಿಗೆ ಪುರಾವೆ ಸಾಕ್ಷ್ಯಗಳ ಅಡಿಪಾಯ ಇತ್ತು ಎಂಬುದಾಗಿ ಸುಪ್ರೀಂ ಕೋರ್ಟ್ ಸಮರ್ಥಿಸಿಕೊಂಡಿದೆ. ತೀರ್ಪಿನಲ್ಲಿ ವ್ಯಕ್ತವಾಗಿರುವ ಅತ್ಯಂತ ಮುಖ್ಯ ಸಂಗತಿ ಇದು.

ಸುಪ್ರೀಂ ಕೋರ್ಟ್‌ನ ತೀರ್ಪಿಗೆ ಪುರಾತತ್ವ ಇಲಾಖೆಯ ೨೦೦೩ರ ವರದಿಯೇ ಮುಖ್ಯ ಆಧಾರ ಎಂಬುದು ಖಚಿತ. ಆದರೆ ಪುರಾತತ್ವ ಇಲಾಖೆಯ ೨೦೦೩ರ ಉತ್ಖನನದ ವರದಿಯೇ ಸಂದೇಹಾಸ್ಪದವಾದದ್ದು ಎಂಬ ಅಭಿಪ್ರಾಯವನ್ನು ಕೆಲವು ಹೆಸರಾಂತ ಪುರಾತತ್ವ ಶಾಸ್ತ್ರಜ್ಞರು ಹಾಗೂ ಚರಿತ್ರಕಾರರು ವ್ಯಕ್ತಪಡಿಸಿದ್ದಾರೆ. ಹಿಂದಿನ ಸರ್ವೇಕ್ಷಣೆಯ ವರದಿಗಳಲ್ಲಿ ವಿವಾದಿತ ಸ್ಥಳದಲ್ಲಿ ಮಂದಿರ ಇತ್ತು ಎಂದು ಎಲ್ಲೂ ಹೇಳಿರಲಿಲ್ಲ. ಸುಪ್ರೀಂ ಕೋರ್ಟ್ ಹಿಂದಿನ ಸರ್ವೇಕ್ಷಣೆಯ ವರದಿಗಳನ್ನು ಗಣನೆಗೆ ತೆಗೆದುಕೊಳ್ಳಲೇ ಇಲ್ಲ. ಅದಕ್ಕೆ ಕಾರಣ, ಬಾಬರಿ ಮಸೀದಿಯನ್ನು ಕೆಡವಿದ ನಂತರವೇ ಅನೇಕ ಹೊಸ ಕುರುಹುಗಳು ದೊರೆತವು, ಮಸೀದಿ ಧ್ವಂಸವಾಗದಿದ್ದರೆ ಅವುಗಳು ಸಿಗುತ್ತಿರಲಿಲ್ಲ, ಹೊಸ ಕುರುಹುಗಳ ಸಂಶೋಧನೆಯಲ್ಲಿ ಮಸೀದಿ ಕೆಳಗೆ ಮಂದಿರ ಇದ್ದುದಕ್ಕೆ ಸಾಕ್ಷ್ಯ ದೊರೆಯಿತು ಎಂದು ಸುಪ್ರೀಂ ಕೋರ್ಟ್ ತೀರ್ಪಿನಲ್ಲಿ ಸ್ಪಷ್ಟೀಕರಣ ನೀಡಿದೆ. ೧೯೯೨ರಲ್ಲಿ ಬಾಬರಿ ಮಸೀದಿಯನ್ನು ನೆಲಸಮ ಮಾಡುವ ಸಂದರ್ಭದಲ್ಲಿ ಮತೀಯ ಶಕ್ತಿಗಳು ತಮಗೆ ಮುಂದೆ ಅನುಕೂಲವಾಗಬಹುದಾದ ಅನೇಕ ವಸ್ತುಗಳನ್ನು ಕಳ್ಳತನದಿಂದ ಅಥವಾ ಮೋಸದಿಂದ ಭಗ್ನಾವಶೇಷಗಳಲ್ಲಿ ಬೆರಕೆ ಮಾಡಿದ್ದರು ಎಂಬ ಸಂಶಯವೂ ಪ್ರಬಲವಾಗಿತ್ತು. ೨೦೦೩ರಲ್ಲಿ ಅವಶೇಷಗಳ ಮೇಲುಭಾಗಗಳಲ್ಲಿ ಮಾತ್ರ ಸರ್ವೇಕ್ಷಣೆ ಮಾಡಲಾಗಿತ್ತು. ಮೋಸದ ಕೆಲಸ ಬೆಳಕಿಗೆ ಬರಲಿಲ್ಲ. ಮತ್ತೆ, ನಮ್ಮ ದೇಶದ ಹೆಸರಾಂತ ನಾಲ್ಕು ಮಂದಿ ಚರಿತ್ರಕಾರರು ವಿವಾದಿತ ಸ್ಥಳಕ್ಕೆ ೨೩ ಅಕ್ಟೋಬರ್ ೧೯೯೨ರಲ್ಲಿ ಭೇಟಿ ನೀಡಿ, ಪುರಾತತ್ವ ಇಲಾಖೆ ತೋಡಿದ್ದ ನಾಲ್ಕನೇ ಗುಂಡಿಯ ನಿವೇಶನದ ಪುಸ್ತಕ (Site Book of Ayodhya Trench IV)ವನ್ನು ಪರೀಕ್ಷಿಸಲು ಕೇಳಿದಾಗ, ಇಲಾಖೆ ಸಿಬ್ಬಂದಿಗಳು

ವಿವರಗಳನ್ನು ನೀಡಲು ಸಹಕರಿಸಲಿಲ್ಲ ಮತ್ತು ಪರಿಶೀಲನೆಗೆ ನಿವೇಶನ ಪುಸ್ತಕ ನಿರಾಕರಿಸಲಾಗಿತ್ತು. ಇವೆಲ್ಲ ವಿಚಾರಗಳನ್ನು ಸಮಗ್ರವಾಗಿ ಪರಿಗಣಿಸುವುದಾದರೆ ಸುಪ್ರೀಂ ಕೋರ್ಟ್ ಮುಂದೆ ಇದ್ದ ಭಾರತೀಯ ಪುರಾತತ್ವ ಇಲಾಖೆಯ ೨೦೦೩ರ ಸರ್ವೇಕ್ಷಣೆಯ ವರದಿ ಬಲಹೀನವಾದದ್ದು ಹಾಗೂ ಸಂದೇಹಾಸ್ಪದವಾದದ್ದು ಎಂಬ ಶಂಕೆ ಉಂಟಾಗುತ್ತದೆ. ನಂಬಿಕೆ, ಧರ್ಮ, ಪೂಜೆ, ಆರಾಧನೆಗಳ ಆಧಾರದಲ್ಲಿಯೇ ಸುಪ್ರೀಂ ಕೋರ್ಟ್ ಬಹು ಮಟ್ಟಿಗೆ ತನ್ನ ತೀರ್ಪನ್ನು ನೀಡಿದೆ ಅನ್ನುವುದು ತಿಳಿಯ ಬರುತ್ತದೆ.

ದೇಶದ ಸರ್ವೋಚ್ಚ ನ್ಯಾಯಾಲಯದ ತೀರ್ಪು ಪ್ರಕಟವಾಗಿದೆ. ತೀರ್ಪು ದೋಷಾತೀತವಲ್ಲ. ಆದರೆ ಸುಪ್ರೀಂ ಕೋರ್ಟ್ ನಿಜವಾಗಿಯೂ ಸುಪ್ರೀಂ. ಆದ್ದರಿಂದ ತೀರ್ಪನ್ನು ಒಪ್ಪಿ ಸುಪ್ರೀಂ ಕೋರ್ಟ್‌ಗೆ ಗೌರವ ಸಲ್ಲಿಸಬೇಕು. ತೀರ್ಪಿಗೆ ಎಲ್ಲರೂ ಬದ್ಧರು. ದೇಶದ ಬಹುಸಂಖ್ಯಾತ ಧರ್ಮದವರು ತೀರ್ಪನ್ನು ಸ್ವಾಭಾವಿಕವಾಗಿಯೇ ಸ್ವೀಕರಿಸುತ್ತಾರೆ. ಸ್ವೀಕರಿಸಿದ್ದಾರೆ. ಅಲ್ಪಸಂಖ್ಯಾತರು ಒಂದೂವರೆ ಶತಮಾನದ ವ್ಯಾಜ್ಯಾನದಿಂದ ಬಳಲಿ ಬೆಂಡಾಗಿ ವಿವಾದ ಮುಕ್ತಾಯಕ್ಕೆ ಬಂದರೆ ಸಾಕು ಅನ್ನುವ ಅಭಿಪ್ರಾಯದಲ್ಲಿದ್ದರು. ಆದ್ದರಿಂದ ಅಂತಿಮ ತೀರ್ಪು ಬಂದಾಗ ಜನ ನಿಟ್ಟುಸಿರು ಬಿಟ್ಟಿದ್ದಾರೆ. ಒಂದು ಅಂಶವನ್ನು ಅತ್ಯಂತ ಜಾಗ್ರತೆಯಿಂದ ಗಮನಿಸಬೇಕು. ತೀರ್ಪು ಪ್ರಕಟವಾಗುವ ಒಂದು ವಾರಕ್ಕೆ ಹಿಂದಿನಿಂದಲೂ ಸಂಘ ಪರಿವಾರ, ತೀರ್ಪು ಹೇಗೆ ಬಂದರೂ ಅದನ್ನು ಒಪ್ಪಿಕೊಳ್ಳಬೇಕು. ಶಾಂತಿ, ಸಂಯಮ ಶಿಸ್ತು ಕಾಪಾಡಬೇಕು ಎಂದು ಪ್ರಚಾರ ಮಾಡುತ್ತಿತ್ತು. ತೀರ್ಪಿನ ಬಗ್ಗೆ ಅವರಿಗೇನಾದರೂ ಮುನ್ಸೂಚನೆ ಇತ್ತೇ ಎಂಬ ಸಂದೇಹ ಉಂಟಾಗುವುದು ಸಹಜ. ಒಂದು ವೇಳೆ, ತೀರ್ಪು ಬೇರೆಯ ರೀತಿ ಬಂದಿದ್ದರೆ ಶಾಂತಿ, ಸಂಯಮ, ಶಿಸ್ತು ಎಲ್ಲಿರುತಿತ್ತು – ಭಾರತದ ಮೂಲೆ ಮೂಲೆಗಳಲ್ಲಿ ರಕ್ತದ ಕೋಡಿ ಹರಿಯುತ್ತಿರಲಿಲ್ಲವೇ?

ತೀರ್ಪನ್ನು ಯಾವ ನ್ಯಾಯಮೂರ್ತಿ ಬರೆದರು ಎಂಬುದು ಗೊತ್ತಿಲ್ಲ, ನಿಗೂಢವಾಗಿದೆ. ಪ್ರಶ್ನೆ ಅನವಶ್ಯಕ. ತೀರ್ಪು ಏನು ಅನ್ನುವುದೇ ಪ್ರಸ್ತುತ. ಮತ್ತೊಂದು ಮುಖ್ಯ ವಿಚಾರ. ಸುಪ್ರೀಂ ಕೋರ್ಟ್ ತೀರ್ಪಿನಿಂದ ನಿರಂತರ ಕಾಡುತ್ತಿದ್ದ ವಿವಾದ ಕೊನೆಗೊಂಡಿದೆಯೇ? ಅಥವಾ ದೇಶದಲ್ಲಿ ಮತೀಯ ಭಾವನೆಗಳನ್ನು ಕೆದಕಿ ಧ್ರುವೀಕರಣಕ್ಕೆ ಎಡೆಮಾಡಿದೆಯಾ? ಈ ಪ್ರಶ್ನೆಗಳು ದೇಶದ ಮುಂದಿನ ಹಾದಿಯನ್ನು ತೀರ್ಮಾನಿಸುತ್ತವೆ. ಸಂಘ ಪರಿವಾರ ಈಗ ಹೇಳುತ್ತಿರುವ ಘೋಷಣೆ, "ಅಯೋಧ್ಯಾ ತೋ ಜನ್ಕಿ ಹೈ, ಕಾಶೀ ಮಥುರ ಬಾಕಿ ಹೈ!" (ಅಯೋಧ್ಯೆ ಬರೀ ಟ್ರೇಲರ್ ಮಾತ್ರ, ಕಾಶೀ ಮಥುರ ಇನ್ನೂ ಬರಲಿದೆ, ಎಂದು ಅರ್ಥ). ಬಹುಸಂಖ್ಯಾತರ ರಾಷ್ಟ್ರೀಯತೆಯೇ ಗೆಲುವು ಸಾಧಿಸಿದೆ ಎಂಬುದು ಸಂಘ ಪರಿವಾರದ ನಿಚ್ಚಳ ಅಭಿಪ್ರಾಯ. ರಾಷ್ಟ್ರೀಯತೆಯನ್ನು ಗುರುತಿಸುವುದಾದರೂ ಹೇಗೆ? ಮತ್ತೆ ಭಾರತದಂತಹ ವೈವಿಧ್ಯಪೂರ್ಣ ದೇಶದಲ್ಲಿ ಬಹುಸಂಖ್ಯಾತರೇ ದೇಶದ ವಿಧಿಯನ್ನು ನಿರ್ಣಯಿಸುವರೇ, ಇತರರ ಬದುಕು ಏನು? ಜಾತ್ಯತೀತತೆ ಮತ್ತು ವೈಜ್ಞಾನಿಕ ಮನೋಭಾವನೆ ಎಂಬುದು ಬರೀ ಸಂವಿಧಾನದ ಪ್ರಸ್ತಾವನೆಯಲ್ಲಿ (Preamble of the Constitution) ಮಾತ್ರ ಅಡಕವಾಗಿರುವ ವಿಚಾರವೇ? ದೇಶದ ಇಂದಿನ ರಾಜಕೀಯ ಪರಿಸ್ಥಿತಿಯಲ್ಲಿ ಅಸಮ್ಮತಿ ಸೂಚಿಸುವುದೇ ಕಷ್ಟದ ಕೆಲಸ, ಅದು ದೇಶದ್ರೋಹವೆಂದು ಆಪಾದಿಸಬಹುದು. ಭಯದ ಅಡಿಯಲ್ಲಿ ಜನರ ಬದುಕು ಸಾಗುತ್ತಿದೆ.

ಶಬರಿಮಲೈ ವಿಚಾರದಲ್ಲಿ ಸುಪ್ರೀಂ ಕೋರ್ಟ್ ಎಲ್ಲ ವಯಸ್ಸಿನ ಮಹಿಳೆಯರೂ ಅಡ್ಡಿ ಆತಂಕವಿಲ್ಲದೆ ಸ್ವಾಮಿ ಅಯ್ಯಪ್ಪನ ದರ್ಶನ ಮಾಡಬಹುದು ಎಂದು ತೀರ್ಪು ಹೇಳಿದಾಗ ಯಾಕೆ ಸಂಘ ಪರಿವಾರದವರು ಸುಪ್ರೀಂ ಕೋರ್ಟಿಗೆ ಧಿಕ್ಕಾರ ಹಾಕಿದರು? ಅದೇ ಸುಪ್ರೀಂ ಕೋರ್ಟ್‌ಗೆ ಇಂದು ಜೈ ಶ್ರೀರಾಮ್! ಇದೇ ಜನ ದೇಶದ ಹಾಲಿ ಕಾನೂನನ್ನು ಕೈ ಬಿಟ್ಟು ಮನುಸ್ಮೃತಿಯನ್ನು ಅಳವಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆಯನ್ನು ಪ್ರತ್ಯಕ್ಷವಾಗಿಯೇ ವ್ಯಕ್ತಪಡಿಸುತ್ತಿದ್ದಾರೆ.

ದೇಶದ ಇಂದಿನ ಸ್ಫೋಟಕ ರಾಜಕೀಯ ಪರಿಸ್ಥಿತಿಯನ್ನು ಸುಪ್ರೀಂ ಕೋರ್ಟ್ ತೀರ್ಪು ಕನ್ನಡಿ ಹಿಡಿದು ಪ್ರತಿಬಿಂಬಿಸುತ್ತದೆ. ಧರ್ಮ ಅನ್ನುವುದು ಜನರಿಗೆ ಅಫೀಮು ಇದ್ದ ಹಾಗೆ (Religion is the opium of the masses). ಕೇಂದ್ರದಲ್ಲಿ ಅಧಿಕಾರಾರೂಢರಾಗಿರುವ ಇಂದಿನ ರಾಜಕಾರಣಿಗಳಿಗೆ ಇದು ಚೆನ್ನಾಗಿ ಮನವರಿಕೆ ಆಗಿದೆ.

ನರೇಂದ್ರ ಮೋದಿ ಸರ್ಕಾರದ ಮುಂದಿನ ಅಜೆಂಡ ಸಮಾನ ನಾಗರಿಕ ಸಂಹಿತೆ (Uniform Civil Code) ಆಗಿರಬಹುದೇ? ಕಾದು ನೋಡುವ.

**ನ. ಸುಂದರಮೂರ್ತಿ**
ಸಂಖ್ಯೆ ೧೪, ೬ನೇ ಅಡ್ಡ ರಸ್ತೆ, ಶ್ರೀರಾಮಪುರ, ಬೆಂಗಳೂರು – ೫೬೦ ೦೨೧
email : prakash.hebbar@rediffmail.com

## ದೇವರ ಕಾಲು




"ಅಮ್ಮಾ" ಚರ್ಚ್ ಎಂದರೇನು?
ಮಗುವೊಂದು ಕೇಳಿತು.
ಜಾನ್ ದೇವರ ಪೂಜಿಸುವ ಸ್ಥಳ
ತಾಯಿ ಉತ್ತರಿಸಿದಳು

'ದೇವಸ್ಥಾನವೆಂದರೇನು?'
ರಂಗಪ್ಪ ದೇವರನ್ನು ಪೂಜಿಸುವ ಸ್ಥಾನ.
ಮಸೀದಿ ಎಂದರೇನು?
ಮಗುವಿನ ಪ್ರಶ್ನೆ ಮುಂದುವರಿಯಿತು
ರಹೀಂ ದೇವರನ್ನು ಆರಾಧಿಸುವ ಭವನ

ರಂಗಪ್ಪನ ದೇವರು ಮಸೀದಿಯಲ್ಲಿಲ್ಲವಾ?
ಮುಗ್ಧ ಮಗುವಿನ ಪ್ರಶ್ನೆ ಕೊನೆಯಾಗಲಿಲ್ಲ.
ಪ್ರಶ್ನೆ ಕೇಳಿದವರನ್ನು ನರಕಕ್ಕೆಸೆಯುತ್ತಾನೆ ದೇವರು
ಸಿಡುಕಿದಳು ತಾಯಿ
ಮುಖ ಅರಳಿಸಿ ಬಂತು ಮತ್ತೊಂದು ಪ್ರಶ್ನೆ.

ಯಾವ ದೇವರು?
ಮಸೀದಿಯ ದೇವರೇ?
ಚರ್ಚಿನ ದೇವರೇ?
ದೇವಸ್ಥಾನದ ದೇವರೇ ?
ತಾಯಿಯ ಕೆಂಗಣ್ಣಿಗೆ ಮಗು ಸೋತಿತು
ಜಾಗ ಖಾಲಿ ಮಾಡಿದರೂ ಮನ ಮುದುಡಲಿಲ್ಲ.
ಚಿಂತನೆ ಮುಂದುವರಿಯಿತು

ದೇವಸ್ಥಾನದ ದೇವರೇಕೆ ಮಸೀದಿಗೆ ಬರಲಾರರು?
ಚರ್ಚಿಗೆ, ಮಸೀದಿಗೆ ಕೂಡಾ?
ಇವರು ಅಲ್ಲಿಗೆ, ಅವರು ಇಲ್ಲಿಗೆ
ಬರಲಾರರೇಕೆ?
ಎಲ್ಲರೂ ಇದ್ದಲ್ಲೇ ಇದ್ದು ಗುರುಗುಟ್ಟುವರೇಕೆ, ನಾಯಿಯಂತೆ ?
ಅಥವಾ
ಹೋಗಿ ಬರಲು ಈ ದೇವರುಗಳಿಗೆ
ಕಾಲುಗಳೇ ಇಲ್ಲವೇ?

**ಡಾ॥ ಸಾರಾ ಅಬೂಬಕ್ಕರ್**
ನಂ. ೨–೨೧–೧೬೩೧/೨, ಮೈಕ್ರೋವೇವ್ ಸ್ಟೇಷನ್ ರೋಡ್
ಲೇಡಿ ಹಿಲ್, ಮಂಗಳೂರು – ೫೭೫೦೦೬





# ಚಿತ್ರ ಚೈತನ್ಯದ ಸಿಂಚನ ಮೂಡಿಸಿದ ಜಗತಾಪ ಮಹಾದೇವ

ಶಿಕ್ಷಕ ವೃತ್ತಿಯಿಂದ ಮನದ ಚಿತ್ತಾರ ಅರಳಿ, ದಾರ್ಶನಿಕ ಕಲ್ಪನೆ ಕಟ್ಟಿ, ಮಕ್ಕಳ ಕಣ್ಣು ಅರಳಿಸುವ ನೈಪುಣ್ಯ ನಿಜವಾದ ಶಿಕ್ಷಕನಿಗೆ ದಕ್ಕಿದರೆ, ಆತನು ಜನಮಾನ್ಯ ಶಿಕ್ಷಕನಾಗುತ್ತಾನೆ ಎನ್ನುವುದಕ್ಕೆ ಮಹಾದೇವ ಜಗತಾಪ ಸಾಕ್ಷಿ. ವಿಜಯಪುರ ಜಿಲ್ಲೆಯ ಬಸವನಬಾಗೇವಾಡಿಯ 'ಮುತ್ತಗಿ'ಯಲ್ಲಿ ಜೂನ್ 1ರ 1957ರಲ್ಲಿ ಜನನ. ಕಲಾಶಿಕ್ಷಣ (ಡಿಟಿಸಿ. ಡಿಎಂ. ಎಎಂ.) 1980ರಲ್ಲಿ ಪಡೆದು ಡಿಪ್ಲೋಮಾ ಡ್ರಾಯಿಂಗ್ ಆ್ಯಂಡ್ ಪೇಂಟಿಂಗ್ (1983), ಯೋಗ ಕುರಿತು 14 ಬಗೆಯ ತರಬೇತಿ. ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯೊಂದಿಗೆ 14 ಬಾರಿ, 38 ಬಾರಿ ಸಮೂಹ ಚಿತ್ರ ಪ್ರದರ್ಶನ, 43 ಸಾಂಘಿಕ ಚಟುವಟಿಕೆಗಳಾದ ಲೇಖಕರ ಸಂಘ, ಕರ್ನಾಟಕ ಲಲಿತ ಅಕಾಡೆಮಿ ಏರ್ಪಡಿಸಿದ ಕಲಾವಿಚಾರ ಸಂಕಿರಣ. ಧಾರವಾಡ ಬಾಲಭವನ ಸದಸ್ಯ, ಗುಳೇದಗುಡ್ಡ ವಲಯದ ಕಸಾಪ ಅಧ್ಯಕ್ಷ ಮುಂತಾದ ಚಟುವಟಿಕೆಗಳಲ್ಲಿ ಭಾಗಿ.

ಜಗತಾಪ ಅವರು 6 ಕೃತಿಗಳನ್ನು, 20 ಚಿತ್ರಕಲಾ ಸಂಶೋಧನಾ ಲೇಖನಗಳನ್ನು, 4 ಅನುವಾದಿತ ಲೇಖನಗಳನ್ನು, 16 ವಿಮರ್ಶಾ ಲೇಖನಗಳನ್ನು ಪ್ರಕಟಿಸಿದ್ದಾರೆ. ದೇಶೀ ಸಂಸ್ಕೃತಿಯನ್ನು ಬಿಂಬಿಸುವ 'ಬಾಣಂತಿಕಲ್ಲು', ಬಟ್ಟೆಗೊಂದು ಬಣ್ಣದ ಚಿತ್ತಾರ, ಸಕ್ಕರೆ ಆರತಿ ಹಬ್ಬ, ಚಿಂದಿಯಿಂದ ಚಿತ್ತಾರ, ಚಂದ್ರಕಾಳಿ ಸೀರೆ, ಕಸೂತಿ, ಗೋಡೆಚಿತ್ತಾರ ಲೇಖನಗಳನ್ನು ಮೂಲಸೊಗಡಿನೊಂದಿಗೆ ಬರೆದಿದ್ದಾರೆ. ಅದ್ಭುತ ಕುಂಚಕಲಾವಿದನ ಕೈಚಳಕದಿಂದ ಮೂಡಿದ ಚಿತ್ತಾರ ಬೆರಗು ಮೂಡಿಸಿವೆ. ಇವರಿಗೆ ಅತ್ಯುತ್ತಮ ಶಿಕ್ಷಕ, ಮರಾಠಾ ಸಮಾಜದ ಸಾಹಿತ್ಯ ರತ್ನ, ಸೇವಾ ಪುರಸ್ಕಾರದಂತಹ ಗೌರವ – ಸನ್ಮಾನಗಳು ದಕ್ಕಿವೆ.

– ಡಾ. ಸಣ್ಣವೀರಣ್ಣ ದೊಡ್ಡಮನಿ, ಸಹಾಯಕ ಪ್ರಾಧ್ಯಾಪಕರು, ಭಂಡಾರಿ ಮತ್ತು ರಾಠಿ ಕಾಲೇಜು, ಗುಳೇದಗುಡ್ಡ, ಬಾಗಲಕೋಟ (ಜಿ)







Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru.
Editor : Dr. Siddanagouda Patil. © All rights reserved. Reproduction in whole or in part without permission is prohibited.

